# ಮುಖವಾಡ

ಪದ್ಮಾ ಶ್ರೀಧರ್

ಮಂಜುಶ್ರೀ ಪ್ರಕಾಶನ
16 ನೇ ಮೆಯಿನ್, ಕಾಮಾಕ್ಷಿ ಆಸ್ಪತ್ರೆ ರಸ್ತೆ,
ಸರಸ್ವತಿಪುರಂ, ಮೈಸೂರು 570009

MUKHAVADA- A social novel by Smt. Padma Shreedhar, and published by M/S MANJUSHREE PRAKASHANA, 16th Main, Behind Kuvempu High School, Kamakshi Hospital Road, Saraswathipuram, Mysore 570009.

First publication: 2000.
ISBN-81-86675-11-6


Price: Rs.58/-

D. T. P: KUM. LATHA,
KANIVE COMPUTERS,
MYSORE-9

Impression at:

## ಲೇಖಕಿಯ ಮಾತು

ಮನುಷ್ಯನ ಜೀವನದಲ್ಲಿ ವಿವಾಹ ಅತಿ ಮುಖ್ಯವಾದ, ಹಾಗೂ ಸಹಜವಾದ ಕಾರ್ಯ. ಹಿರಿಯರು ಅತ್ಯಾಸಕ್ತಿಯಿಂದ ತಮ್ಮ ಅಂತಸ್ತಿಗೆ ತಕ್ಕಂತಹ ವಧು/ವರನನ್ನು ಆರಿಸಿ, ವೈಭವವಾಗಿ ನಡೆಸಿದರೂ ಮದುವೆಯೇ, ಅಥವಾ ಹುಡುಗ ಹುಡುಗಿ ಒಬ್ಬರನ್ನೊಬ್ಬರು ಪ್ರೀತಿಸಿ, ಮನೆಯವರ ಒಪ್ಪಿಗೆ ಸಿಗದಿದ್ದರೂ, ಸಿವಿಲ್ ಮ್ಯಾರೇಜ್ ಮಾಡಿಕೊಂಡರೂ, ಅದೂ ಮದುವೆಯೆ. ಆದರೆ, ಎರಡೂ ರೀತಿಯ ವಿವಾಹಗಳಲ್ಲೂ ಸೋಲು/ಗೆಲುವಿನ ಉದಾಹರಣೆ ಗಳಿವೆ. ಹಾಗಾಗಿ ಎಂತಹ ವಿವಾಹ ಯಶಸ್ವಿ ಎಂದು ಹೇಳಲಾಗುವುದಿಲ್ಲ. ಇದಲ್ಲದೆ ಸಮಾಜದಲ್ಲಿ ಬದಲಾವಣೆಗಳು, ಸುಧಾರಣೆಗಳೂ ಬರುತ್ತಲೇ ಇರುತವೆ. ಸಮಾಜ ಸುಧಾರಕರು, ಸಮಾಜ ಸೇವಕರು, ಸರಳ ವಿವಾಹದ ಕಡೆ ಜನರ ಗಮನ ಸೆಳೆಯಲು ಪರಿಶ್ರಮ ಪಡುತ್ತಾರೆ. ಖರ್ಚು, ವೆಚ್ಚ ಶ್ರಮ, ಹಾಗೂ ಕಾಲವನ್ನು ಉಳಿಸುವ ಸರಳ ವಿವಾಹವನ್ನು ನೆರವೇರಿಸಲು ಸಹಾಯಕವಾಗಿ ಅನೇಕ ಸಂಘ ಸಂಸ್ಥೆಗಳೂ ಇವೆ.

ಈ ವಿಷಯದ ಕಡೆ ಗಮನ ಹರಿಸಿದಾಗ, ನಾನಾ ಆಲೋಚನೆಗಳು ಮೂಡುತ್ತವೆ. ಅದೇ ಈ ಕತೆಯ ವಸ್ತು. ವಸ್ತುವಿನೊಂದಿಗೆ ಕಾಣುವ ಎಳೆಗಳಲ್ಲಿ ಒಂದನ್ನು ಆರಿಸಿಕೊಂಡು ಕಲ್ಪನೆಯ ಕೋನದಲ್ಲಿ ನೋಡಿ, ಬರೆದ ಸಮಾಜಿಕ ಕಾದಂಬರಿ **"ಮುಖವಾಡ"**. ಕಥೆಗಾಗಿಯೇ ಸೃಷ್ಟಿಸಿದ ಪಾತ್ರಗಳು, ಆ ಪಾತ್ರಗಳ ಬಾಯಲ್ಲಿ ಆಡಿಸುವ ಮಾತುಗಳು, ಯಾರನ್ನೇ ಆಗಲಿ ಕುರಿತು ಬರೆದುದಲ್ಲ. ಅಥವಾ ಯಾವುದೇ ಸಂಘ ಸಂಸ್ಥೆ ಸಮಾಜಿಕ ಚಟುವಟಿಕೆಗಳನ್ನು ಟೀಕಿಸುವ ಉದ್ದೇಶ ನನ್ನದಲ್ಲ. ಕೇವಲ ಓದುಗರನ್ನು ಮನರಂಜಿಸಲೆಂದು ಬರೆದ ಕೌಟುಂಬಿಕ ಕಾದಂಬರಿ.

ಓದುಗರು, ಈ ಮುಂಚೆಯೂ ನನ್ನ ಕಾದಂಬರಿಗಳನ್ನು ಓದಿ ಮೆಚ್ಚಿದ್ದಾರೆ. ಹಾಗೇ ಈ ಕಾದಂಬರಿಯನ್ನು ಮೆಚ್ಚುವರೆಂಬ ವಿಶ್ವಾಸ ನನಗಿದೆ.

ಈ ಪುಸ್ತಕವನ್ನು ಪ್ರಕಟಿಸಿಕೊಟ್ಟ ಮಂಜುಶ್ರೀ ಪ್ರಕಾಶನದ ಸದಸ್ಯರೆಲ್ಲರಿಗೂ ನನ್ನ ಕೃತಜ್ಞತೆಗಳು.

ವಂದನೆಗಳೊಂದಿಗೆ,

ಉಗಾದಿ, ವಿಕ್ರಮ ಸಂವತ್ಸರ
೫-೪-೨೦೦೦

ತಮ್ಮ ವಿಶ್ವಾಸಿ,
ಪದ್ಮಾ ಶ್ರೀಧರ್,

ಶ್ರೀ

## ಸಮರ್ಪಣೆ

ಗಣಪಗೆ ವಂದಿಸಿ, ವಾಣಿಯ ಸ್ಮರಿಸಿ,
"ಶ್ರೀನಿವಾಸ"ನಿಗೆ ಈ ಕೃತಿಯ ಅರ್ಪಿಸಿ,
ವರವ ನೀಡೆಂದು ಬೇಡುತ ಸ್ತುತಿಸಿ,
ಚರಣ ಪದ್ಮಕೆ ಎರಗುವೆನು ನಮಿಸಿ.

—ಪದ್ಮಾಶ್ರೀಧರ್

# ಮುಖವಾಡ

ಗೋಪಿಗಾಗಿ ಅರ್ಧಗಂಟೆಗಿಂತಲೂ ಹೆಚ್ಚು ಸಮಯದಿಂದ ಕಾಯುತ್ತಾ ಕುಳಿತಿದ್ದ ವನಜಳ ಅಸಹನೆ ಕ್ಷಣ ಕ್ಷಣಕ್ಕೂ ಹೆಚ್ಚುತ್ತಿತ್ತು. "ಥೂ ಇವನೊಬ್ಬ, ಎಷ್ಟು ಹೊತ್ತಾದರೂ ಬರಲೇ ಇಲ್ಲವಲ್ಲ. ಎಷ್ಟೊಂದು ಮಾತನಾಡಬೇಕಾಗಿದೆ" ಎಂದು ತನ್ನಲ್ಲೇ ಹೇಳಿಕೊಂಡು, ಮತ್ತೊಮ್ಮೆ ತನ್ನ ಕೈಗಡಿಯಾರದಲ್ಲಿ ಸಮಯವನ್ನು ನೋಡಿಕೊಂಡಳು. ಪೋಲಿಸ್ ಸ್ಟೇಷನ್‌ನಲ್ಲಿ ಅಷ್ಟು ಹೊತ್ತಿನಿಂದ ಕುಳಿತಿರುವುದು ಮುಜುಗರವೆನಿಸಿತ್ತು. ಎಲ್ಲರೂ ಕುತೂಹಲದಿಂದ ತನ್ನನ್ನೇ ನೋಡುತ್ತಿದ್ದಾರೆಂದೆನಿಸಿತ್ತು.

"ಸಾಹೇಬ್ರು ಬಂದ್ರು... ಸಾಹೇಬ್ರು ಬಂದ್ರು" ಎನ್ನುತ್ತಾ ಎಲ್ಲರೂ ತಮ್ಮ ತಮ್ಮ ಸೀಟಿನಲ್ಲಿ ಸರಿಯಾಗಿ ಕುಳಿತರು. ಗೋಪಿ ಬರುತ್ತಿದ್ದಾನೆಂದು ತಿಳಿದ ವನಜ. ತನ್ನ ಮುಖದ ಸಿಡುಕನ್ನು ಇನ್ನೂ ಹೆಚ್ಚಿಸಿಕೊಂಡು ಬಿಗಿಯಾಗಿ ಕುಳಿತಳು. ತನ್ನ ಕೈಯಲ್ಲಿದ್ದ ಕೋಲನ್ನು ಇನ್ನೊಂದು ಅಂಗೈಯ ಮೇಲೆ ತಾಳ ಬದ್ಧವಾಗಿ ಬಡಿಯುತ್ತಾ ತನ್ನ ಟೇಬಲ್ ಬಳಿಗೆ ಬರುತ್ತಿದ್ದಂತೆಯೇ ಗೋಪಿ ಗಕ್ಕನೇ ನಿಂತ.

"ಅರೆ! ವನಜಾ ನೀನು..... ಇಲ್ಲಿ......" ಎಂದ ಗಾಭರಿಯಿಂದ ಕಣ್ಣರಳಿಸಿ ಅತ್ತಿತ್ತ ನೋಡುತ್ತಾ..... ಹೌದು ನಾನೇ ಎನ್ನುವಂತೆ ವನಜ ಅವನನ್ನೇ ದುರು ದುರು ನೋಡಿದಳು.

"ಏನಾಯ್ತು? ಇಲ್ಲಿಗ್ಯಾಕೆ ಬಂದಿದ್ದೀಯ?" ಮೆತ್ತಗೆ ಕೇಳಿದ.

"ಅರೆಸ್ಟ್ ಆಗಿ ಬಂದಿದ್ದೀನಿ......" ಎಂದಳು ಕಣಲಿ.

ತಕ್ಷಣ ಅವನಿಗೆ ಗೊತ್ತಾಗಿ ಹೋಯ್ತು. ಅವಳಿಗೆ ತುಂಬಾ ಕೋಪಬಂದಿದೆಯೆಂದು. ಅವಳನ್ನು ನಗಿಸಲೆಂದು ತಮಾಷೆಯಾಗಿ ನುಡಿದ.

"ನೀನು ಅರೆಸ್ಟ್ ಆಗಿ ಇರಬೇಕಾದುದ್ದು ಇಲ್ಲಿ...., ಇಲ್ಲಿ.... ಮಾತ್ರ" ಎಂದು ತನ್ನ ಎದೆಯನ್ನು ಮುಟ್ಟಿಕೊಂಡು.

"ಆ ಕಾಲ ಬರುವುದಿಲ್ಲ" ಎಂದಳು ಗಡುಸಾಗಿ.

"ಇವತ್ತೇನೋ ಆಗಿದೆ ನಿನಗೆ. ವಿಪರೀತ ಸಿಟ್ಟು ಬಂದಿದೆ. ಮಾತು ಮಾತಿಗೂ ರೇಗ್ತಿದೀಯಲ್ಲಾ" ಅವಳನ್ನು ನಗಿಸಲು ಪ್ರಯತ್ನಿಸಿ ಸೋತಿದ್ದ.

ದಡಕ್ಕನೆ ಎದ್ದವಳನ್ನೇ ನೋಡಿದ. "ಹೊರಟು ಬಿಟ್ಯಾ?" ಎಂದು ಕೇಳಿದ. ಅವಳು ಪೋಲಿಸ್ ಸ್ಟೇಷನ್‌ಗೆ ಬಂದದ್ದು ಅವನಿಗೂ ಸರಿಎನಿಸಿರಲಿಲ್ಲ.

"ಎಷ್ಟು ಹೊತ್ನಿಂದ ಕೂತಿದೀನಿ.... ನಿನಗಾಗಿ ಕಾಯುತ್ತಾ..... ಬಂದ ಕೆಲಸವಾಯ್ತಲ್ಲಾ ನಾನು ಹೋಗ್ತೀನಿ" ಎಂದಳು ಸೆಡುಕಿನಿಂದ.

"ನಿನ್ನ ಮನೆಯಿಂದ ಇಲ್ಲೀವರೆಗೂ ಬರೀ ನನ್ನನ್ನು ನೋಡೋಕೆ ಅಂತ ಬಂದೆಯಾ? ಹೇಳಿ ಕಳಿಸಿದ್ದರೆ ನಾನೇ ಬರ್ತ್ತಿದ್ದೆ" ಎಂದ ನಗುತ್ತಾ.

"ಓ.... ಷಟಪ್ ಗೋಪಿ" ಎಂದಳು ಬಿರುಸಾಗಿ.

"ಷ್. ಮೆಲ್ಲಗೆ.... ಮೆಲ್ಲಗೆ... ಇಲ್ಲಿ ಎಲ್ಲರೂ ನನ್ನ ಧ್ವನಿಗೇ ಹೆದರ್ತಾರೆ... ನಾನು ನಿನಗೆ ಹೆದರ್ತೀನಿ ಅಂತ ಅವರಿಗೆಲ್ಲಾ ಗೊತ್ತಾಗಿ ಹೋದರೆ... ಆಯ್ತು ನನ್ನ ಗತಿ...." ಮುಗುಳ್ನಕ್ಕ

"ನಾನು ನಿನ್ನನ್ನು ಹೆದರಿಸುಕ್ಕೆ ಬಂದಿಲ್ಲ. ನಾನು ಹೋಗ್ತೀನಿ"

"ಸಾರಿ ಡಿಯರ್.... ಏತಕ್ಕೆ ಬಂದಿದ್ದೀಯ ಅಂತ ನೀನೆ ತಿಳಿಸಿದ್ರೆ ಒಳ್ಳೇದು.... ನಾನು ಸ್ವಲ್ಪ ದಡ್ಡ"

"ನಿನ್ನ ಎದುರಿಗೆ ಇನ್ನೂ ಸ್ವಲ್ಪ ಹೊತ್ತು ನಿಂತಿದ್ರೆ ನಾನೂ ದಡ್ಡಿಯಾಗಿ ಬಿಡ್ತೀನಿ. ನಾನು ಹೊರಟೆ....."

"ಅಂದ್ರೇ.... ನೀನು ಇಲ್ಲಿ... ನನ್ನ ಹತ್ತಿರ ಜಗಳವಾಡುಕ್ಕೆ ಬಂದೀದೀಯಾ ಅಂತಾ ಅನ್ನು"

"ಮತ್ತಿನ್ನೇನು ಅಂತ ತಿಳಿದ್ಕೊಂಡೆ?"

"ಇನ್ನೇನೋ ತಿಳಿದು ಕೊಂಡಿದ್ದೆ. ಈಗ ಇಲ್ಲಿ ಯಾವುದೂ ಸರಿಯಲ್ಲ. ನಡೀ ಹೊರಗಡೆ ಎಲ್ಲಾದ್ರೂ ಕೂತು ಮಾತಾಡೋಣ...."

"ಸಾಹೇಬ್ರಿಗೆ ನನ್ನ ಹತ್ತಿರ ಮಾತಾಡುಕ್ಕೆ, ನನ್ನ ಜತೆ ಬರುಕ್ಕೆ ಬಿಡುವಿದೆಯಾ?" ವ್ಯಂಗ್ಯವಾಗಿ ಕೇಳಿದಳು.

"ವನಜಾ..... ಅತಿಯಾಯ್ತು ನಿಂದು. ಮೊದಲೇ ನೀನು ಇಲ್ಲಿಗೆ ಬಂದಿರುವುದು ಸರಿಯಲ್ಲ.... ನಾವು ಜಗಳವಾಡ್ತಿದೀವಿ ಅಂತ ತಿಳಿದ್ರೆ, ಹಿಂದೆ ಆಡಿಕೊಂಡು ನಗ್ತಾರೆ. ಸ್ವಲ್ಪ ಸುಮ್ಮನಿರ್ತೀಯಾ? ಮೊದಲು ಹೊರಗೆ ಹೋಗೋಣ" ಎಂದು ಗಂಭೀರವಾಗಿ ನುಡಿದಾಗ ಮೆತ್ತಗಾದಳು.

ಟೇಬಲ್ ಮೇಲಿದ್ದ ಗಂಟೆಯನ್ನು ಒತ್ತಿದ. ತಕ್ಷಣವೇ ಒಬ್ಬ ಕಾನ್‌ಸ್ಟೇಬಲ್ ಪ್ರತ್ಯಕ್ಷನಾದ. "ನಾನು ಸ್ವಲ್ಪ ಹೊರಗೆ ಹೋಗ್ತಾ ಇದ್ದೀನಿ. ಯಾರಾದ್ರೂ ಫೋನ್ ಮಾಡಿ ಕೇಳಿದ್ರೆ ಸೈಟ್ ಮೇಲೆ ಹೋಗಿದ್ದಾರೆ ಅಂತ ಹೇಳು"

ಎಂದ. ವನಜ ಅವನ ಕಡೆ ನೋಡಿ ವ್ಯಂಗ್ಯನಗೆ ನಕ್ಕಳು. ಇಬ್ಬರೂ ಹೊರಗೆ ಬಂದರು. ಗೋಪಿ ಪೋಲಿಸ್ ಜೀಪನ್ನು ಹತ್ತಿ, ಅವಳಿಗೂ 'ಹತ್ತು' ಎಂದ. ಅವಳು ಕುಳಿತ ನಂತರ ಅವಳ ಕಡೆ ತಿರುಗಿ ಮುಗುಳ್ನಕ್ಕ.

"ಈಗ ಹೇಳು ವನಜಾ... ಎಲ್ಲಿಗೆ ಹೋಗೋಣ. ನಿನ್ನ ಮನೆಗಾ? ಅಥವಾ ನನ್ನ ಮನೆಗಾ?"

"ನನ್ನ ಮನೆಗೇ ಹೋಗೋಣ"

"ಸರಿ. ನಿನ್ನ ಸಿಟ್ಟು ಇನ್ನೂ ಆರಿಲ್ಲ. ಮಾತೋಶ್ರೀ ಅತ್ತೆಯವರು ಏನು ಅಡಿಗೆ ಮಾಡಿದ್ದಾರೆ? ಊಟ ಹಾಕ್ತೀಯಾ ತಾನೇ ಈ ಬಡವಂಗೆ?"

"ನಿನಗೆ ರುಚಿ ರುಚಿಯಾದ ಊಟ ತಿಂಡಿ ವಿಷಯ ನೆನಪಿಗೆ ಬರುತ್ತೆ... ಹಾಗೇ ನಿನಗೋಸ್ಕರ ನಾನು ಕಾಯ್ತಾ ಇರ್ತೀನಿ ಎನ್ನುವುದು ಏಕೆ ನೆನಪಿಗೆ ಬರುಲ್ಲ?"

"ಛೆ... ಛೆ.... ನಿನ್ನನ್ನು ಮರೆಯಕ್ಕೆ ಸಾಧ್ಯಾನಾ? ಮೊದಲು ನೀನು, ನಂತರ ಉಳಿದುದ್ದು" ಎನ್ನುತ್ತಾ ಜೀಪ್ ಸ್ಟಾರ್ಟ್ ಮಾಡಿದ.

"ಸುಳ್ಳು... ಮೊದಲು ಪೋಲಿಸ್ ನೌಕರಿ ಅಲ್ವಾ?"

"ಅಫ್‌ಕೋರ್ಸ್ ಮೊದಲು ನನ್ನ ಡ್ಯೂಟಿ.... ಅಲ್ಲದೇ ಹೊಟ್ಟೆ ಪಾಡಿಗೆ ಬೇಕೇ ಬೇಕಲ್ಲಾ" ಎಂದ ಕೈಯಾಡಿಸಿ.

"ಅಂತೂ ನಿನಗೆ ಹೊಟ್ಟೆ ತುಂಬಿಸಿ ಕೊಳ್ಳುವ ಆಸೇನೇ...."

"ಏನು ಮಾಡಲಿ? ಎಲ್ಲರಿಗೂ ಅದೇ ಚಿಂತೆ ಅಲ್ವಾ? ಎಂದ ಮುಗುಳ್ನಗುತ್ತಾ."

"ಗೋಪಿ ನೀನು ಸೀರಿಯಸ್ ಆಗುವುದು ಯಾವಾಗ?"

"ಯಾಕೆ? ನಾನು ಹೀಗಿದ್ರೆ ಚೆನ್ನಾಗಿರುಲ್ವಾ?" ಅಷ್ಟರಲ್ಲಿ ವನಜಳ ಮನೆಯ ತಿರುವು ಬಂತು.

"ಇಲ್ಲೇ ನಿಲ್ಲಿಸು ಮೂರಾಯಾ. ಅಮ್ಮ ಕಂಡ್ರೆ ರಂಪ ಮಾಡ್ತಾಳೆ. ಅವಳಿಗೆ ತಿಳಿಯದಂತೆ ಅಲ್ಲಿಗೆ ಬಂದಿದ್ದೆ" ಎಂದಾಗ ಗೋಪಿ ಇದ್ದಕ್ಕಿದ್ದಂತೆ ಗಂಭೀರನಾದ.

"ಯಾಕೆ? ನಿನ್ನನ್ನು ನನ್ನ ಜತೆ ಅಥವಾ ನನ್ನನ್ನು ನಿನ್ನ ಜತೆ ಕಂಡ್ರೆ ನಿಮ್ಮ ಅಮ್ಮನಿಗೆ ರಂಪ ಮಾಡಬೇಕು ಅಂತ ಅನ್ನಿಸುತ್ತಾ? ಮೊದಲೆಲ್ಲಾ ಹೀಗಿರಲಿಲ್ಲವಲ್ಲ"

"ಮೊದಲಿನ ಮಾತು ಬೇರೆ ಗೋಪಿ... ಈಗ ನಮ್ಮ ಮೇಲೆ

ಏನೋ ಅನುಮಾನ ಅಮ್ಮನಿಗೆ..."

"ನಾನು ನಿನ್ನ ಅಮ್ಮನಿಗೆ ಹೇಳ್ತಿನಿ... ಹಾಗೆಲ್ಲ ಅನುಮಾನ ಪಡಬೇಡಿ. ನಾವು ಅಂತಹವರಲ್ಲ ಅಂತ."

"ಪೋಲಿಸರ ಮಾತನ್ನು ನಂಬ್ತಾಳಾ? ಖಂಡಿತಾ ಇಲ್ಲ" ಎಂದು ವನಜ ಕಿಸಕ್ಕನೇ ನಕ್ಕಾಗ ಅವನಿಗೂ ನಗು ಬಂತು.

"ಸಧ್ಯ! ಅಂತೂ ನಕ್ಕೆಯಲ್ಲಾ... ಅದೆಂಥಾ ಕೆಟ್ಟು ಮುಖ ಹಾಕಿಕೊಂಡಿದ್ದೆ ನೀನು" ಎಂದದ್ದೇ ಜೀಪನ್ನು ಮತ್ತೆ ದೊಡ್ಡ ರಸ್ತೆಗೆ ತಿರುಗಿಸಿದ.

"ಏಯ್... ಏಯ್... ಗೋಪಿ, ಜೀಪು ನಿಲ್ಲಿಸು... ಯಾಕೆ ತಿರುಗಿಸಿ ಬಿಟ್ಟೆಯಲ್ಲಾ, ಎಲ್ಲಿಗೆ ಕರೆದುಕೊಂಡು ಹೋಗ್ತಿದೀಯಾ?"

"ಕಿಡ್ನಾಪ್ ಮಾಡಿಕೊಂಡು... ಹೋಗ್ತಾಇದೀನಿ.... ನಿಮ್ಮ ಅಪ್ಪ ಅಮ್ಮನ್ನ ಒಂದಿಷ್ಟು, ಹೆದರಿಸೋಣ" ಎನ್ನುತ್ತಾ ಜೀಪ್ ನಿಲ್ಲಿಸಿ, ಅವಳನ್ನೇ ನೋಡಿದ.

"ಅಬ್ಬಾ.... ಸಧ್ಯ ಅಷ್ಟಾದರೂ ಹೊಳೀತಲ್ಲ ನಿನ್ನ ತಲೆಗೆ...."

"ಏನಂದೆ?.... ನನ್ನನ್ನು ಅಷ್ಟು ದಡ್ಡ ಅಂತ ಅಂದ್ಕೊಂಡಿದ್ಯಾ?"

"ನಿನಗೆ ನೀನೇ... ದಡ್ಡ..... ಜಾಣ.... ಅಂತ ಅದೆಷ್ಟು ಸಲ ಹೇಳಿಕೊಳ್ತೀಯೇ? ಅದಿರಲಿ, ಈಗ ನಿನ್ನ ಪ್ಲಾನ್ ಏನು?"

"ಯಾವ ವಿಷಯ?" ಮತ್ತೆ ತಮಾಷೆ ಮಾಡಿದ.

"ಅಬ್ಬಾ....." ಎಂದಳು ಇಳಿಯುತ್ತಾ.

"ಇಳಿಯಬೇಡ ವನಜಾ.... ಇನ್ನೂ ಸ್ವಲ್ಪ ಹೊತ್ತು ನನ್ನ ಜತೇನೇ ಇರು..." ಕೋರಿಕೆಯ ಧ್ವನಿಯಲ್ಲಿ ಕೇಳಿದ.

"ಏನು ಪ್ರಯೋಜನ? ಪೋಲಿಸ್ ಸ್ಟೇಷನ್‌ನಲ್ಲಿ, ನಡುಬೀದಿಯಲ್ಲಿ ಅಥವಾ ಜೀಪಿನಲ್ಲಿ... ನಾವು ತುಂಬಾ ಹೊತ್ತು ಇರೋಕೆ ಆಗುತ್ತಾ? ನಮ್ಮದೇ ಆದ ಒಂದು ಮನೇನಾದ್ರೂ ಬೇಡ್ವಾ ಇರೋಕೆ?"

"ಆತುರ ಏಕೆ? ಎಲ್ಲಾ ಆಗುತ್ತೆ.... ನಿಧಾನಿಸು."

"ಇನ್ನೂ ನಿಧಾನಿಸುಕ್ಕೆ ಆಗುಲ್ಲ.... ಆತುರ ಬೇಡ ಅಂತೀಯಾ.... ನಿನ್ನ ನಿಧಾನ ನೋಡಿದ್ರೆ.... ನಾನು ನಿನಗೆ ಇಲ್ಲವಾಗ್ತೀನಿ ಅಷ್ಟೆ."

"ಇಷ್ಟು ಸಣ್ಣ ವಿಷಯಕ್ಕೆಲ್ಲಾ ಯಾರಾದ್ರೂ ಆತ್ಮಹತ್ಯೆ ಮಾಡ್ಕೊತಾರಾ?"

ಅವನು ಗೇಲಿ ಮಾಡಿದ್ದು ಅವಳಿಗೆ ತಿಳಿಯಲಿಲ್ಲ. "ನಾನು ಆತ್ಮಹತ್ಯೆ ಮಾಡಿಕೊಳ್ತೀನಿ ಅಂತ ಎಲ್ಲಿ ಹೇಳಿದೆ? ನನ್ನ ಮದುವೆ ವಿಷಯ ಹೇಳಿದೆ.

ನೀನೇ ಹೀಗೇ ತಡ ಮಾಡಿದರೆ, ನಾನು ಬೇರೊಬ್ಬನ್ನ ಮದುವೆ ಮಾಡಿಕೊಂಡು ಹೋಗ್ತೀನಿ ಅಷ್ಟೆ."

"ಸರಿ. ನಿನ್ನಿಷ್ಟ. ನಾನು, ನಿನಗೆ ಅಷ್ಟು ಬೇಡವಾಗಿದ್ದರೆ ಹಾಗೇ ಮಾಡು" ಅಂದ ಅವಳ ಕಡೆ ನೋಡದೇ....

"ನಿನ್ನಿಂದ ಈ ಮಾತನ್ನು ಕೇಳುಕ್ಕೆ ನಾನು ನಿನ್ನನ್ನು ಹುಡುಕ್ಕೊಂಡು ಬರಲಿಲ್ಲ. ಹಾಗೆ ಮಾಡೋದಿದ್ರೆ, ನಿನಗೆ ತಿಳಿಸಲು ಸಹ ಬರುತ್ತಿರಲಿಲ್ಲ."

"ಸರಿ, ಹಾಗಾದ್ರೆ ಏನೇನು ಮಾತನಾಡೋಕೇ ಅಂತ ಬಂದೆ?"

"ನೀನು ಸಮಾಧಾನವಾಗಿ, ಮಧ್ಯೆ ಮಧ್ಯೆ ಬಾಯಿ ಹಾಕದೇ ಕೇಳಿಕೊಳ್ಳುವುದಾದರೆ ಹೇಳ್ತಿನಿ"

"ಓ. ಕೆ. ಮೇಡಂ" ಎಂದು ನಾಟಕೀಯವಾಗಿ ನುಡಿದ. ಇಲ್ಲಿ ನಡುಬೀದಿಯಲ್ಲಿ ಕೂತು ಬೇಡ. ಯಾವುದಾದರೂ ರೆಸ್ಟೋರೆಂಟ್‌ಗೆ ಹೋಗೋಣ ಎನ್ನುತ್ತಾ ಅವಳ ಉತ್ತರಕ್ಕೆ ಕಾಯದೇ ಜೀಪನ್ನು ಮುಂದೆ ಓಡಿಸಿದ. ಅಲ್ಲಿಂದ ಸುಮಾರು ದೂರದಲ್ಲಿದ್ದ ಒಂದು ರೆಸ್ಟೋರೆಂಟ್ ಮುಂದೆ ಜೀಪನ್ನು ನಿಲ್ಲಿಸಿದ. ಇಬ್ಬರೂ ಇಳಿದು ಒಳಗೆ ಹೋದರು. ಫ್ಯಾಮಿಲಿ ರೂಮಿನಲ್ಲಿ ಎದುರು ಬದುರಿಗೆ ಕುಳಿತ ಮೇಲೆ ಕೇಳಿದ.

"ಎಸ್... ವ್ಹಾಟ್ ಈಸ್ ಯುವರ್ ಪ್ರಾಬ್ಲಂ? ಟೆಲ್ ಮಿ" ಎಂದು ಹೇಳಿ, ಬಳಿ ಬಂದು ನಿಂತಿದ್ದ ಬೇರರ್‌ಗೆ ಎರಡು ಐಸ್‌ಕ್ರೀಂಗೆ ಆರ್ಡರ್ ಕೊಟ್ಟ.

"ನಾಳೆ ನಮ್ಮ ಮನೆಗೆ ಒಬ್ಬ ವರ ಬರ್ತಾ ಇದಾನೆ... ನನ್ನನ್ನು ನೋಡುಕ್ಕೆ" ವನಜ ಮೆಲುದನಿಯಲ್ಲಿ ನುಡಿದಳು.

"ನಾನ್ಸೆನ್ಸ್... ಅವನ್ಯಾವನೋ ಏಕೆ ಬರ್ತಾನೆ? ನಾನಿರುವಾಗ?"

"ಗೋಪೀ...."

"ಸಾರಿ..... ನೀನು ನಮ್ಮಿಬ್ಬರ ಪ್ರೀತಿ ಬಗ್ಗೆ ಇನ್ನೂ ತಿಳಿಸಿಲ್ವಾ! ನಿಮ್ಮ ಮನೆಯವರಿಗೆ!"

"ನೀನೇ ಬಂದು ಮಾತಾಡ್ತೀನಿ ಅಂತ ಹೇಳಿದ್ಯಲ್ಲಾ....."

"ಹೌದಲ್ವಾ!..... ಹಾಗಾದ್ರೆ ಯಾವಾಗ ಬಂದು ಮಾತ್ನಾಡ್ಲೀ?"

"ನಿಮ್ಮ ಮನೇಲಿ ನಿಮ್ಮ ತಂದೆ ಹತ್ತಿರ ಮಾತಾಡಿ ಆಯ್ತಾ?"

"ನಮ್ಮ ಮನೇಲಿ.... ನನ್ನ ಮದುವೆ ಪ್ರಸ್ತಾಪಾನೇ ಬಂದಿಲ್ಲವಲ್ಲ. ನಾನೇ ಹೇಗೆ ಆಡಲಿ.

"ನಿಮ್ಮ ಮನೇಲಿ ನಿನ್ನ ಮದುವೆ ಪ್ರಸ್ತಾಪ ಬರುವವರೆಗೂ, ನಾನು ಹೀಗೆ ನಿನಗೋಸ್ಕರ ಕಾಯ್ತಾಕೂತಿರೋಕೆ ಬಿಡ್ತಾರಾ?"

"ಯಾಕೆ ಏನು ಅವಾಂತರವಂತೆ ಅವರಿಗೆ?"

"ನನಗೂ ವಯಸ್ಸಾಯ್ತು. ನನಗೊಬ್ಬಳು ತಂಗೀನೂ ಇದ್ದಾಳೆ. ನನ್ನ ಮದುವೆ ಚಿಂತೆ ಇಲ್ಲದೇ ಇರುತ್ತಾ ಅವರಿಗೆ!'

"ನಿನ್ನ ತಂಗೀಗೇ ಮೊದಲು ಮದುವೆ ಮಾಡೂವಂತೆ ಅವರಿಗೆ ತಿಳಿಸಿಬಿಡು. ನಾವಿಬ್ಬರೂ ಹೀಗೇ ಇದ್ದು ಬಿಡೋಣ."

ಎಲ್ಲಿ! ಇಲ್ಲೇ ಈ ಹೋಟೆಲ್ಲಿನಲ್ಲಾ? ಕೆಣಕಿದಳು.

"ಮತ್ತೆ! ಮದುವೆ ಮಾತು ಅಂದ್ರೆ ಅಷ್ಟು ಅರ್ಜೆಂಟ್ನಲ್ಲಿ ಆಡುಕ್ಕೆ ಆಗುತ್ತಾ ನೀನೇ ಹೇಳು" ನನಗೆ ಸ್ವಲ್ಪ ಟೈಂ ಬೇಕು.

"ನಿನಗಿನ್ನು ಎಷ್ಟು ವರ್ಷಬೇಕು ಹೇಳು. ನನ್ನ ನಿನ್ನ ಸ್ನೇಹ ಶುರುವಾಗಿ ಹತ್ತೂ ವರ್ಷಕ್ಕಿಂತ ಹೆಚ್ಚಾಯ್ತು."

"ಹೌದಲ್ವಾ! ಆ ದಿನಗಳೇ ಚೆನ್ನಾಗಿದ್ದವು ಅಂತನ್ನಿಸುತ್ತೆ ಅಲ್ವಾ?"

"ಆ ಚರಿತ್ರೆ ಈಗ ಬೇಕಿಲ್ಲ. ಸಧ್ಯದ ಪರಿಸ್ಥಿತಿ ಬಗ್ಗೆ ಸ್ವಲ್ಪ ಯೋಚಿಸು. ನಾಳೆ ಒಬ್ಬ ಗಂಡು ಮನೆಗೆ ಬರ್ತಿದ್ದಾನೆ ಅಂತಂದೆ ನಾನು"

"ಅವನನ್ನು ನಾನೂ ನೋಡಬೇಕು ಅಲ್ವಾ?"

"ಹುಂ. ನಾಳೆ ನೀನೂ ಬಾ.... ಅವನನ್ನು ನೋಡು ನಮ್ಮಿಬ್ಬರ ಮದುವೆ ನಡೆದರೆ, ನಮ್ಮಿಬ್ಬರಿಗೂ ಆಶೀರ್ವಾದವನ್ನು ಮಾಡು'

"ಅವನು ನಿನ್ನನ್ನು ನೋಡಿದ ಮಾತ್ರಕ್ಕೆ ನಿಮ್ಮಿಬ್ಬರ ಮದುವೆ ನಡೆದು ಹೋಗುವುದಿಲ್ಲ. ನಾನು ಒಪ್ಪಬೇಡವೇ?"

"ನಿನ್ನ ಒಪ್ಪಿಗೇನ ಯಾರು ಕೇಳ್ತಾರೆ?"

"ಕೇಳಲೇ ಬೇಕು. ಹಾಗೆ ಒಂದು ಪ್ಲಾನ್ ಹುಡುಕ್ತೀನಿ"

"ಬಿಡು ಗೋಪಿ. ಯಾರಿಗೋಸ್ಕರಾನೋ, ಯಾವುದೋ ಒಂದು ಪ್ಲಾನ್ ಹುಡುಕಿದರೇನು ಬಂತು? ನಮ್ಮಿಬ್ಬರ ಮದುವೆ ನಡೆಯುವಂತಹ ಒಂದು ಪ್ಲಾನ್ ಇದ್ದರೆ ಹುಡುಕು. ನನಗೂ ಕಾದೂ ಕಾದೂ ಸಾಕಾಗಿದೆ."

"ಅದನ್ನೇ ಇಷ್ಟು ಹೊತ್ತಿನ ತನಕ ಯೋಚಿಸಿದ್ದು. ನಾಳೆ ಅವನು ಬಂದು ಹೊರಟು ಹೋಗಲಿ. ಆಮೇಲೆ ಮುಂದಿನ ಪ್ಲಾನು ತಾನೇ ತಾನಾಗಿಬರುತ್ತೆ."

"ಅದೇನು ಮಾಡ್ತೀಯೋ ನನಗಂತೂ ನಂಬಿಕೇನೇ ಬರ್ತಿಲ್ಲ"

"ನೋಡ್ತಾ ಇರು. ಎಂತಹ ಪ್ಲಾನ್ ಯೋಚಿಸ್ತೀನಿ ಅಂತ. ನಮ್ಮಪ್ಪ ನಿಮ್ಮಪ್ಪ ಎಲ್ಲರೂ 'ಶಹಭಾಸ್' ಎನ್ನಬೇಕು. ಅಂಥಾ ಪ್ಲಾನ್"

"ನನಗೆ ಭಯವಾಗುತ್ತೆ ಗೋಪಿ. ಒಂದುವೇಳೆ ನಿನ್ನ ಪ್ಲಾನ್ ಸಕ್ಸಸ್ ಆಗದಿದ್ದರೇ"

"ಬಿಡ್ತು ಅನ್ನು.... ನಾನು ನಿನ್ನ ಗಂಡನಾಗುವವನು. ನನ್ನ ಪ್ಲಾನ್ ಸಕ್ಸಸ್ ಆಗದಿದ್ದರೆ ಹೇಗೆ? ಇಂಪಾಸಿಬಲ್...."

"ಹಾಗಾದ್ರೆ.... ನಾನು ನಿನ್ನ ಮಾತನ್ನು ನಂಬಲಾ?"

"ಹೂಂ. ಖಂಡಿತಾ, ಧೈರ್ಯವಾಗಿರು. ನಾಳೆ ಎಷ್ಟು ಹೊತ್ತಿಗೆ ಬರುತ್ತಾನಂತೆ ಆ ವರ ಮಹಾಶಯ?"

"ಬೆಳಿಗ್ಗೆ ಹತ್ತು ಹನ್ನೊಂದರ ಹೊತ್ತಿಗೆ...."

"ಅದಕ್ಕೇ ಮೊದಲೇ ನಾನು ನಿಮ್ಮ ಮನೇಲಿರ್ತೀನಿ ಆಯ್ತಾ?"

"ಅಪ್ಪಾ ಏನಾದ್ರೂ ಅಂದ್ರೆ.... ಬೇಜಾರು ಮಾಡ್ಕೋ ಬೇಡ. ಪ್ಲೀಸ್ ನನಗೋಸ್ಕರ ಸಹಿಸ್ಕೋ...."

"ಅದೇನು ನನಗೆ ಹೊಸದಲ್ಲ. ನಿನಗೋಸ್ಕರ ಎಷ್ಟೆಷ್ಟೋ ಮಾತುಗಳನ್ನು ಸಹಿಸಿದೀನಿ"

"ಸಾರಿ. ಗೋಪಿ– ನಮ್ಮಿಬ್ಬರ ಮದುವೆ ಆದಷ್ಟು ಬೇಗ ಮುಗಿದು ಹೋದರೆ ಇದೆಲ್ಲದಕ್ಕೂ ಫುಲ್‌ಸ್ಟಾಪ್ ಅಲ್ವಾ?"

"ಸರಿ.... ಆದರೆ ನಮ್ಮಪ್ಪ? ಅವರನ್ನು ಮರೆತು ಬಿಟ್ಯಾ?"

"ಅವರನ್ನು ಮರೆಯುಕ್ಕೆ ಸಾಧ್ಯಾನಾ? ಆ ದಪ್ಪ ಮೀಸೆ.... ಆ ಕಪ್ಪು ಕನ್ನಡಕ... ಗತ್ತಿನಿಂದ ಕೂತು ಹೋದ ಆ ಕತ್ತು....."

"ಸಾಕು. ಸಾಕು.... ನನ್ನ ಎದುರಿಗೆ ಇನ್ನೊಬ್ಬ ಗಂಡಸನ್ನು ಅದೆಷ್ಟು ಹೊಗಳ್ತಾ ಇದೀಯಲ್ಲ"

"ನಿಮ್ಮಪ್ಪನ್ನ ವರ್ಣಿಸಿದೆ. ಅದೂ ಸರಿ ಹೊಗುಲ್ವಾ ನಿನಗೆ?"

"ನೋ.... ನೀನು ನನ್ನನ್ನು ಮಾತ್ರ ವರ್ಣಿಸಬೇಕು. ಹೊಗಳಬೇಕು."

ಸರಿಯಪ್ಪಾ ಎನ್ನುತ್ತಾ ಅವನನ್ನೇ ದಿಟ್ಟಿಸಿ, ಮುಗುಳ್ನಕ್ಕಳು. ಅಲ್ಲಾ ಗೋಪಿ ನೀನ್ಯಾಕೆ ಇಷ್ಟು ಚೆನ್ನಾಗಿದೀಯ ನೋಡೋಕೆ?

"ನೀನು ನನ್ನನ್ನು ಮೆಚ್ಚಲಿ... ಅಂತ ಇರಬಹುದು" ವನಜಳ ಮುಖ ಕಂದಿತು. ಅದನ್ನು ಗೋಪಿ ಗಮನಿಸಲಿಲ್ಲ. ಬೇರರ್ ತಂದಿತ್ತ ಐಸ್‌ಕ್ರೀಂ ಕರಗುತ್ತಾ ಬಂದಿತ್ತು.

"ಹುಂ. ಬೇಗ ತಿನ್ನು. ಮನಸ್ಸಂತೂ ತಣ್ಣಗಿಲ್ಲ. ಹೊಟ್ಟೆಯಾದ್ರೂ ತಣ್ಣಗಾಗಲೀ" ಎಂದು ತಿನ್ನಲು ಪ್ರಾರಂಭಿಸಿದ. ವನಜ ಅವನನ್ನೇ ಆಗಾಗ್ಗೆ ನೋಡುತ್ತಾ ಐಸ್‌ಕ್ರೀಂ ನುಂಗಿದಳು.

"ಬರೀ ಹೊಟ್ಟೆ ಬಾಕ! ಸದಾ ತಿನ್ನುವ ಚಪಲ... ಕುಡಿಯುವ ಅಭ್ಯಾಸವೂ ಇದೆಯೋ ಏನೋ? ನಾನು ಇವನನ್ನು ಏಕೆ ಮೆಚ್ಚಿದೆ? ಇವನ ಜಾಲದೊಳಗೆ ಹೇಗೆ ಸಿಕ್ಕಿ ಬಿದ್ದೆ? ಇಷ್ಟು ದಿನಗಳಲ್ಲಿ ಒಂದು ದಿನವಾದರೂ ತಾನಾಗಿಯೇ ನಮ್ಮ ಮದುವೆ ಬಗ್ಗೆ ಮಾತನಾಡಿಲ್ಲ. ಅಂಥಾದ್ದರಲ್ಲಿ ಏನೋ ಪ್ಲಾನ್ ಬೇರೆ ಹುಡುಕ್ತಾನಂತೆ! ಅದೇನ್ಮಾಡ್ತಾನೋ ಮಾಡಲಿ.... ನಾನು ಒಬ್ಬಳೇ ಅಂತೂ ಏನೂ ಮಾಡುವುದಕ್ಕಾಗುವುದಿಲ್ಲವಲ್ಲ".... ಎನ್ನುತ್ತಾ ನಿಟ್ಟುಸಿರು ಬಿಟ್ಟಳು.

"ಯಾಕೇ.. ವನಜಾ... ಬಿಸೀನಾ? ಉಫ್ ಅಂತಿದೀಯಲ್ಲ...."

"ಹೂಂ. ನಿನಗೆ ಎಲ್ಲಾ ತಮಾಷೆಯಾಗೇ ಕಾಣುತ್ತಪ್ಪಾ....'

"ಹಾಗೆ ಕಾಣದಿದ್ದರೆ, ನನಗೆ ಎಷ್ಟು ಕಷ್ಟ ಗೊತ್ತಾ? ನಾನು ಸೇರಿರುವ ಡಿಪಾರ್ಟ್‌ಮೆಂಟ್‌ನಲ್ಲಿ ದಿನಾ ಕಾಣಲು ಸಿಗುವುದು ಬರೀ ಕ್ರಿಮಿನಲ್ಸೇ ಹೊಡೆದಾಟ, ಬಡಿದಾಟ, ಕೊಲೆ, ಸುಲಿಗೆ, ದರೋಡೆ.... ಇದು ಬಿಟ್ಟು ಬೇರೆ ಇಲ್ಲವೇ ಇಲ್ಲ ಆ ಪ್ರಪಂಚದಲ್ಲಿ... ಹಾಗಾಗಿ ಬಿಡುವಿದ್ದಾಗ ನಾನೇ ತಮಾಷೆಗಳನ್ನು ಹುಡುಕಿಕೊಂಡು ಸ್ವಲ್ಪ ಖುಷಿಯಾಗಿರಲು ಪ್ರಯತ್ನಿಸ್ತೀನಿ"

"ಹಾಗಾದ್ರೆ... ಈ ಕೆಲಸಕ್ಕೆ ಏಕೆ ಸೇರಿಕೊಂಡೆ?"

"ಏಕೆ ಅಂದ್ರೆ. ಇದು ನಮ್ಮ ಮನೆ ಪರಂಪರೆ.... ಸಮಾಜ ಸೇವೆ ನಮ್ಮ ಜನ್ಮ ಸಿದ್ಧ ಹಕ್ಕು"

"ನಿಮ್ಮಪ್ಪ ಮಾಡ್ತಿದ್ದಾರಲ್ಲ ಸಾಲದಾ?"

"ಸಾಲದು, ಖಂಡಿತಾ ಸಾಲದು. ಮುಂದೆ ನಮಗೆ ಒಬ್ಬ ಮಗ ಹುಟ್ಟಿದರೆ ನಾನೂ ಅವನನ್ನು ಈ ಡಿಪಾರ್ಟ್‌ಮೆಂಟಿಗೆ ಸೇರಿಸ್ತೀನಿ...."

"ಹೋ... ಹೋ....ನೋಡೋಣ ತಡಿ...." ಕೂಸು ಹುಟ್ಟೋದಕ್ಕೆ ಮುಂಚೆ ಕುಲಾವಿ ಹೊಲಿಸಿದರು ಅಂತಾರಲ್ಲ ಹಾಗೆನ್ನಿಸ್ತಿದೆ ನಿನ್ನ ಮಾತು.

"ಇನ್ನು ಒಂದು ಗಾದೆ ಇದೆ ಗೊತ್ತಾ? ನಮ್ಮಮ್ಮ ಹೇಳ್ತಾ ಇದ್ದುದು ನೆನಪಿಗೆ ಬಂತು...."

"ಗೊತ್ತು ಗೊತ್ತು... ನಿನ್ನಂಥೋರನ್ನ ನೋಡಿ ಬೇಕಾದಷ್ಟು ಗಾದೆಗಳನ್ನು ಸೃಷ್ಟಿಸಿದ್ದಾರೆ. ಇನ್ನೊಂದು ದಿನ ಗಾದೆಗಳನ್ನು ಕುರಿತು ಚರ್ಚೆ ಮಾಡೋಣ.

ಈಗ ಅದಕ್ಕೆ ಸಮಯವಿಲ್ಲ... ಹೊರಡೋಣ್ವಾ?"

"ರೈಟ್.... ನೀನೇನೂ ಯೋಚನೆ ಮಾಡಬೇಡ ವನಜಾ.. ಎಲ್ಲಾ ಸರಿಹೋಗುತ್ತೆ" ಎನ್ನುತ್ತಾ ಅವಳ ಕೈ ತಟ್ಟಿದ. ವನಜ ಬಲವಂತವಾಗಿ ನಕ್ಕಳು.

"ಗುಡ್ ನನ್ನ ಹುಡುಗಿ ಹೀಗೇ ಸದಾ ನಗು ನಗುತ್ತಾ ಇರಬೇಕು. ಐಲೈಕ್ ಇಟ್... ಆಗಲೇ ನನಗೆ ಸ್ಫೂರ್ತಿ" ಎನ್ನುತ್ತಾ ಎದ್ದ. ಜನಜಳೂ ಎದ್ದಳು. ಇಬ್ಬರೂ ಅಲ್ಲಿಂದ ಹೊರಟರು. ಗೋಪಿ ಅವಳನ್ನು ಅವಳ ಮನೆಯ ಹತ್ತಿರ ಇಳಿಸಿದ. ಓ.ಕೆ. ವನಜಾ... ನಥಿಂಗ್ ಟು ವರಿ.... ನಾನಿರುವಾಗ ಅವನು... ಅವನ್ಯಾರೋ ನಿನ್ನನ್ನು ಮದುವೆಯಾಗಲು ಹೇಗೆ ಸಾಧ್ಯ? ನಾನು ಬರಲಾ?

"ಮನೆಯೊಳಕ್ಕೆ ಬರುಲ್ವಾ ಗೋಪಿ?"

"ಬೇಡ. ಬೇಡ.... ನಿಮ್ಮಮ್ಮ ನಮ್ಮಿಬ್ಬರನ್ನು ಒಟ್ಟಿಗೆ ನೋಡಿದರೆ ಒಂದು ರಂಪ ಆಗುತ್ತೆ. ನಮ್ಮ ಪ್ಲಾನ್ ಎಲ್ಲಾ ಹಾಳಾಗುತ್ತೆ...." ಎಂದ ಅವಳ ಕಡೆ ನೋಡಿ ನಗುತ್ತಾ....

"ಹೌದು ಮರತೇ ಬಿಟ್ಟಿದ್ದೆ. ಸರಿ ಅದೇನೇನು ಪ್ಲಾನ್ ಮಾಡಿಕೊಂಡು ಬರ್ತೀಯೋ ಬಂದು ಬಿಡು. ನಾನು ಕಾಯ್ತಾ ಇರ್ತೀನಿ" ಎನ್ನುತ್ತಾ ಸರಸರನೆ ತನ್ನ ಮನೆಕಡೆಗೆ ನಡೆದಳು. ಗೋಪಿ ನಗುತ್ತಾ ಜೀಪ್ ಓಡಿಸಿದ. ಜೀಪ್ ಇಂಜನ್ನಿನ ಸದ್ದು ಕೇಳಿ, ತಾಯಿ ಹೊರಗೆ ಬಂದಾಗ ವನಜ ಪೆಚ್ಚಾದಳು. ಮಗಳು ಹತ್ತಿರಕ್ಕೆ ಬರುವುದನ್ನೇ ಕಾದಿದ್ದ ಸುನಂದ ತರಾಟೆಗೆ ತಗೊಂಡಳು. "ಆ ಗೋಪಿ ಜತೆ ಅಲೆಯಕ್ಕೆ ಹೋಗಿದ್ಯಾ?"

"ಹೂಂ ನಮ್ಮ. ಅವನ ಹತ್ತಿರ ಸ್ವಲ್ಪ ಮಾತ್ನಾಡುವುದಿತ್ತು. ನಾನೇ ಪೋಲಿಸ್ ಸ್ಟೇಷನ್‌ಗೆ ಹೋಗಿದ್ದೆ. ಅವನೇ ಮನೇ ತನಕ ಬಂದು ಬಿಟ್ಟ"

"ನಾಚಿಕೆಯಾಗೋಲ್ಲ ನಿನಗೆ ಪೋಲಿಸ್ ಸ್ಟೇಷನ್ ತನಕ ಅವನನ್ನು ಹುಡುಕ್ಕೊಂಡು ಹೋಗಿದ್ಯಾ? ನಿಮ್ಮಪ್ಪನಿಗೆ ತಿಳಿದರೆ, ನೀನು ಮನೆಯಿಂದ ಹೊರಗೇ ಹೋಗದ ಹಾಗೆ ಮಾಡ್ತಾರೆ ಅಷ್ಟೆ....."

"ನಿನಗೆ ಮಗಳ ಮೇಲೆ ಪ್ರೀತಿಯಿದ್ದರೆ... ಇದನ್ನೆಲ್ಲ ಅಪ್ಪನಿಗೆ ತಿಳಿಸಲೇ ಬೇಡ"

"ಇದನ್ನೆಲ್ಲಾ ಇಲ್ಲೀವರೆಗೆ ಸಹಿಸಿಕೊಂಡಿರುವುದು, ನಿನ್ನ ಮೇಲಿನ ಪ್ರೀತಿಯಿಂದಲೇ ತಿಳಕೋ.... ನಾಳೆ ಒಬ್ಬ ವರನ ಮನೆಯವರು ಬರುತ್ತಿದ್ದಾರೆ

ಅಂತ ಗೊತ್ತಿದ್ದೂ.... ಇವತ್ತೇಕೆ ಗೋಪಿನ್ನ ನೋಡೋಕೆ ಹೋಗಿದ್ದೆ? ಮೊದಲೇ ನಿಮ್ಮಪ್ಪನಿಗೆ ಅವನನ್ನು ಕಂಡರೆ ಆಗುಲ್ಲ"

"ನಂಗೊತ್ತಮ್ಮ.... ಅದಕ್ಕೇ ನಾನೇ ಹೋಗಿ ಅವನಿಗೆ ಎಲ್ಲಾ ಹೇಳಿ ಬಂದೆ ಕಣಮ್ಮಾ..."

"ಎಷ್ಟೇ ಧೈರ್ಯ ನಿನಗೆ? ನಮ್ಮ ಮುಖಕ್ಕೆ ಮಸಿ ಬಳಿಯುವಂತಹ ಕೆಲಸ ಮಾಡ್ತಿದೀಯ ನೀನು...."

"ಇಲ್ಲಮ್ಮಾ ಖಂಡಿತಾ ಇಲ್ಲ. ನಿನಗೆ ನಿನ್ನ ಮಗಳ ಮೇಲೆ ನಂಬಿಕೆ ಇಲ್ವಾ?"

"ಹಾಗಲ್ಲ ವನಜಾ.... ಗೋಪಿ... ಗೋಪಿ ಅಂತ ಯಾಕೆ ಒದ್ದಾಡ್ತಿಯೋ.... ಈಗ ನೀನು ಚಿಕ್ಕವಳಲ್ಲ. ಜನ ಏನಂದು ಕೊಳ್ತಾರೆ?"

"ಆಡಿಕೊಳ್ಳುವ ಜನರು ಹೇಗಿದ್ದರೂ ನಮ್ಮ ಹಿಂದೆ ಆಡಿಕೊಳ್ತಾರೆ. ಅವರ ಬಾಯಿ ಮುಚ್ಚಿಸುವುದಕ್ಕೆ ಆಗುವುದಿಲ್ಲ. ನನ್ನ ಮದುವೆಯಾಗಿ ಹೋದಮೇಲೆ ಹೀಗೆ ಗೋಪಿ ಜತೆ ಮಾತನಾಡುಕ್ಕೆ ಆಗುತ್ತೇನಮ್ಮಾ?"

"ಅದೇನೋ ನಿಮ್ಮ ಸ್ನೇಹ ನನಗೆ ಅರ್ಥವಾಗುಲ್ಲ.... ನೀನೇ ಯಾಕೆ ಹೋಗಬೇಕು? ಅವನು ಬರಬಾರದಾ?"

"ಅವನು ಬರುವುದು... ಅಪ್ಪನಿಗೆ ಇಷ್ಟವಿಲ್ಲವಲ್ಲ.... ಅದಕ್ಕೇ ನಾನೇ ಹೋಗ್ತೀನಿ. ತಪ್ಪಾ?"

"ತಪ್ಪು ಕಣೇ ತಾಯಿ. ಖಂಡಿತಾ ತಪ್ಪು.... ನನ್ನ ಮಾತು ನಿನಗೆ ಅರ್ಥವಾಗುತ್ತಿಲ್ಲವಲ್ಲ. ಹೊಡೆದು ಬಡಿದು ಬುದ್ಧಿ ಹೇಳುವ ವಯಸ್ಸಲ್ಲ ನಿನ್ನದು."

"ಹೊಡೆಸಿಕೊಳ್ಳುವಂತಹ ತಪ್ಪನ್ನು ನಾನು ಮಾಡಿಲ್ಲ.... ಹತ್ತು ಹನ್ನೆರಡು ವರ್ಷಗಳಿಂದ ಗೋಪಿ ನನ್ನ ಸ್ನೇಹಿತ.... ಅದು ನಿಮಗ್ಯಾರಿಗೂ ಅರ್ಥವಾಗುಲ್ಲ." ಎನ್ನುತ್ತಾ ವನಜ ರೂಮಿಗೆ ಹೋಗಿ ಬಾಗಿಲನ್ನು ಹಾಕಿಕೊಂಡಳು. ಎಲ್ಲಾ ತಿಳಿದೂ ಈ ಹುಡುಗಿ ಹೀಗೇಕೆ ಆಡುತ್ತೋ ಅಂತ ಅಂದು ಕೊಂಡಿದ್ದಳು ಸುನಂದ. "ಒಂದು ಗಂಟೆಯಾಗಿದೆ.... ಊಟ ಮಾಡೂವಂತೆ ಬಾ" ಎಂದು ಕೂಗು ಹಾಕಿ, ಅಡಿಗೆ ಮನೆಯ ಕಡೆ ನಡೆದಳು.

ತಾಯಿ ಕೂಗಿದ್ದು ಕೇಳಿಸಿದರೂ, ತನಗಲ್ಲವೇನೋ ಎನುವಂತೆ ಮಚಂದ ಮೇಲೆ ಉರುಳಿಕೊಂಡಳು ವನಜಾ. ಮೊದಲ್ನಿಂದಲೂ ಅಷ್ಟೆ.... ಈ ಅಪ್ಪನಿಗೆ ಗೋಪಿಯನ್ನು ಕಂಡರೆ ಆಗುವುದಿಲ್ಲ. ಯಾಕೋ? ಅವನು ನಮ್ಮ

ಸ್ವಂತ ಪಂಗಡದವನು ಅಲ್ಲ ಅಂತಲೇ? ಅಥವಾ ಅವನು ಪೋಲಿಸ್ ಆಫೀಸರ್ ಆಗಿದಾನೆ ಅಂತಲೇ? ಪೋಲಿಸ್ನೋರು ಕೆಟ್ಟವರು ಅನ್ನುವ ಭಾವನೆ ಈ ಅಪ್ಪನಿಗೆ! ಆದರೆ ಈ ಗೋಪಿ ಎಷ್ಟು ಒಳ್ಳೆಯವನು. ನೋಡೋಕೆ ಕೂಡಾ ಎಷ್ಟು ಚೆನ್ನಾಗಿದ್ದಾನೆ. ಅಪ್ಪನಿಗೆ ಅದೇ ಅಸೂಯೆಯಿರಬಹುದು. ತಾನು ಅಷ್ಟು ಸುಂದರನಲ್ಲವಲ್ಲ ಅಂತ ಅಂದುಕೊಂಡಾಗ ಅವಳಿಗೆ ನಗುಬಂತು. ಎದ್ದು ಕನ್ನಡಿಯ ಮುಂದೆ ನಿಂತು ತನ್ನನ್ನೇ ನೋಡಿಕೊಂಡಳು. ಗೋಪಿಯ ರೂಪಕ್ಕೆ ಹೋಲಿಸಿದರೆ, ನನ್ನ ರೂಪು ಅತೀ ಸಪ್ಪೆ.... ನಾನೇನೋ ಅವನನ್ನು ಮೆಚ್ಚಿದೀನಿ. ಅವನು ನನ್ನನ್ನು ಮೆಚ್ಚಿಲ್ಲದೇ ಇದ್ದರೇ.... ಇಲ್ಲ ಖಂಡಿತಾ ಹಾಗಾಗಲು ಸಾಧ್ಯವಿಲ್ಲ. ಅವನೆಂದೂ ಮಾತಿನಲ್ಲಾಗಲೀ, ನಡೆಯಲ್ಲಾಗಲೀ, ನನ್ನ ರೂಪದ ಬಗ್ಗೆ ಉದಾಸೀನವಾಗಿ ಮಾತನಾಡಿಲ್ಲ. ನಾನೇ ಅವನನ್ನು ಹೊಗಳಿದರೂ, ನಕ್ಕು, ಏನೇನೋ ಆಡಿ, ಆ ಮಾತನ್ನು ಮರೆಸಿ ಬಿಡ್ತಾನೆ. ನನ್ನ ಬಗ್ಗೆ ಅವನಿಗೆ ಖಂಡಿತಾ ಉದಾಸೀನ ಇಲ್ಲ. ಆದರೆ ಅವನೂ ಅವನ ಅಪ್ಪನಿಗೆ ಹೆದರ್ತಾನೆ ಅಂತ ಕಾಣುತ್ತೆ. ನೋಡೋಣ ಅದೇನೋ ಪ್ಲಾನ್ ಮಾಡ್ತೀನಿ ಅಂದಿದಾನಲ್ಲ ಎಂದುಕೊಂಡು ಸೀರೆಯನ್ನು ಬದಲಾಯಿಸುತ್ತಿದ್ದಾಗ, ಮತ್ತೊಮ್ಮೆ ತಾಯಿ ಕರೆದದ್ದು ಕೇಳಿಸಿತು. "ಬಂದೆ...." ಎನ್ನುತ್ತಾ ಬಿಚ್ಚಿ ಹಾಕಿದ ಸೀರೆಯನ್ನು ಅಲ್ಲೇ ಮೂಲೆಗೆ ತಳ್ಳಿ ಹೊರಗೆ ಬಂದಳು.

ತಾಯಿ ಬಡಿಸಿದುದನ್ನು ಮಾತಿಲ್ಲದೆ ಸರಸರನೆ ಉಂಡು, ಕೈ ತೊಳೆದು ಮತ್ತೆ ರೂಮನ್ನು ಸೇರಿ ಬಾಗಿಲನ್ನು ಹಾಕಿಕೊಂಡು, ಮಚಂದ ಮೇಲೆ ಬಿದ್ದುಕೊಂಡಳು. ಮನದಲ್ಲಿ ನಾನಾ ಆಲೋಚನೆಗಳು. ಗೋಪಿಯೇನೋ ಎಲ್ಲಾ ಸರಿಹೋಗುತ್ತೆ ಅನ್ನುವಂತೆ ಹಗುರವಾಗಿ ಮಾತನಾಡಿದ್ದ. ಒಂದುವೇಳೆ ಸರಿಹೋಗದಿದ್ದರೇ....? ತಾನು ಇನ್ನೊಬ್ಬನನ್ನು ಮದುವೆಯಾಗುವ ಪ್ರಸಂಗ ಒದಗಿದರೇ......? ಹಾಗಾಗಬಾರದು, ಹಾಗಾಗಬಾರದು.

ತಾನು ಗೋಪಿಯನ್ನು ಮರೆತು, ಮತ್ತೊಬ್ಬನೊಡನೆ ಸಂಸಾರ ಮಾಡುವುದಂತೂ ಖಂಡಿತಾ ಸಾಧ್ಯವಿಲ್ಲ. ಒಂದುವೇಳೆ ಹಾಗೇನಾದರೂ ಸ್ಥಿತಿ ಒದಗಿದರೆ, ತಾನು ಅವನನ್ನೂ ಬಿಟ್ಟು ಬಂದು ಬಿಡುತ್ತೇನೆ. ಗೋಪಿಯ ನೆನಪಿನಲ್ಲಿ ಈ ಜೀವಮಾನವನ್ನೆಲ್ಲಾ ಕಳೆಯುತ್ತೇನೆ. ಎಂದುಕೊಂಡಾಗ ಗಂಟಲು ಉಬ್ಬಿ ಬಂದಂತಾಯಿತು.

"ನಾನು ಗೋಪಿಯನ್ನು ಮೆಚ್ಚಿದ್ದೇನೆ. ಅವನನ್ನೇ ಪ್ರೀತಿಸುತ್ತಿದ್ದೇನೆ....

ನಾವಿಬ್ಬರೇ ಗಂಡ ಹೆಂಡತಿಯಾರಾಗುವಂತೆ ಅನುಗ್ರಹಿಸಪ್ಪಾ" ಎಂದು ದೇವರನ್ನು ಬೇಡಿಕೊಂಡು, ಕಣ್ಣುಗಳನ್ನು ಮುಚ್ಚಿದಳು. ನಿದ್ದೆ ಬರುವಂತೆ ಇರಲಿಲ್ಲ. ಗೋಪಿಯನ್ನೇ ಕುರಿತು ಚಿಂತಿಸುತ್ತಾ ಹಾಗೇ ಮಲಗಿದ್ದಳು.

ನಾಳೆ ಬರುವ ವರನ ಬಗ್ಗೆ ಗೋಪಿಯೇಕೆ ಹೆಚ್ಚಿಗೆ ತಲೆಕೆಡಿಸಿಕೊಳ್ಳಲಿಲ್ಲ. ಅವನ ಮನಸ್ಸಲ್ಲಿ ಏನಿದೆ? ಎಲ್ಲಾ ಸರಿಹೋಗುತ್ತೆ ಯೋಚಿಸಬೇಡ ಅಂದ. ಆದರೆ ಎಲ್ಲಾ ಸರಿ ಹೋಗುವುದು ಹೇಗೆ? ಈ ಅಪ್ಪನಿಗೆ ಗೋಪಿಯನ್ನು ಕಂಡರೆ ಅಷ್ಟಕ್ಕಷ್ಟೇ.... ಪೋಲಿಸ್ ಇಲಾಖೆಯಲ್ಲಿರುವವರೆಲ್ಲಾ ಕೆಟ್ಟವರು ಅಂತ ಈ ಅಪ್ಪನ ಅಭಿಪ್ರಾಯ. ಹಾಗಾಗಲು ಹೇಗೆ ಸಾಧ್ಯ? ಗೋಪಿ ಕೆಟ್ಟವನಲ್ಲ. ಅಂತ ಅವರಿಗೇಕೆ ಗೊತ್ತಿಲ್ಲ. ನಾನು ಹೇಗೆ ಹೇಳಲಿ?

ಇದುವರೆಗೂ ನಾನು ಅವನನ್ನು ಪ್ರೀತಿಸುತ್ತಿದೀನಿ ಅಂತ ಅಪ್ಪನಿಗಾಗಲೀ, ಅಮ್ಮನಿಗಾಗಲೀ ತಿಳಿಸಿಲ್ಲ. ಅಮ್ಮನಿಗೆ ನನ್ನ ಅವನ ಸ್ನೇಹದ ಬಗ್ಗೆ ಅನುಮಾನ ಬಂದಿರಬಹುದು. ಅದಕ್ಕೇ ಅಪ್ಪನ ಮೇಲೆ ಹಾಕಿ ನನ್ನನ್ನು ಬಯ್ತಾಳೆ. ಆದರೆ ಅಮ್ಮನಿಗೆ ಗೊತ್ತು. ಗೋಪಿ ಕೆಟ್ಟವನಲ್ಲ ಅಂತ. ಅವಳೇಕೆ ಅಪ್ಪನಿಗೆ ಹೇಳಬಾರದು! ಅವಳೂ ಅಪ್ಪನಿಗೆ ಹೆದರುತ್ತಾಳೆ.

ಈ ಗೋಪಿಯೋ, ನಾನು ಏನೂ ಕೇಳದಿದ್ದರೆ ತಾನೂ ಸುಮ್ಮನಾಗಿಬಿಡುತ್ತಾನೆ. ತನ್ನ ಮನೆಯಲ್ಲಿ ತನ್ನ ಮದುವೆಯ ಸುದ್ಧಿ ಬಂದೇ ಇಲ್ಲ ಅಂತ ಸುಮ್ಮನಿದ್ದು ಬಿಟ್ಟಿದ್ದಾನೆ. ಅವನ ಮನೆಯಲ್ಲಿ ಇವನ ಇಷ್ಟಕ್ಕೆ ವಿರೋಧ ಬರಲಾರರು... ಅವನ ತಾಯಿಯಂತೂ ತುಂಬಾ ಒಳ್ಳೆಯವರು ಅಂತ ಅನ್ನಿಸುತ್ತೆ. ಆದರೆ ಅವನ ಅಪ್ಪ? ತುಂಬಾ ಸ್ಟ್ರಿಕ್ಟು. ಮುಖ ನೋಡಿದರೇ ಹೆದರಿಕೆಯಾಗುತ್ತೆ. ಇನ್ನೂ ಮಾತನಾಡಿಸುವುದು ಎಲ್ಲಿ ಬಂತು? ಗೋಪಿಯೂ ಅವರಿಗೆ ಹೆದರುತ್ತಾನೋ ಏನೋ.... ಅದರಿಂದಲೇ, ನನ್ನ ಹತ್ತಿರ ಮುಂಚಿನಂತೆ ಮಾತನಾಡುವುದಿಲ್ಲ. ನನಗೆ ಸಿಗುವುದೇ ಅಪರೂಪವಾಗಿದೆ. ಈಚೆಗೆ ತುಂಬಾ ಬದಲಾಯಿಸಿಹೋಗಿದ್ದಾನೆ ಅಂತನ್ನಿಸುತ್ತೆ. ಏನಾದ್ರೂ ಕೇಳಿದರೆ ಕೆಲಸದ ಒತ್ತಡ ಅದೂ ಇದು ಅಂತ ತಮಾಷೆಯಾಗಿ ಮಾತನಾಡಿ ಮಾತುಮರೆಸಿಬಿಡ್ತಾನೆ. ಒತ್ತಡ ಹೆಚ್ಚಾಗಿರುವ ಈ ಕೆಲಸಕ್ಕೆ ತಾನೇ ಆಸೆಯಿಂದ ಸೇರಿಕೊಂಡೆ ಅಂತಾನೆ. ಆದರೆ ಅವರ ಅಪ್ಪನ ಬಲವಂತವಿರಬಹುದೇ... ಅವರೂ ಅದೇ ಇಲಾಖೆಯಲ್ಲಿ ಆಫೀಸರ್ ಆಗಿದಾರಲ್ಲ....

"ನಮ್ಮ ಅಪ್ಪನಿಗೆ ಒಂದು ತರಹ ಹೆಮ್ಮೆ... ನಾವೇ, ಪೋಲಿಸ್ ಇಲಾಖೆಯವರೇ ಹೆಚ್ಚು ಎಂಬ ಅಭಿಮಾನ." ಅಂತ ಗೋಪಿ ಎಷ್ಟೋ

ಸಲ ಹೇಳಿದಾನೆ. ಹಾಗಾದರೆ ಅವರಿಗೆ ನಾವೆಲ್ಲಾ ಯಾತಕ್ಕೂ ಬೇಡ ಅಂತ ಅವರ ಮನಸ್ನಲ್ಲಿದ್ದು ಗೋಪಿ ಅವರನ್ನು ಒಪ್ಪಿಸಲು ಸಾಧ್ಯವಿಲ್ಲದೇ ಸುಮ್ಮನಾಗಿ ಬಿಟ್ಟಿದಾನೆಯೇ.... ಹಾಗಾದರೆ ನನ್ನ ಗತಿ? ನಾಳೆ ಬಂದಾಗ ಮತ್ತೆ ಕೇಳಿ ಬಿಡಬೇಕು. ಏನೋ ಪ್ಲಾನ್ ಬೇರೆ ಮಾಡ್ತೀನಿಂತ ಅಂದಿದ್ದಾನೆ.... ಸುಳ್ಳೋ, ನಿಜವೋ....? ಏನೋ ಮಾಡುಕ್ಕೆ ಹೋಗಿ ಇನ್ನೇನೋ ಆದರೆ....?"

ಏನಾದರೂ ಸರಿ... ಯಾರು ಏನೇ ಅನ್ನಲಿ, ಏನೇ ಮಾಡಲಿ ನಾನು ಗೋಪಿಯನ್ನಲ್ಲದೇ ಇನ್ಯಾರನ್ನು ಮದುವೆಯಾಗುವುದಿಲ್ಲ. ಇದು ನನ್ನ ತೀರ್ಮಾನ. ಇಲ್ಲದಿದ್ದರೆ ಹೀಗೇ ಇದ್ದು ಬಿಡ್ತೀನಿ. ಗೋಪಿಗೂ ಈ ವಿಷಯ ತಿಳಿಸಿ, ನೀನೂ ಹಾಗೇ ಇದ್ದು ಬಿಡು ಅಂತ ಹೇಳಿ ಒಪ್ಪಿಸಬೇಕು. ನನ್ನನ್ನು ಅವನು ನಿಜವಾಗಿಯೂ ಪ್ರೀತಿಸುವುದಾದರೆ, ನಾನು ಹೇಳಿದಂತೆ ಈ ವಿಷಯದಲ್ಲಾದರೂ ಕೇಳಬೇಕು.

ಪ್ರೀತಿಸ್ತೀನಿ ಅಂತ ಮಾತ್ರ ಹೇಳಿದ್ದಾನೆ. ಆದರೆ ಮದುವೆ ಬಗ್ಗೆ ಮಾತ್ರ ಯಾಕೋ ಹಿಂಜರಿಯುತ್ತಾನೆ. ಧೈರ್ಯವೇ ಇಲ್ಲ. ಯಾಕೊ? ಟ್ರೈನಿಂಗ್‌ಗೆ ಹೋಗುವ ಮೊದಲು ಹೇಳಿದ್ದ. ಕೆಲಸ ಖಾಯಂ ಆದ ಕೂಡಲೇ ಮದುವೆ ಅಂತ ಆದರೆ ಈಗ? ಕೆಲಸ ಖಾಯಂ ಆಗಿ ಎರಡು ವರ್ಷದ ಮೇಲಾಯ್ತು. ಯಾವಾಗ ಮದುವೆ ಮಾತನ್ನೆತ್ತಿದರೂ ಹಗುರವಾಗಿ ಮಾತನಾಡಿಬಿಡ್ತಾನೆ. ಈಗ ನಾಳೆ ಇವನು ಏನು ಮಾಡಬಹುದು? ಅವನ್ಯಾವನೋ ಗಂಡು ಅಂತ ಬರ್ತಾನಲ್ಲ. ಅವನು ನನ್ನನ್ನು ಒಪ್ಪಿಬಿಟ್ಟರೇ... ಆಗ?

ಅವನು ಒಪ್ಪಿದ ಮಾತ್ರಕ್ಕೆ ಮದುವೆ ನೆರವೇರುತ್ತದೆಯೇ? ನನ್ನ ಒಪ್ಪಿಗೆ ಸಿಗುವುದಿಲ್ಲ. ಯಾರು ಏನೇ ಹೇಳಿದರೂ, ನಾನು ಒಪ್ಪಬಾರದು. ಅಪ್ಪನ ಬಲವಂತಕ್ಕೆ ಮಾತ್ರ ಮದುವೆಯಾಗಬಾರದು.

ಥೂ.... ಈ ಮದುವೆಯಾಗುವ ವಯಸ್ಸು ಏಕಾದ್ರೂ ಬಂತೋ... ಹಿಂದಿನಂತೆಯೇ, ಚಿಕ್ಕವರಾಗಿಯೇ, ಇದ್ದಿದ್ದರೆ ಎಷ್ಟೋ ಚೆನ್ನಾಗಿರುತ್ತಿತ್ತು. ಅಂತನ್ನಿಸಿದಾಗ, ಮನಸ್ಸು ಮುದಗೊಂಡಿತು.

ಆ ದಿನ... ಸ್ಕೂಲು ಬಿಟ್ಟು ಎಷ್ಟೋ ಹೊತ್ತಾಗಿದ್ದರೂ ತನ್ನನ್ನು ಕರೆದೊಯ್ಯಲು ಬರಬೇಕಾಗಿದ್ದ ಆಟೋ ಬಂದಿರಲಿಲ್ಲ. ಎಂದಿನಂತೇ ಸಾಯಂಕಾಲದ ಹೊತ್ತಿಗೆ ಶುರುವಾದ ಮಳೆ ಬೇರೆ... ಎಲ್ಲರೂ ಒಬ್ಬೊಬ್ಬರಾಗಿ ಹೊರಟು ಹೋಗಿದ್ದರು..... ಅದೇ ಸಮಯದಲ್ಲಿ ಸ್ಕೂಲಿನ ಮುಂದೆ ಜೀಪುಬಂದು ನಿಂತಿತ್ತು. ಅದೇ ಸ್ಕೂಲಿನಲ್ಲಿ ಓದುತ್ತಿದ್ದ ಗೋಪಿ, ಹಿಂದಿನಿಂದ

ಓಡಿ ಬಂದು ಜೀಪನ್ನೇರಿದ. ಮಳೆಯಲ್ಲಿ ನೆನೆಯುತ್ತಾ ನಿಂತಿದ್ದ ತಮ್ಮ ಕಡೆ ನೋಡಿ ತನ್ನ ತಂದೆಯ ಕಡೆ ತಿರುಗಿ ಏನೋ ಹೇಳಿದ. ಅವರು ತಲೆಯಾಡಿಸಿದ್ದು ಕಂಡಿತ್ತು. ಗೋಪಿ, ಅಲ್ಲಿ ಈ ಆಟೋಗಾಗಿ ಕಾಯುತ್ತಾ ನಿಂತಿದ್ದವರನ್ನೆಲ್ಲ ತನ್ನ ಜೀಪಿನಲ್ಲಿ ಕೂರಿಸಿಕೊಂಡ. ಎಲ್ಲರೂ ಗೋಪಿಯ ಮನೆಯ ಬಳಿ ಇಳಿದರು. ತಮ್ಮ ಮನೆಗಳಿಗೆ ಹೊರಟು ಹೋದರು. ಆದರೆ ಅಲ್ಲಿ ಉಳಿದುಕೊಂಡವಳು ಇವಳೊಬ್ಬಳೇ...

"ಇಲ್ಲಿಂದ ನಿಮ್ಮ ಮನೆಗೆ ಹೋಗುಕ್ಕೆ ಗೊತ್ತಾಗುಲ್ವಾ!" ಗೋಪಿ ಕೇಳಿದಾಗ, ಅವಳಿಗೆ ಅಳು ಬರುವಂತಾಗಿತ್ತು.

"ಇಲ್ಲ.... ಗೊತ್ತಾಗುಲ್ಲ" ಎಂದಿದ್ದಳು.

ನಿಮ್ಮ ಮನೆ ಎಲ್ಲಿ? ಅಡ್ರೆಸ್ ಗೊತ್ತಾ? ತಂದೆ ಎತ್ತರದ ಧ್ವನಿಯಲ್ಲಿ ಕೇಳಿದಾಗ ಅವಳು ಮತ್ತು ಹೆದರಿದ್ದಳು. ತಲೆ ಎತ್ತಲಿಲ್ಲ.

"ನಿನ್ನ ಮಾತನ್ನು ಕೇಳಿಕೊಂಡು, ಯಾರ್‍ಯಾರನ್ನೋ ಜೀಪಿಗೆ ಹತ್ತಿಸಿದರೆ ಹೀಗೇ. ಅವಳ ಮನೆ ಎಲ್ಲಿದೆ ಅಂತ ಅವಳಿಗೇ ಗೊತ್ತಿಲ್ಲ. ಹೋಗಲಿ ಇವಳು ಯಾರು ಅಂತ ನಿನಗೆ ಗೊತ್ತಾ?... ಯಾವ ಕ್ಲಾಸು ಅಂತ ಗೊತ್ತಾ?"

ನಮ್ಮ ಸ್ಕೂಲ್ನಲ್ಲೇ ಓದ್ತಾಇದ್ದಾಳೆ ಅಂತ ಅಷ್ಟೆ ಮಾತ್ರ ಗೊತ್ತು.

"ಎಂಥ ಕೆಲಸ ಮಾಡ್ತೀಯ ನೋಡು. ಹೆಣ್ಣು ಹುಡುಗೀನ ಹೀಗೆಲ್ಲಾ ಕರೆದುಕೊಂಡು ಬಂದು....ಏನು ಫಜೀತಿ.....ಮೊದಲು ಅವಳ ಮನೆಯ ಅಡ್ರೆಸ್ ತಿಳಕೊ... ಹುಡುಕಿ ಬಿಟ್ಟು ಬರೋಣ... ಇನ್ನು ಮೇಲೆ ಮಾತ್ರ ಇಂಥ ದಡ್ಡ ಕೆಲಸ ಮಾಡಬೇಡ" ಎನ್ನುತ್ತಾ ಒಳಗೆ ನಡೆದಿದ್ದರು. ಅಳುತ್ತಿದ್ದವಳನ್ನೇ ನೋಡಿದ ಗೋಪಿ, ಪೆಚ್ಚಾಗಿ, ಒಳ ಹೋಗಿ ತನ್ನ ತಾಯಿಯನ್ನು ಕರೆದುಕೊಂಡು ಬಂದಿದ್ದ

ಗೋಪಿಯ ತಾಯಿ ಅವಳ ಬಳಿಗೆ ಬಂದು ಅವಳ ಕತ್ತನ್ನೆತ್ತಿ ಸಮಾಧಾನ ಹೇಳಿದ್ದರು. "ಅಳಬೇಡ... ಸ್ವಲ್ಪ ಮಳೆ ನಿಲ್ಲಲಿ, ನಿನ್ನ ಮನೆಗೆ ನಿನ್ನನ್ನು ಕರೆದುಕೊಂಡು ಹೋಗಿಬಿಡ್ತೀನಿ ನಿಮ್ಮ ಮನೆಯ ಅಡ್ರೆಸ್ ಹೇಳು. ಗೋಪಿ ನಿನ್ನ ಜತೆಗೆ ಬರ್ತಾನೆ."

"ಇಲ್ಲಿಂದ ಹೇಗೆ ಹೋಗಬೇಕೂಂತ ನನಗೆ ಗೊತ್ತಿಲ್ಲ ಆಂಟೀ.... ದಿನಾ ಆಟೋದವನೇ ಕರೆದುಕೊಂಡು ಹೋಗುತ್ತಿದ್ದ" ಮತ್ತೆ ಬಿಕ್ಕಿದಳು.

"ಹೋಗಲಿ. ಅಳಬೇಡ. ನಿಮ್ಮ ಮನೆ ಹತ್ತಿರ ಯಾವ ಅಂಗಡಿ

ಇದೆ? ನಿಮ್ಮ ರಸ್ತೆ ಹೆಸರೇನು? ನಿಮ್ಮ ತಂದೆ ಹೆಸರೇನು ಹೇಳ್ತೀಯಾ?"

ವನಜ ಮತ್ತು ಹೆದರಿ ಅಳತೊಡಗಿದಾಗ, ಗೋಪಿಯೂ ಹೆದರಿದ. ಅಪ್ಪ ಹೇಳಿದಂತೆ ತಾನು ದಡ್ಡನೇ.... ಉಪಕಾರ ಮಾಡಲು ಹೋಗಿ ಅಪಕಾರ ಮಾಡಿದಂತಾಯ್ತು. ಅವಳ ಮನೆಯವರು ಇವಳನ್ನು ಹುಡುಕುತ್ತಿರಬಹುದೋ ಏನೋ. ನಾವು ವಾಚಮನ್‌ಗೆ ಸಹ ತಿಳಿಸದೇ ಅವಳನ್ನು ಸೀದಾ ಇಲ್ಲಿಗೆ ಕರೆತಂದುದು ತಪ್ಪು ಎಂದು ಕೊಂಡು,

"ಅಮ್ಮಾ.... ಅವಳನ್ನು ಮತ್ತೆ ಸ್ಕೂಲಿನ ಹತ್ತಿರಾನೇ ಬಿಟ್ಟು ಬಿಡೋಣ. ಆಟೋದವನು ತಡವಾಗಿ ಬಂದು, ಹುಡುಕುತ್ತಿರಬಹುದು" ಎಂದಿದ್ದ.

"ಲೇಟಾಗಿ ಹೋಗಿದೆಯಲ್ಲೋ.... ಆಟೋದವನೂ ಬಂದು ಹೊರಟುಹೋಗಿದ್ದರೇ.... ಪಾಪ ಈ ಹುಡುಗಿ ಒಂದೇ ಏನು ಮಾಡುತ್ತೆ? ಎಂಥಾ ಫಜೀತಿ ತಂದಿಟ್ಟೆ ನೋಡು..."

"ನಂಗೇನು ಗೊತ್ತಿತ್ತು ಹೀಗಾಗುತ್ತೆ ಅಂತ... ಉಳಿದವರೆಲ್ಲಾ ಅವರವರ ಪಾಡಿಗೆ ಅವರವರ ಮನೆಗೆ ಹೋಗಲಿಲ್ಲವೇ?...."

"ಏನೋ..... ಆ ಹುಡುಗಿ ಮನೆ ಎಲ್ಲಿದೆ ಅಂತ ತಿಳೀತಾ....."ಅಡ್ರೆಸ್ ಹೇಳ್ತಾ?.... ಗೋಪಿಯ ತಂದೆ ಗಡಸುಧ್ವನಿಯಲ್ಲಿ ವಿಚಾರಿಸಿದಾಗ ವನಜ ಮುಖ ಮುಚ್ಚಿ ಅಳಲಾರಂಭಿಸಿದಳು.

"ಈ ಹುಡುಗಿ ಹೆದರಿಬಿಟ್ಟಿದೆ.... ಆದಕ್ಕೆ ಅಡ್ರೆಸ್ ಮರೆತು ಹೋಗಿದೆ ನಿಧಾನವಾಗಿ ವಿಚಾರಿಸೋಣ...." ಎನ್ನುತ್ತಾ ಆಕೆ ವನಜಳನ್ನು ಮನೆಯೊಳಕ್ಕೆ ಕರೆದುಕೊಂಡು ಹೋದರು.

ಅಷ್ಟರಲ್ಲಿ ಮಳೆ ಮತ್ತೆ ಜೋರಾಗಿತ್ತು. ಗೋಪಿ ಪೆಚ್ಚಾದ.

"ಅಮ್ಮಾ ಈನೇನಮ್ಮಾ ಮಾಡೋದು?" ಇವಳನ್ನ ಹೇಗಮ್ಮಾ ಅವಳ ಮನೆ ತಲುಪಿಸೋದು!

"ಸುಮ್ಮನಿರು, ನೋಡೋಣ." ಎಂದು ಅವನಿಗೆ ಹೇಳಿ, ಒಳಗಿನಿಂದ ಎಲ್ಲರಿಗೂ ಬಿಸಿ ಬಿಸಿ ತಿಂಡಿ ಕಾಫಿಗಳನ್ನು ತಂದಿತ್ತಳು. ಗೋಪಿಯ ತಂದೆ ತಮ್ಮ ಪಾಡಿಗೆ ತಾವು ತಿಂಡಿ ತಿಂದು, ಕಾಫಿ ಕುಡಿದು, ಮತ್ತೆ ಹೊರಟರು.

"ನೋಡು ನಿನ್ನ ಮಗ ಎಷ್ಟು ಜಾಣ ಅಂತ.... ಯಾರೋ ಏನೋ ಅಪರಿಚಿತ ಹುಡುಗಿ.... ನಮ್ಮ ಮೇಲೇ ಅಪವಾದ ಬರುತ್ತೆ ಅಷ್ಟೇ.... ಕೇಳಿದ್ರೆ ಸರಿಯಾಗಿ ಮಾತನಾಡುಲ್ಲ. ಬರೀ ಅತ್ತರೇನು ಪ್ರಯೋಜನ? ಧೈರ್ಯಬೇಕು ಧೈರ್ಯ! ಏನು ಮಕ್ಕಳೋ.... ಸ್ಕೂಲಿಗೆ ಬರುತ್ತವಂತೆ.... ಓದುತ್ತವಂತೆ....

ಬರೆಯುತ್ತವಂತೆ... ಅಪ್ಪನ ಹೆಸರು ಗೊತ್ತಿಲ್ಲ. ಅಮ್ಮನ ಹೆಸರು ಗೊತ್ತಿಲ್ಲ... ಅಡ್ರೆಸ್ ಅಂತೂ ಗೊತ್ತೇ ಇಲ್ಲ.... "

"ಮೈಥಿಲೀ.... ಆ ಹುಡುಗಿ ಅಳು ನಿಲ್ಲಿಸಿದ ಮೇಲೆ, ನೀನು ಎಲ್ಲಾ ವಿಚಾರಿಸಿ ತಿಳಕೋ.... ಅವರ ಮನೆಗೆ ಫೋನ್ ಇದ್ದರೆ, ಫೋನ್ ಮಾಡಿ ತಿಳಿಸು. ಅವರೇ ಬಂದು ಕರೆದುಕೊಂಡು ಹೋಗಲಿ. ಏನು ತಂದೆ ತಾಯಿಯರೋ.... ಅಷ್ಟು ಜವಾಬ್ದಾರಿ ಬೇಡವೇ.... ಮಳೆ ಬರ್ತಾಇದೆ.... ಆಟೋದವನು ಹೋಗಿದಾನೋ ಇಲ್ಲವೋ, ಅಂತ.... ವಿಚಾರಿಸಬೇಡವೇ?"

"ನನಗೆ ಸ್ವಲ್ಪ ಅರ್ಜೆಂಟು ಕೆಲಸವಿದೆ. ಬೇಗ ಬಂದು ಬಿಡ್ತೀನಿ. ಅಷ್ಟರಲ್ಲಿ ಈ ಹುಡುಗಿಯನ್ನು ಕಳಿಸಿರಬೇಕು...." ಎಂದು ಆಜ್ಞೆಮಾಡಿ ಆತ ಹೊರಟು ಹೋಗಿದ್ದರು.

ಗಂಡ ಅನ್ನುವಂತೆಯೇ ಆಯಿತು. ಯಾರ ಮನೆಯ ಹುಡುಗಿಯೋ ಏನೋ.... ಅವರುಗಳೂ, ಹುಡುಗಿ ಸ್ಕೂಲಿನಿಂದ ಬಂದಿಲ್ಲ ಅಂತ ಎಷ್ಟು ಗಾಭರಿಯಾಗಿರಬಹುದು. ಇಲ್ಲಿ ನೋಡಿದರೆ ಈ ಹುಡುಗಿ ಅಳ್ತಾಇದೆ. ಹೊಟ್ಟೆ ಹಸಿದಿದೆಯೋ ಏನೋ ಎಂದುಕೊಂಡು, ವನಜಳ ಮಗ್ಗುಲಲ್ಲಿ ಕುಳಿತು,

"ತಿಂಡಿ ತಿನ್ನಲ್ವಾ? ಹೊಟ್ಟೆ ಹಸೀತಿಲ್ವಾ? ಅಂತ ಕೇಳಿದಳು."

"ನಾನು ನಮ್ಮ ಮನೆಗೆ ಹೋಗಬೇಕು...."

"ಹೋಗೂವಂತೆ.... ಅಂಕಲ್, ಬಂದು ಕರೆದುಕೊಂಡು ಹೋಗ್ತಾರೆ. ಮೊದಲು ಕಾಫಿಕುಡಿದು, ತಿಂಡಿತಿನ್ನು.... ಮಳೆ ನಿಲ್ಲಬೇಡವಾ?"

ವನಜ ಅಳು ನಿಲ್ಲಿಸಿದಳು. ಆಂಟಿ ಒಳ್ಳೆಯವರು ಅಂತನ್ನಿಸಿತು. ಬೆಚ್ಚಗಾಗಿದ್ದ ಕಾಫಿಯನ್ನು ಸೊರಸೊರನೆ ಹೀರಿದಳು. ನಿಧಾನವಾಗಿ ತಿಂಡಿಯನ್ನು ತಿಂದು ಮುಗಿಸಿದಳು.

"ಗುಡ್‌ಗರ್ಲ್... ನೋಡಿದ್ಯಾ.... ಈಗ ಎಷ್ಟು ಶಕ್ತಿ ಬಂತು ಅಂತ... ನಿನ್ನ ಹೆಸರೇನು ಮರೀ... ಯಾವ ಕ್ಲಾಸಿನಲ್ಲಿ ಓದ್ತಾ ಇದೀಯಾ?"

"ವನಜಾ... ಅಂತ ನಾಲ್ಕನೇ ಸ್ಟ್ಯಾಂಡರ್ಡ್‌ನಲ್ಲಿ ಓದ್ತಾಇದೀನಿ"

"ನಿಮ್ಮ ತಂದೆಯ ಹೆಸರು ಹೇಳ್ತಿಯಾ? ಮನೆ ಎಲ್ಲಿದೆ?"

"ಹುಂ, ಸದಾನಂದರಾವ್ ಅಂತ.... ಮನೆ ಗಾಂಧಿ ಬಜಾರ್‌ನಲ್ಲಿದೆ."

"ಗಾಂಧಿ ಬಜಾರಾ..." ಎನ್ನುತ್ತಾ ಮೈಥಿಲಿ ಚಿಂತಿಸಿದಳು. ಇವರು ಇರುವ ಬಡಾವಣೆಯಿಂದ ಗಾಂಧಿಬಜಾರ್ ಹತ್ತಿರವಲ್ಲ... ಎಂಥ

ಎಡವಟ್ಟಾಯ್ತಲ್ಲಾ? ಈ ಹುಡುಗಿಯನ್ನು ಮನೆಗೆ ಸಲುಪಿಸುವುದು ಹೇಗೆ? ಮಳೆಯಲ್ಲಿ ನೆಂದು, ಯೂನಿಫಾರಂ ಬಟ್ಟೆಯಲ್ಲಾ ಒದ್ದೆಯಾಗಿದೆ. ಬಿಚ್ಚಿ ಬದಲಾಯಿಸೋಣ ಎಂದರೆ ನಮ್ಮ ಮನೆಯಲ್ಲಿ ಹೆಣ್ಣು ಮಕ್ಕಳ ಬಟ್ಟೆ ಇಲ್ಲ. ಚಳಿಗೆ ಆ ಹುಡುಗಿ ನಡುಗುತ್ತಿದೆ. ಏನು ಮಾಡಲಿ? ಏನು ಮಾಡಲಿ? ಅಂತ ತವಕದಿಂದ ಒದ್ದಾಡುತ್ತಿದ್ದಾಗ, ಮುಂಬಾಗಿಲ ಬಳಿ ಯಾರೋ ಬಂದು ನಿಂತಂತಾಗಿತ್ತು. 'ಯಾರು?' ಎನ್ನುತ್ತಾ ಹೊರಗೆ ಬಂದಳು.

"ನಾನು ಸದಾನಂದ ಅಂತ.... ನಮ್ಮ ಮಗಳು ವನಜಾ ಇಲ್ಲಿಗೆ ಬಂದಿದ್ದಾಳೆ ಅಂತ ತಿಳೀತು."

"ಹೌದು, ಹೌದು, ಬನ್ನಿ ನಿಮ್ಮ ಮಗಳು ತುಂಬಾ ಹೆದರಿ ಬಿಟ್ಟದ್ದಳು. ಸಧ್ಯ ಬಂದ್ರಲ್ಲಾ... ಅವಳು ಇಲ್ಲಿದ್ದಾಳೆ ಅಂತ ನಿಮಗೆ ಹೇಗೆ ತಿಳೀತು?" ಅಷ್ಟರಲ್ಲಿ ತಂದೆಯ ಧ್ವನಿ ಕೇಳಿ ವನಜಾ ಅವರ ಹಿಂದೆ ಬಂದು ನಿಂತಿದ್ದಳು. ಅಪ್ಪಾ..... ಎಂದು ಕರೆದಿದ್ದಳು ಗೆಲುವಿನಿಂದ....

"ನೋಡಿದ್ರಾ... ನಿಮ್ಮ ಮಗಳಿಗೆ ಎಷ್ಟು ಖುಷಿಯಾಯಿತು ನಿಮ್ಮನ್ನು ಕಂಡು. ಹೇಗೆ ಬಂದಿದ್ದೀರಿ? ಮಳೆ ಬರ್ತಿದೆಯಲ್ಲಾ?"

"ನಡೆದುಕೊಂಡು ಬಂದಿದ್ದೀನಿ.... ಆಟೋದವನು ಬರಲಿಲ್ಲವಲ್ಲ ಗಾಭರಿಯಾಯ್ತು. ಇಲ್ಲೇ ಮುಂದಿನ ರಸ್ತೆಯಲ್ಲಿ ಒಬ್ಬ ಹುಡುಗ ಇದೇ ಆಟೋದಲ್ಲಿ ಬರ್ತಾನೆ. ಅವನ ಮನೆಯಲ್ಲಿ ವಿಚಾರಿಸೋಣ ಅಂತ ಬಂದೆ. ಅಲ್ಲಿ ವಿಷಯ ತಿಳೀತು. ಆ ಹುಡುಗನೇ ನಿಮ್ಮಮನೆ ಅಡ್ರೆಸ್ ಹೇಳಿದ. ನಾವಿನ್ನು ಬರ್ತೀವಿ"

"ಪಾಪ, ನಿಮಗೆ ತುಂಬಾ ಹೆದರಿಕೆಯಾಗಿರಬೇಕು ಅಲ್ವಾ! ಇದು ನಮ್ಮ ಗೋಪಿ ಮಾಡಿದ ಕೆಲಸ... ಎಲ್ಲರ ಜತೆ ಇವಳನ್ನೂ ಕರೆದುಕೊಂಡು ಬಂದು ಬಿಟ್ಟದಾನೆ.... ನೀವು ಏನೂ ತಿಳಿದುಕೊಳ್ಳಬೇಡಿ...."

"ಛೆ! ತಿಳಿದುಕೊಳ್ಳೋದೇನು ಬಂತು? ನಾನು ಸ್ಕೂಲಿನ ಹತ್ತಿರ ಹೋದಾಗ, ಇವಳು ಇಲ್ಲದ್ದನ್ನು ಕಂಡು ಗಾಭರಿಯಾದದ್ದೇನೋ ನಿಜ. ಆದರೆ ಕ್ಷೇಮವಾಗಿದಾಳಲ್ಲ." ನಿಮಗೆ ಥ್ಯಾಂಕ್ಸ್ ಹೇಳಬೇಕು. ನಿಮ್ಮ ಯಜಮಾನರು ಮನೇಲಿಲ್ವೇ.....?

"ಇಲ್ಲ ಅವರು ಹೊರಗೆಲ್ಲೋ ಹೋಗಿದ್ದಾರೆ...."

"ಸರಿ. ಅವರಿಗೂ ಥ್ಯಾಂಕ್ಸ್ ಹೇಳಿ ಬಿಡಿ. ಈ ಕಾರಣದಿಂದ ನಮಗೆ ನಿಮ್ಮಗಳ ಪರಿಚಯವಾದಂತಾಯಿತು. ನಾನು ಬರಲೇನಯ್ಯಾ..." ಎನ್ನುತ್ತಾ

ಗೋಪಿಯ ಕಡೆ ನೋಡಿ, ವನಜಳ ಕೈ ಹಿಡಿದು, ಅವಳ ಸ್ಕೂಲ್‌ಬ್ಯಾಗನ್ನು ಹೆಗಲಿಗೇರಿಸಿ ಹೊರಟರು.

"ಹೋಗಿ ಬನ್ನಿ. ಮತ್ತೆಂದಾದರೂ ನಿಮ್ಮ ಮಗಳನ್ನು ಕರೆದುಕೊಂಡು ಬನ್ನಿ. ನಮಗೂ ನಿಮ್ಮ ಸ್ನೇಹವಾದದ್ದು ಸಂತೋಷ. ಹಾಗೇ ನಿಮ್ಮ ಶ್ರೀಮತಿಯವರನ್ನೂ ಕರೆದುಕೊಂಡು ಬನ್ನಿ"

"ಆಗಲಿ... ನೀವುಗಳೂ ಎಂದಾದರೊಮ್ಮೆ ಬನ್ನಿ" ಎಂದು ನುಡಿದಿದ್ದರು.

"ವನಜಾ ಆಗಾಗ ಬರ್ತಾ ಇರಮ್ಮಾ" ಎಂದು ಅವಳಗಲ್ಲ ಸವರಿ ಹೇಳಿದಾಗ, ವನಜಾ ಸಂತೋಷದಿಂದ 'ಹೂಂ' ಎಂದಿದ್ದಳು. ಕೈ ಬೀಸಿ 'ಟಾಟಾ' ಮಾಡಿದಳು.

ಅಂದಿನಿಂದ ಎರಡೂ ಮನೆಯವರ ಸ್ನೇಹ ಸ್ವಲ್ಪ ಮಟ್ಟಿಗೆ ಬೆಳೆದಿತ್ತು. ವನಜಳ ತಾಯಿ ಸುನಂದ ವನಜ ಹಾಗೂ ಜಲಜರನ್ನು ಕರೆದುಕೊಂಡು ಅವರ ಮನೆಗೆ ಬಂದು ಪರಿಚಯ ಮಾಡಿಕೊಂಡು ಸ್ವಲ್ಪ ಹೊತ್ತು ಮಾತನಾಡಿ ನಂತರ ತನ್ನ ಮನೆಗೆ ಅವರುಗಳನ್ನು ಆಹ್ವಾನಿಸಿ ಹೋಗಿದ್ದಳು.

"ಗೋಕುಲಾಷ್ಟಮಿ" ಹಬ್ಬದಂದು ಮೈಥಿಲಿ ಮರೆಯದೇ ಹೊಸ ಸ್ನೇಹಿತರನ್ನು ಕರೆದಿದ್ದಳು. ಆತ್ಮೀಯವಾಗಿ ಮಾತನಾಡಿ, ಆದಾರಾತಿಥ್ಯ ನೀಡಿದ ಮೈಥಿಲಿಯನ್ನು ಸುನಂದ ಬಹುವಾಗಿ ಮೆಚ್ಚಿಕೊಂಡಳು. ಆಗಾಗ್ಗೆ ತಾನೇ ತನ್ನ ಮಕ್ಕಳೊಡನೆ ಅವರ ಮನೆಗೆ ಬರುತ್ತಿದ್ದಳು. ಒಂದು ಬಾರಿ ಮೈಥಿಲಿ, ತಮಾಷೆಯಿಂದ "ವನಜಳನ್ನು ನಮಗೆ ಕೊಟ್ಟು ಬಿಡಿ ನಿಮಗೆ ಹೇಗೂ ಇನ್ನೊಬ್ಬಳು ಮಗಳಿದ್ದಾಳಲ್ಲ" ಎಂದಾಗ ಸುನಂದ ನಕ್ಕು ಸುಮ್ಮನಾಗಿದ್ದಳು.

"ನಮ್ಮ ಗೋಪಿಗೆ ವನಜನ್ನ ಕಂಡರೆ ಏನೋ ಅಕ್ಕರೆ, ನಮ್ಮ ಮನೇಲಿ ಬೇರೆ ಹೆಣ್ಣು ಮಕ್ಕಳಿಲ್ಲ. ಗೋಪಿ ಜತೆಗೆ ಯಾರೂ ಇಲ್ಲ. ಅವನು ಒಂಟಿ" ಹಾಗೆ ಸುನಂದ ನುಡಿದಾಗ, ಧ್ವನಿಯಲ್ಲಿ ವ್ಯಥೆ ಅಡಗಿದೆ ಅಂತನ್ನಿಸಿತ್ತು. ಆದರೆ ಏನು ಉತ್ತರಿಸಬೇಕೆಂದು ತಿಳಿಯದೇ ಸುಮ್ಮನಾಗಿದ್ದಳು.

ನಂತರ ಗೌರೀ ಹಬ್ಬದಲ್ಲಿ ಸುನಂದ ಮರೆಯದೇ ಮೈಥಿಲಿಯನ್ನು ತಮ್ಮ ಮನೆಗೆ ಆಹ್ವಾನಿಸಿದ್ದಳು. ಅರಿಶಿನ ಕುಂಕುಮ ಎಲೆ ಅಡಿಕೆಯ ಜತೆ ರವಿಕೆ ಬಣವನ್ನು ಇಟ್ಟು ಕೊಟ್ಟಳು. ಮೈಥಿಲಿ ಸಂತೋಷದಿಂದ ಸ್ವೀಕರಿಸಿದಾಗ, ಸುನಂದಳಿಗೆ ಹಿತವೆನಿಸಿತ್ತು. ಅವಳು ವಾಪಸ್ಸು ಹೋದಮೇಲೆ ಸದಾನಂದ ಹೆಂಡತಿಯ ಮೇಲೆ ರೇಗಿದ್ದ.

"ಅವರು ನಮ್ಮ ಸ್ವಂತ ಜನವಲ್ಲ ಒಂದಲ್ಲ. ಅವಳಿಗೇಕೆ ಅಷ್ಟು ಉಪಚಾರ?"

"ನೋಡಿ, ನೀವು ಹೀಗೆಲ್ಲಾ ಮಾತನಾಡಬೇಡಿ. ಇದು ನನ್ನ ಇಷ್ಟ. ಈ ಮಾತಿಗೆಲ್ಲ ಗಂಡಸರು ಬಾಯಿ ಹಾಕಿಕೊಂಡು ಬರಬಾರದು"

"ಹಾಗಂತ! ನಾನು ಈ ಮನೆ ಯಾಜಮಾನ! ನಾನೇಕೆ ಹೇಳಬಾರದು?"

"ಆಕೆ ನನ್ನ ಸ್ನೇಹಿತೆ. ಗೋಕುಲಾಷ್ಟಮಿಗೆ ನಮ್ಮನ್ನೆಲ್ಲ ಕರೆದಿರಲಿಲ್ಲವೆ? ನಾನು ಹೋಗಿರಲಿಲ್ಲವೆ? ಎಷ್ಟು ಬಗೆಯ ತಿಂಡಿ ಕೊಟ್ಟಿದ್ದು?"

"ಆ ಹಾಹಾ... ಎಂದೂ ತಿಂಡೀನೇ ಕಂಡಿಲ್ಲ. ತಿಂಡಿಯಂತೆ ತಿಂಡಿ! ಅವರುಗಳ ಸ್ನೇಹ ನಮಗೆ ಬೇಡಾಂತ ಅಂದ್ನಲ್ಲ. ಅಷ್ಟು ಸಾಕು."

"ನೀವು ಆಫೀಸ್ನಲ್ಲಿ ಎಂತೆಂಥೋರ ಜತೆ ಸ್ನೇಹ ಮಾಡ್ತೀರೋ? ನಾನು ಅದನ್ನೆಲ್ಲಾ ಎಂದಾದ್ರೂ ಕೇಳಿದೀನಾ?"

"ನಾನು ಹೊರಗೆ ದುಡಿಯುವ ಗಂಡಸು. ನನ್ನ ವಿಚಾರ ಬೇರೆ"

"ನಾವು ಮನೇಲೇ ಇದ್ದ ಮಾತ್ರಕ್ಕೆ ನಮಗೇನೂ ವ್ಯಕ್ತಿತ್ವ ಇಲ್ಲ ಅಂತ ಅಂದ್ಕೋಬೇಡಿ. ನನಗೆ ಆಕೆ ತುಂಬಾ ಹಿಡಿಸಿದ್ದಾಳೆ. ನನಗೆ ಅವಳ ಸ್ನೇಹ ಬೇಕು. ನೀವು ಏನೂ ಬೇಕಾದ್ರೂ ಮಾಡ್ಕೊಳ್ಳಿ.... ನನಗೆ ಗೊತ್ತು ನಿಮಗೆ ಏನೋ ಹೆದರಿಕೆ. ಆತ ಪೋಲಿಸ್ ಅಧಿಕಾರಿ ಅಂತ..."

"ಅವನು ಪೋಲಿಸ್ ಅಧಿಕಾರಿಯಾದರೆ ನನಗೇನು ಹೆದರಿಕೆ? ನಾನೇನು ಕಳ್ಳನೇ? ಚೆನ್ನಾಗಿದೆ ನಿನ್ನ ಮಾತು? ನಾನು ಇದುವರೆಗೂ ಆತನ ಮುಖಾನೇ ನೋಡಿಲ್ಲ. ಆತನ್ನ ಕಟ್ಟಿಕೊಂಡು ನನಗೇನಾಗ ಬೇಕಾಗಿದೆ?"

"ನಂಗೊತ್ತು ನಿಮಗೆ ಯಾರೂ ಬೇಕಿಲ್ಲ. ಅದಕ್ಕೇ ಹೀಗಾಡ್ತೀರಿ. ಹೀಗೇ ಇದ್ರೆ ಹೇಗೆ? ನಮಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಮುಂದೆ ಅವರುಗಳ ಮದುವೆ ಮಾಡಬೇಡವೆ? ಆಗಲೂ ಯಾರೂ ಬೇಡಾ ಅಂತೀರಾ?"

"ಆ ಮಾತು ಈಗೇಕೆ? ಮೊದಲು ಸುಮ್ಮನೇ ಬಡಿಸು. ಹೊತ್ತಾಗಿದೆ. ಊಟಕ್ಕೆ ಬನ್ರೇ......" ಮಕ್ಕಳ ಮೇಲೆ ಕೂಗು ಹಾಕಿದ.

"ಸರಿ. ಸರಿ. ಹೊತ್ತು ಹೊತ್ತಿಗೆ ತಿಂದು ತೇಗಿ ಮಲಗಿದರೆ ಆಯ್ತು ಮುಗೀತು ನಿಮ್ಮ ದಿನಚರಿ. ಜನಬೇಡ, ಜಾತ್ರೆಬೇಡ.... ನೀವೆಂತಹ ಜನ?" ಸುನಂದ ಹಂಗಿಸಿ ನುಡಿದಾಗ ಅವನಿಗೆ ಇನ್ನೂ ರೇಗಿತ್ತು.

"ಗೋತ್ತಾಯ್ತಲ್ಲ ನಾವು ಎಂಥ ಜನಾಂತ. ನನ್ನ ಜತೆ ಇರೋಕೆ ಇಷ್ಟವಿದ್ರೆ ಇರು. ಇಲ್ಲದಿದ್ರೆ ಎಲ್ಲಿಗಾದ್ರೂ ಹೋಗು"

"ಹೋಗ್ತಿದ್ದೆ. ಆದರೆ ಹುಟ್ಟವೆಯಲ್ಲ ಈ ಹೆಣ್ಣುಗಳು! ನಾನು ಹೊರಟು ಹೋದರೆ, ತಬ್ಬಲಿಗಳಾಗಿ ಹೋಗುತ್ತವೆ ಅಂತ ಸಹಿಸಿಕೊಂಡಿದೀನಿ."

"ದಿನಾ ಇದ್ದದ್ದೇ ನಿನ್ನ ಗೋಳು" ಎನ್ನುತ್ತಾ ತನ್ನ ಪಾಡಿಗೆ ತಾನು ಊಟ ಮುಗಿಸಿ ಕೈ ತೊಳೆದು ಮಲಗಿದ. ಸುನಂದ ಅವನನ್ನೇ ತಿರಸ್ಕಾರದಿಂದ ನೋಡಿ ಮಕ್ಕಳಿಗೆ ಬಿಡಿಸಿ, ತಾನೂ ಊಟ ಮಾಡಿದಳು. ಗಂಡನ ವರ್ತನೆ ಅವಳಿಗೆ ಎಂದೂ ಅರ್ಥವಾಗಿರಲಿಲ್ಲ.

ದಿನಗಳು ಸರಿದವು ಕಾಲ ಉರುಳಿತು. ಗೋಪಿ ಆ ಸ್ಕೂಲನ್ನು ಬಿಟ್ಟು ಬೇರೆ ಸ್ಕೂಲಿಗೆ ಸೇರಿದ್ದ. ಹೈಸ್ಕೂಲಿನಲ್ಲಿ ಓದುತ್ತಿದ್ದ. ವನಜಾ ಆಗಾಗ್ಗೆ ತನ್ನ ತಂಗಿಯೊಡನೆ ಅವರ ಮನೆಗೆ ಬರುತ್ತಿದ್ದಳು. ಗೋಪಿ ನಗುನಗುತ್ತಾ ಅವರುಗಳನ್ನು ಮಾತನಾಡಿಸುತ್ತಿದ್ದ. ಕೇರಂ, ಕವಡೆ, ಚೌಕಾಬಾರ ಆಟವನ್ನು ಆಂಟಿ ಹೇಳಿಕೊಡುತ್ತಿದ್ದರು. ಎಲ್ಲರೂ ಒಟ್ಟಿಗೇ ಆಡುತ್ತಿದ್ದರು.

ಇಷ್ಟಾದರೂ ಗೋಪಿಯ ತಂದೆ ಪರಶುರಾಮ್‌ಗೆ ಮಾತ್ರ ಇದ್ಯಾವುದರ ಬಗ್ಗೆ ಹೆಚ್ಚಿಗೆ ಗಮನವಿಲ್ಲ. ವನಜಳನ್ನು ಬಹುಶಃ ಆ ಮೊದಲ ದಿನವೇ ಮರೆತು ಬಿಟಿದ್ದ. ತಾನಾಯಿತು ತನ್ನ ಪೋಲಿಸ್ ಕೆಲಸವಾಯಿತು ಎಂದಷ್ಟೇ ಆತನ ದಿನಚರಿ. ಆ ಹುಡುಗಿಯರು ಯಾರು ಎಂದು ಕುತೂಹಲಕ್ಕಾದರೂ ಕೇಳುವ ಗೋಜಿಗೇ ಹೋಗಿರಲಿಲ್ಲ. ಯಾರೋ ಪಕ್ಕದ ಮನೆ ಮಕ್ಕಳನ್ನು ಮೈಥಿಲಿ ಕರೆದು ಕೂರಿಸಿಕೊಂಡಿದ್ದಾಳೆ ಎಂಬ ಧೋರಣೆ. ಗೋಪಿಯ ಕೀಟಲೆಯ ಮಾತುಗಳಾಗಲೀ, ಮೈಥಿಲಿ ಕೊಡುತ್ತಿದ್ದ ತಿಂಡಿಯನ್ನು ಕುರುಕುರು ಸದ್ದು ಮಾಡಿದುದಾಗಲೀ, ಆತನ ಕಿವಿಯನ್ನು ತಲುಪುತ್ತಿರಲಿಲ್ಲ. ಮೈಥಿಲಿ ಯಥೇಚ್ಛವಾಗಿ ತಿಂಡಿಯನ್ನು ತಿನ್ನಿಸಿ, ಮುದ್ದಿಸುತ್ತಿದ್ದಳು. ಗೋಪಿಗೆ ಖುಷಿಯಾಗುತ್ತಿತ್ತು.

ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಉತ್ತಮ ಅಂಕಗಳನ್ನು ಪಡೆದು ಪ್ರಥಮ ಶ್ರೇಣಿಯಲ್ಲಿ ಗೋಪಿ ಪಾಸಾದ ವಿಚಾರವನ್ನು ತಿಳಿದ ವನಜ, ತಾನೇ ಪಾಸಾದಷ್ಟು ಸಂತಸದಿಂದ ಕುಣಿದಿದ್ದಳು. ಈಗ ಅವಳು ಸ್ವಲ್ಪ ದೊಡ್ಡವಳಾಗಿದ್ದರಿಂದ ಮೊದಲಿನದತೆ ಗೋಪಿಯ ಮನೆಗೆ ಪದೇ ಪದೇ ಹೋಗುತ್ತಿರಲಿಲ್ಲ. ತಂಗಿಯನ್ನು ಕಳುಹಿಸಿ ಅಲ್ಲಿಯ ವಿಷಯವನ್ನು ತಿಳಿದುಕೊಳ್ಳುತ್ತಿದ್ದು.

"ಆಂಟಿ ಏನು ತಿಂಡಿ ಕೊಟ್ಟರು? ಗೋಪಿ ಏನು ಮಾಡ್ತಿ ನಾನ್ಯಾಕೆ ಬರಲಿಲ್ಲ, ಅಂತ ಕೇಳಿದ್ರಾ" ಇತ್ಯಾದಿ ಇತ್ಯಾದಿ.

"ಹೂಂ, ಹೈಸ್ಕೂಲಿಗೆ ಬಂದು ಬಿಟ್ಟೆ ಅಂತ ಅವಳಿಗೆ ಜಂಭ ಬಂದು ಬಿಟ್ಟಿದೆ ಅಂತ, ಗೋಪಿ ಆಂಟಿಯ ಹತ್ತಿರ ಹೇಳ್ತಿದ್ದ"

"ಹೌದೇನೇ.... ನಾಳೇನೇ ಅವರ ಮನೆಗೆ ಹೋಗಿ, ವನಜಂಗೇನೂ ಜಂಭ ಬಂದಿಲ್ಲ ಅಂತ ಹೇಳಿಬಿಟ್ಟು ಬಾ"

"ಥೂ ಹೋಗೇ.... ನಾನ್ಯಾಕೆ ಹೇಳಲಿ? ನೀನೇ ಹೋಗಿ ಹೇಳಿ ಬಾ..."

"ಹೋಗ್ಬಹುದಾಗಿತ್ತು. ಆದರೆ ಈ ಅಮ್ಮ ಬೇಡಾ ಅಂತಾಳಲ್ಲ... ನಾನು ಒಂದು ಕಾಗದ ಬರೆದು ಕೊಡ್ತಿನಿ. ಅದನ್ನಾದ್ರೂ ಗೋಪಿಗೆ ಕೊಡ್ತೀಯಾ!"

"ಹೂಂ, ಅದೇನು ಬರೀತಿಯೋ ಬರೆದು ಕೊಡು, ಈಗಲೇ ಹೋಗಿ ಕೊಟ್ಟು ಬರ್ತೀನಿ" ಅಕ್ಕ ಗೀಚಿ ಕೊಟ್ಟ ಕಾಗದವನ್ನು ಹಿಡಿದು, ಜಲಜ ಮತ್ತೆ ಗೋಪಿಯ ಮನೆಗೆ ಓಡಿದ್ದಳು.

"ನಂಗೇನೂ ಜಂಭ ಇಲ್ಲ ಓದೋದಿಕ್ಕೆ ತುಂಬಾ ಪಾಠ ಇದೆ. ಓದದೇ ಇದ್ದರೆ ಫೇಲಾಗ್ತೀಯ ಅಂತ ಅಮ್ಮ ಸದಾ ಬೈತಾಳೆ. ಅದಕ್ಕೆ ನಾನು ಬಂದಿಲ್ಲ ಅಷ್ಟೇ. ನೀನು ಹೇಗಿದೀಯ! ಫಸ್ಟ್ ಕ್ಲಾಸ್‌ನಲ್ಲಿ ಪಾಸಾದಕ್ಕೆ ನಿನಗೆ ಜಂಭ ಬಂದಿದೆ ಅಂತ ನನಗನ್ನಿಸುತ್ತಪ್ಪಾ....... "

ಗೋಪಿ ಆ ಕಾಗದವನ್ನು ಓದಿ, ನಕ್ಕು ಅದನ್ನು ತನ್ನ ತಾಯಿಯ ಕೈಗಿತ್ತ. ಆಕೆಯೂ ಓದಿ ನಕ್ಕಳು. ವನಜಾ ಈ ನಡುವೆ ಮೊದಲಿನಂತೆ ಬರದೇ ಇರುವುದಕ್ಕೆ ಆಕೆ ಕಾರಣವನ್ನು ಊಹಿಸಿದ್ದಳು. ಆದರೂ ವನಜಳನ್ನು ನೋಡಿ ತುಂಬಾ ದಿನಗಳಾಗಿವೆ ಅಂತೆನಿಸಿ, ಗೋಪಿಯನ್ನು ಹೊರಡಿಸಿಕೊಂಡು ಅವರ ಮನೆಗೆ ಬಂದಳು.

ಬಾಗಿಲಿನಷ್ಟೆ ಎತ್ತರಕ್ಕೆ ನಿಂತಿದ್ದ ಗೋಪಿಯನ್ನು ಕಂಡು ವನಜ ಬಾಗಿಲ ಮರೆಯಲ್ಲೇ ನಿಂತಳು. ಗೋಪಿ ಅವಳಿಗೆ ಕೇಳುವಂತೆ ಜಲಜಳಿಗೆ ಹೇಳಿದ್ದ.

"ಎಲ್ಲೇ ನಿಮ್ಮಕ್ಕ? ನಂಗೇನೂ ಜಂಭವಿಲ್ಲ ಅಂತಾಳೆ. ನಾನೇ ನಿಮ್ಮ ಮನೆಗೆ ಬಂದ್ರೂ ಪತ್ತೆ ಇಲ್ಲ. ಕರೀ ಅವಳನ್ನು" ಮೈಥಿಲಿ ನಕ್ಕಾಗ, ಸುನಂದಳಿಗೆ ಮುಜುಗರವಾಗಿತ್ತು. ಈಗ ಇವರಿಬ್ಬರೂ ಮೊದಲಿನಂತೆ ಚಿಕ್ಕವರಲ್ಲ. ತನ್ನ ಗಂಡನಿಗೆ ತಿಳಿದರೆ ರಾದ್ಧಾಂತವಾಗುವುದು ಖಂಡಿತಾ ಎಂದು ಹೆದರಿ ಮೈಥಿಲಿಯನ್ನೇ ನೋಡಿದಳು. ಈಕೆಗೆ ಎಷ್ಟು ಸಲೀಸು. ಬರೀ ಒಬ್ಬ ಗಂಡು ಹುಡುಗ ಅದಕ್ಕೇ ಹಾಯಾಗಿದ್ದಾಳೆ. ಹಗುರವಾಗಿ ನಕ್ಕು ನಲಿಯುತ್ತಾಳೆ ಅಂತನ್ನಿಸಿದಾಗ, ಅಸೂಯೆಯ ಕಳೆ ಮೂಡಿತ್ತು. ಆದರೂ ಅದನ್ನು

ತೋರಗೊಡದೇ ಅಡಿಗೆ ಮನೆ ಹೊಕ್ಕಳು.

ಗೋಪಿ ಆಡಿದ ಮಾತು ವನಜಳಿಗೆ ಕೇಳಿಸಿತ್ತು. ಅವನು ಅಷ್ಟು ಆಡಿದ ಮೇಲೆ ಹೊರಗೆ ಬರದೇ ಇರಲು ಸಾಧ್ಯವಿರಲಿಲ್ಲ. ಈದಿನ ಅವನಾಗಿಯೆ ತನ್ನ ಮನೆಗೆ ಬಂದಿರುವಾಗ, ತಾನು ಅವನೆದುರಿಗೆ ಬರದಿದ್ದರೆ, ಮುಂದೆ ತಾನೆಂದೂ ಅವನನ್ನು ನೋಡಲು ಸಾಧ್ಯವಾಗದಿದ್ದರೇ.... ಎನ್ನುವ ಆತಂಕವುಂಟಾಯಿತು. ಧೈರ್ಯಮಾಡಿ, ತಂಗಿಯನ್ನು ಮುಂದು ಮಾಡಿಕೊಂಡು ಹೊರಗೆ ಬಂದಳು.

ನಾಚಿಕೆಯಿಂದ ತಲೆ ತಗ್ಗಿಸಿ, ನೆಲವನ್ನೇ ನೋಡುತ್ತಿರುವವಳನ್ನು ಕಂಡು ಗೋಪಿಗೆ ತಮಾಷೆ ಅಂತನ್ನಿಸಿತ್ತು. ವನಜಳ ಮುಜುಗರ ಮೈಥಿಲಿಗೆ ಅರ್ಥವಾಗಿತ್ತು. ಹೆಣ್ಣು ಹುಡುಗಿಯರು ಎಷ್ಟು ಬೇಗ ಬೆಳೆದು ಬಿಡುತ್ತಾರೆ? ಮೊನ್ನೆ ಮೊನ್ನೆ ಫ್ರಾಕ್ ತೊಟ್ಟು, ಕಿಲಕಿಲ ನಗುತ್ತಾ ಆಡುತ್ತಾ ಇದ್ದ ವನಜ ಈಗ ತುಂಬಾ ಬದಲಾಗಿ ಹೋಗಿದ್ದಾಳೆ. ಮುಖದ ಕಳೆ ಬದಲಾಗಿದೆ. ವಯಸ್ಸಿಗೆ ಸಹಜವಾದ ದೇಹ ಬೆಳವಣಿಗೆ ಅವಳನ್ನಿಗ ಯುವತಿಯನ್ನಾಗಿ ಮಾಡಿದೆ. ಅವಳೆದುರಿಗೆ ಈಗ ನಮ್ಮ ಗೋಪಿಯೇ ಚಿಕ್ಕವನು ಅಂತನ್ನಿಸುತ್ತಿದೆ ಎಂದುಕೊಂಡು, ಗೋಪಿಯ ಕಡೆ ತಿರುಗಿ ನೋಡಿದಳು. ಅವನ ಜಲಜಳನ್ನು ಕೀಟಲೆ ಮಾಡಿ ನಗಿಸುತ್ತಿದ್ದ. ನನ್ನ ಮಗ ಇನ್ನೂ ಮುಗ್ಧ ಎಂದು ಕೊಂಡು, ವನಜಳ ಕಡೆ ತಿರುಗಿ ಅವಳನ್ನೇ ಆಗಾಗ್ಗೆ ನೋಡಿದಳು. ಸುನಂದ ತಂದಿಟ್ಟ ಕಾಫಿಯನ್ನು ಕುಡಿದು, ತಾಯಿ ಮಗ ಹೊರಟರು. ಸುನಂದ ನಿರಾಳವಾದಳು. ಸಧ್ಯ ಗಂಡ ಮನೆಗೆ ಬರುವುದಕ್ಕೆ ಮುಂಚೆ ಅವರಿಬ್ಬರೂ ಹೊರಟರಲ್ಲ ಅಂತನ್ನಿಸಿತ್ತು.

ಕಾಲೇಜಿಗೆ ಸೇರಿಕೊಂಡ ಗೋಪಿಗೆ ಈಗ ಹೊಸವಾತಾವರಣ, ಹೊಸ ಸ್ನೇಹಿತರು, ಹಾಗಾಗಿ ಅವನು ವನಜಳ ಬಗ್ಗೆ ಏನಾದರೂ ಯೋಚಿಸುವುದಕ್ಕೂ ಅವನಿಗೆ ಬಿಡುವಿಲ್ಲ. ಇದನ್ನರಿತ ವನಜ ತಾನೇ ಏನಾದರೂ ನೆವ ಹೂಡಿ ತನ್ನ ತಂಗಿಯೊಡನೆ ಗೋಪಿಯ ಮನೆಗೆ ಬರುತ್ತಿದ್ದಳು. ಗೋಪಿಯ ಓದು, ಆಟ ಪಾಠಗಳ ಬಗ್ಗೆ ಮೈಥಿಲಿ ಹೇಳುತ್ತಿದ್ದುದನ್ನು ಆಸಕ್ತಿಯಿಂದ ಕೇಳಿಸಿಕೊಳ್ಳುತ್ತಿದ್ದಳು. ಒಂದೊಂದು ಸಾರಿ ಗೋಪಿಯೂ ಬಂದು ಸೇರುತ್ತಿದ್ದ. ತಾಯಿಯ ಮಾತಿಗೆ ಒಪ್ಪಿ, ಹುಡುಗಿಯರನ್ನು ಮನೇ ತನಕ ತಲುಪಿಸಿ ಬರುತ್ತಿದ್ದ. ಅವನೊಂದಿಗೆ ತುಂಬಾ ಮಾತನಾಡಬೇಕು ಅಂತನ್ನಿಸಿದರೂ ಎಷ್ಟೋ ಮಾತುಗಳು ವನಜಳ ಗಂಟಲಿನೊಳಗೇ ಉಳಿದು ಬಿಡುತ್ತಿದ್ದವು.

ಜಲಜಳೊಡನೆ ಅವನು ಏನೇನೋ ಹರಟುತ್ತಾ ಬರುತ್ತಿದ್ದರೆ, ತಾನೇ ಜಲಜಳಾಗಿರುತ್ತಿದ್ದರೇ ಅಂತನ್ನಿಸದೇ ಇರುತ್ತಿರಲಿಲ್ಲ.

ಗೋಪಿ ಪಿ.ಯು.ಸಿ. ಯ ನಂತರ ಬಿ. ಎಸ್ಸಿಗೆ ಸೇರಿದ. ವನಜ ಕಾಲೇಜಿಗೆ ಸೇರಿದ್ದಳು, ಒಂದೇ ಕಾಲೇಜು ಆದುದರಿಂದ ದಿನಾ ಒಬ್ಬರನ್ನೊಬ್ಬರು ನೋಡುತ್ತಿದ್ದರು. ಪರಿಚಯವಿದ್ದುದರಿಂದ ಕಂಡಾಗ ಏನಾದರೂ ಮಾತನಾಡು ತ್ತಿದ್ದರು. ಗೋಪಿ ಜಲಜಳ ಬಗ್ಗೆ ಕೇಳಿದರೆ, ವನಜ, ಆಂಟಿಯ ಬಗ್ಗೆ ಕೇಳು ತ್ತಿದ್ದಳು. ಕ್ರಮೇಣ ಈ ಸ್ನೇಹ ಇನ್ನೂ ಗಾಢವಾಯಿತು.

ವನಜ ಗೋಪಿಯ ಬಗ್ಗೆ ಮನೆಯಲ್ಲಿ ಯಾರೊಡನೆಯೂ ಏನನ್ನೂ ಹೇಳುತ್ತಿರಲಿಲ್ಲ. ಗೋಪಿ ಮಾತ್ರ ತಾಯಿಯೊಡನೆ ಎಲ್ಲವನ್ನು ಹೇಳುತ್ತಿದ್ದ. ತಾಯಿ ಹೇಳಿದುದನ್ನು ವನಜಳಿಗೆ ಹೇಳುತ್ತಿದ್ದ. ವನಜಳಿಗೆ ಆಂಟಿಯ ಮೇಲಿನ ಪ್ರೀತಿ ಹೆಚ್ಚಾಯಿತು. ತಾಯಿಗೆ ತಿಳಿಯದಂತೆ ಅವರ ಮನೆಗೆ ಬಂದು, ಸ್ವಲ್ಪ ಹೊತ್ತು ಹರಟೆ ಹೊಡೆದು ತಿಂಡಿ ತಿಂದು ಸಂತಸದಿಂದ ಕಾಲ ಕಳೆದು ತನ್ನ ಮನೆಗೆ ವಾಪಸ್ಸು ಹೋಗುತ್ತಿದ್ದಳು. ಆಕೆಯ ವಿಶ್ವಾಸಕಂಡು, ತನ್ನ ಅಪ್ಪ ಅಮ್ಮ ಏಕೆ ಹೀಗಿಲ್ಲ ಎಂದು ರೇಗಿ ಹೋಗುತ್ತಿತ್ತು.

ಮನೆ ಕೆಲಸಕಾರ್ಯ ಮಾಡದೇ, ಕನ್ನಡಿಯ ಮುಂದೆ ನಿಂತು ಅಲಂಕರಿಸಿ ಕೊಂಡು ತನ್ನನ್ನು ತಾನೇ ನೋಡಿಕೊಂಡು ಕಾಲ ಕಳೆಯುವ ಮಗಳ ಮೇಲೆ ಸುನಂದಳಿಗೆ ಅಸಹನೆ.

"ಇನ್ನೂ ಮುಗಿಲಿಲ್ವೇನೇ ನಿನ್ನ ಅಲಂಕಾರ? ಅಬ್ಬಬ್ಬಾ ಅದೆಷ್ಟು ಹೊತ್ತು? ಹಾಗೆಲ್ಲಾ ಹುಡುಗೀರು ಕನ್ನಡಿ ಮುಂದೆ ಹೆಚ್ಚು ಹೊತ್ತು ನಿಂತ್ಕೋಬಾರದು. ಚೆನ್ನಾಗಿರುಲ್ಲ"

"ಏನಾಗುತ್ತಮ್ಮ? ನೀಟಾಗಿ ಡ್ರೆಸ್ ಮಾಡಿಕೊಂಡರೆ ತಪ್ಪಾ?"

"ತಪ್ಪು ನಿಂದಲ್ಲ ಕಣೇ.... ನಾನು ಹೇಳ್ತಿನಲ್ಲ ನಿನಗೆ. ಅದೇ ತಪ್ಪು ಬೇರೆ ಕೆಲಸಾನೇ ಇಲ್ವಾ ಅಂತಂದೆ. ಬೇಗ ಬಂದು ನನಗೆ ಒಂದಿಷ್ಟು ಸಹಾಯ ಮಾಡು ಎಲ್ಲಾ ನಾನೊಬ್ಬಳೇ ಮಾಡ್ಕೊಬೇಕಾ?"

"ಜಲಜೀಗೆ ಹೇಳಮ್ಮ. ನಂಗೆ ಬೇಕಾದಷ್ಟು ನೋಟ್ಸ್ ಬರೆಯೋದಿದೆ. ಎನ್ನುತ್ತಾ ತುಂಬ ಮುಖ ತಿರುಗಿಸಿದಾಗ ಸುನಂದ ರೇಗಿದ್ದಳು."

"ನೀನೇ ಏನೂ ಸಹಾಯ ಮಾಡುಲ್ಲ. ಇನ್ನು ನಿನಗಿಂತ ಚಿಕ್ಕೋಳು ಅವಳು. ಮನೇಲಲ್ಲಿ ಇರ್ತಾಳೆ. ಬೀದೀಲಿ ಆಟ ಆಡುತ್ತಿರಬಹುದೇನೋ"

"ಬಿಡಮ್ಮಾ.... ಇದನ್ನೆಲ್ಲಾ ದಿನಾ ಆಡ್ತಾನೇ ಇರ್ತೀಯ.... ಜಲಜೀನ

ಕರೀತೀನಿ ತಡಿ..... " ಎನ್ನುತ್ತಾ ಹೊರಗೆ ನಡೆದಾಗ ಆಕೆ ತಬ್ಬಿಬ್ಬು.

ಸ್ವಲ್ಪ ಹೊತ್ತಿನ ನಂತರ ಒಳಗೆ ಬಂದ ಜಲಜ, "ಅಮ್ಮಾ... ನಾನೂ ಅಕ್ಕ ಇಬ್ಬರೂ ಬಳೆ ಅಂಗಡಿಗೆ ಹೋಗಿ ಬರ್ತೀವಮ್ಮಾ" ಎನ್ನುತ್ತಾ ತನ್ನ ಚಪ್ಪಲಿಯನ್ನು ಮೆಟ್ಟಿ, ಅಕ್ಕನ ಹೊಸ ಚಪ್ಪಲಿಯನ್ನು ಕೈಯಲ್ಲಿ ಹಿಡಿದು ನಡೆದಾಗ ಸುನಂದ ತಲೆ ಚಚ್ಚಿಕೊಂಡಳು.

ಈ ವನಜ ಮಿತಿ ಮೀರಿ ಹೋಗುತ್ತಿದ್ದಾಳೆ. ಅಪ್ಪನಿಗೆ ತಿಳಿದರೆ ಚೆನ್ನಾಗಿ ಬೈಯಬಹುದು. ರಂಪ ರಾದ್ಧಾಂತ ಮಾಡಬಹುದು. ಅಷ್ಟಾದರೂ ತಿಳಿಯಬೇಡವೇ ಇವಳಿಗೆ? ಅಂತ ಅಂದುಕೊಂಡಳು ಎಷ್ಟೋ ಹೊತ್ತಿನ ನಂತರ, ಅಕ್ಕ ತಂಗಿಯರಿಬ್ಬರೂ, ವಾಪಸ್ಸಾದಾಗ, ಅವರಿಬ್ಬರ ಕೈಯಲ್ಲಿ ಯಾವ ಪ್ಯಾಕೆಟ್ಟು ಇಲ್ಲದುದನ್ನು ಗಮನಿಸಿದಳು.

"ಜಲಜೀ ಬಾಯಿಲ್ಲಿ...... ಎಲ್ಲಿಗೆ ಹೋಗಿದ್ರಿ ಇಬ್ಬರೂ?"

"ಗೋಪಿ ಮನೆಗಮ್ಮಾ...."

"ಬಳೆ ಅಂಗಡಿಗೆ ಅಂತ ಹೇಳಿದ್ದೆಯಲ್ಲೇ...."

"ಅಕ್ಕ ದುಡ್ಡನ್ನೇ ತಂದಿರಲಿಲ್ಲ..... ಅದಕ್ಕೇ ಹಾಗೇ ಗೋಪಿ ಮನೆಗೆ ಹೋಗಿದ್ದೆವು." ಸುನಂದ ಪೆಚ್ಚಾದಳು. ಏನನ್ನೂ ಆಡದೇ ತನ್ನ ಪಾಡಿಗೆ ತಾನು ಒಳಗೆ ಹೊರಟು ಹೋದಳು. ಇದ್ಯಾವುದನ್ನು ವನಜ ಗಮನಿಸಲಲಿಲ್ಲ. ಅವಳ ಯೊಚನೆಗಳೇ ಬೇರೆ. ಗೋಪಿಯ ತಾಯಿ ಎಷ್ಟು ಒಳ್ಳೆಯವರು... ಮೊದಲಿನಂತೆಯೇ ಪ್ರೀತಿ ವಿಶ್ವಾಸದಿಂದ ಮಾತಾಡಿಸ್ತಾರೆ. ಈ ಅಮ್ಮ ಅವರಿಂದ ಕಲಿಯಬೇಕು ಅಂತಂದುಕೊಂಡಳು. ಕಾಲೇಜಿನ ವ್ಯಾಸಂಗ ಸ್ನೇಹಿತೆಯರ ಜತೆ ಹರಟೆ, ಆಗಾಗ್ಗೆ ಗೋಪಿಯ ಮನೆಯ ಭೇಟಿ, ಇವುಗಳಲ್ಲಿ ಅವಳ ದಿನಚರಿ ಕಳೆದು ಹೋಗುತ್ತಿತ್ತು.

ಈ ನಡುವೆ, ಗೋಪಿಯ ಜತೆಯಲ್ಲಿ ಮಾತಾಡುವಾಗ, ಅವನು ಎಷ್ಟು ಚೆನ್ನಾಗಿದ್ದಾನೆ. ತನ್ನ ರೂಪು ಅಷ್ಟಕ್ಕಷ್ಟೇ ಅಂತ ಅನ್ನಿಸಿದಾಗ ಖಿನ್ನಳಾಗುತ್ತಿದ್ದಳು. ಆಗಾಗ್ಗೆ ಮುಖದ ಮೇಲೆ ಏಳುವ ಈ ಮೊಡವೆಗಳು ಬೇರೆ. ತುಥ್, ಹಾಕ್ಕೊಳೋಕೆ ಒಳ್ಳೆಯ ಒಡವೆಗಳೂ ಇಲ್ಲ. ಈ ಮೊಡವೆಗಳು ಮಾತ್ರ ಯಾಕೋ.... ಅಂತ ನೋಡಿಕೊಂಡಾಗ ಅಸಹ್ಯವಾಗುತ್ತಿತ್ತು. ಆದರೆ ಕ್ಷಣದಲ್ಲೇ ತನ್ನ ಹಾಗೆ ಎಷ್ಟೋ ಜನ ಹುಡುಗಿಯರಿಗೆ ಮೊಡವೆಗಳು ಏಳುತ್ತವೆ. ಅವರುಗಳು ಏನೇನೋ ಕ್ರೀಮು ಅದೂ ಇದು ಅಂತ ಉಪಚಾರ ಮಾಡಿಕೊಳ್ತಾರೆ. ಅದನ್ನೆಲ್ಲ ಕೊಂಡುಕೊಳ್ಳೊಕೆ ನನ್ನ ಹತ್ತಿರ ದುಡ್ಡಿಲ್ಲ.

ಅಮ್ಮನ್ನ ಕೇಳಿದರೆ, "ನನ್ನ ಹತ್ತಿರ ದುಡ್ಡೆಲ್ಲಿದೆ? ವಿಷಾ ತಗೊಳ್ಳೊಣ ಅಂದ್ರೆ ಮೂರು ಕಾಸಿಲ್ಲ. ಇನ್ನು ನಿನ್ನ ಅಲಂಕಾರ ಸಾಮಗ್ರಿಗಳಿಗೆ ನಾನೆಲ್ಲಿಂದ ದುಡ್ಡುತರಲಿ?" ಅಂತ ಭಾಷಣಾನೇ ಬಗೀತಾಳೆ. ಅಪ್ಪನ್ನ ಕೇಳಿದರೆ ಖಂಡಿತಾ ಬೈಗುಳವೇ... ಹಾಳಾಗಿ ಹೋಗಲಿ, ನಾನಂತೂ ಯಾರನ್ನೂ ದುಡ್ಡು ಕಾಸು ಕೇಳುಲ್ಲ ಅಂತ ತನ್ನಲ್ಲೇ ನಿರ್ಧರಿಸಿದಳು.

ಆದರೆ ಗೋಪಿಯ ಜತೆ ಇರುವಾಗ, ಅವಳಿಗೆ ಮುಂಚಿನಂತೆ ಮಾತಾಡಲಾಗುತ್ತಿರಲಿಲ್ಲ. ಏನೋ ಅಳುಕು. ಅವನನ್ನೇ ಕದ್ದು ಕದ್ದು ನೋಡುವಾಗ, "ಥೂ, ಇವನೇಕೆ ಇಷ್ಟು ಚೆನ್ನಾಗಿದಾನೋ.... ನನ್ನ ಬಗ್ಗೆ ಅವನಿಗೆ ಏನನ್ನಿಸಬಹುದೋ.... ಅಂತಂದುಕೊಂಡು ಮಂಕಾಗುತ್ತಿದ್ದಳು."

"ಏನೂ ಯೋಚನೆ ಮಾಡ್ತಿದೀಯಾ ವನಜಾ.... ಅಷ್ಟು ಹೊತ್ತಿಂದ ನಾನೇ ಮಾತಾಡ್ತಿದೀನಿ. ನೀನು ಏನೂ ಆಡ್ತಾನೇ ಇಲ್ಲವಲ್ಲ. ಏನಾಯ್ತು?"

"ಏನಿಲ್ಲಪ್ಪಾ...." ಅಂತ ಬಾಯಿ ನುಡಿದರೂ, ಈಗ ನನ್ನ ಮನಸ್ಸಿನಲ್ಲಿ ಅನಿಸಿದ್ದನ್ನು ಅವನಿಗೆ ಹೇಳಿದರೆ, ಅವನಿಗೇನನ್ನಿಸಬಹುದು.....? ತಾನು ರೂಪವಂತ ಅಂತ ಜಂಭ ಬರಬಹುದು. ನನ್ನ ಮೇಲಿನ ಸ್ನೇಹ ಕಡಿಮೆಯಾಗಬಹುದು... ಆಗ ನಾವಿಬ್ಬರೂ ದೂರ ದೂರ ಆಗಿ ಹೋದರೇ.... ಬೇಡ ಬೇಡ ಎಂದು ತಲೆಯಾಡಿಸಿದಾಗ ಅವನು ನಕ್ಕಿದ್ದ.

"ಈ ನಡುವೆ ನೀನು ತುಂಬಾ ಬದಲಾಯಿಸಿ ಹೋಗಿದೀಯಾ...ಯಾಕೆ ಏನು ವಿಚಾರ?" ಎಂದು ಅವನು ಸ್ನೇಹದಿಂದ ಕೇಳಿದಾಗ ಅವನ ಮೇಲಿನ ಅಭಿಮಾನ ಹೆಚ್ಚಾಗಿತ್ತು. ತನ್ನ ಮನಸ್ಸಿನಲ್ಲಿರುವುದನ್ನೆಲ್ಲ ಅವನಿಗೆ ಹೇಳುವಂತಿದ್ದರೇ.... ಅಂತಂದುಕೊಂಡಾಗ ಮುಖ ಕೆಂಪಾಗಿತ್ತು.

ಬಿ. ಎಸ್ಸಿ ಡಿಗ್ರಿ ಸೇರಿದ ನಂತರ ಗೋಪಿ, ಪೋಲಿಸ್ ಟ್ರೈನಿಂಗ್ ಕೋರ್ಸ್‌ಗೆ ಸೇರಿದ. ಅದು ಅವನ ತಂದೆಯ ಅಭಿಲಾಷೆ. ಮೈಥಿಲಿ ತನ್ನ ಗಂಡನಿಗೆ ತಿಳಿಯದಂತೆ ಮಗನಿಗೆ ಹೇಳಿದ್ದಳು.

"ನಿನಗೆ ಮುಂದೆ ಓದುವ ಆಸೆ ಇಲ್ವಾ? ನೀನಿನ್ನು ಚಿಕ್ಕವನು ಕಣೋ. ಈ ಟ್ರೈನಿಂಗ್ ಅದೆಲ್ಲಾ ಬಹಳ ಕಷ್ಟದ್ದು......."

"ಬಿಡಮ್ಮಾ..... ಯಾವುದು ಕಷ್ಟವಲ್ಲಾ.... ನಾನು ಎಷ್ಟೇ ಓದಿದರೂ ಒಂದಲ್ಲ ಒಂದು ನೌಕರಿಗೆ ಪರದಾಡಬೇಕಲ್ಲ. ಅಪ್ಪನಿಗೂ ಆಸೆ.... ನಾನು ಅವರಂತೆ ಪೋಲಿಸ್ ಅಧಿಕಾರಿಯಾಗಲಿ ಅಂತ. ಆ ಆಸೇನೂ ತೀರಿಸುವ ಆಸೆ ನನ್ನದು."

"ನಿಮ್ಮಪ್ಪನ ಆಸೆಗೆ ನಾನು ಬೇಡ ಅನ್ನಲ್ಲ. ಆದರೂ ಯೋಚಿಸು.... ನಿನ್ನದೇ ಆದ ಬೇರೆ ಆಸೆಗಳಿರುಲ್ವಾ! ಹಾಗೇನಾದರೂ ಇದ್ದರೆ ನನಗೆ ಹೇಳು. ನಾನು ನಿಮ್ಮಪ್ಪನ ಹತ್ತಿರ ಮಾತಾಡ್ತೀನಿ"

"ಸಧ್ಯಕ್ಕೆ ಅಂತಹ ಯಾವ ಆಸೇನೂ ಇಲ್ಲ... ಅಂತಹ ಸಮಯ ಬಂದಾಗ, ನಿನಗಲ್ಲದೇ ಬೇರೆ ಯಾರಿಗೆ ಹೇಳಲಿ?" ಮಗನ ಮೇಲಿನ ಪ್ರೀತಿ ಹೆಚ್ಚಾಗಿತ್ತು.

ಈ ವಿಷಯ ತಿಳಿದ ವನಜ ಪೆಚ್ಚಾದಳು. ಈಗ ಗೋಪಿ ಸರಳವಾಗಿದ್ದಾನೆ. ಸರಸಿಯಾಗಿದ್ದಾನೆ. ಪೋಲಿಸ್ ಕೆಲಸ ಅವನನ್ನು ಒರಟನನ್ನಾಗಿ ಮಾಡಬಹುದು. ಅವರ ಅಪ್ಪನಂತೆ, ದರ್ಪದಿಂದ, ಅಧಿಕಾರದಿಂದ ಎತ್ತರದ ಸ್ವರದಲ್ಲಿ ಮಾತನಾಡುವ ಒರಟು ಮನುಷ್ಯನಾಗಿ ಬಿಟ್ಟರೇ.... ಅಂತ ಯೋಚಿಸಿದಾಗ ದಿಗಿಲಾಗಿತ್ತು. "ತನಗೇನಂತೆ? ತನಗೆ ಒಂದು ಮಾತು ತಿಳಿಸದೇ ಟ್ರೈನಿಂಗ್‌ಗೆ ಸೇರಿಕೊಂಡಿದ್ದಾನೆ. ಇಷ್ಟಕ್ಕೂ ನಾನ್ಯಾರು ಅವನಿಗೆ? ಅಂತಂದು ಕೊಂಡಾಗ ಏನೋ ದಃಖವಾಗಿತ್ತು. ಆದರೆ ಗೋಪಿ, ಊರಿಗೆ ಹೊರಡುವ ಮುಂಚೆ ವನಜಳನ್ನು ಭೇಟಿಯಾಗಿ ಎಲ್ಲವನ್ನು ತಿಳಿಸಿದ. ನಾನೂ ಇಲ್ಲದೇ ಅಮ್ಮ ಒಂಟಿಯಾಗಿ ಬಿಡ್ತಾಳೆ ವನಜಾ.... ಪ್ಲೀಸ್ ಆಗಾಗ ಹೋಗಿ ಅಮ್ಮನ್ನ ನೋಡಿ ಮಾತನಾಡಿಸಬೇಕು ನೀನು" ಎಂದಾಗ ಅವಳು ಅವನನ್ನೇ ನೋಡಿದಳು. ಅವನು ನನ್ನನ್ನು ಕೇಳಿಕೊಳ್ಳುತ್ತಿದ್ದಾನೆ. ನನ್ನ ಮೇಲೆ ಅವನಿಗೆ ಎಷ್ಟು ವಿಶ್ವಾಸ ಎಂದುಕೊಂಡು ಹಿಗ್ಗಿಹೋದಳು.

"ನೀನ್ಯಾಕೆ ಎಲ್ಲಾ ಬಿಟ್ಟು ಇದಕ್ಕೆ ಸೇರಿಕೊಂಡೆ? ಕೇಳಿದಾಗ ಅವನು ನಕ್ಕ."

"ನೀನು ಇದಕ್ಕೇ ಸೇರ್ಕೊಬೇಕು ಅಂತ ನಿಮ್ಮ ತಂದೆ ಹಠ ಅಲ್ವಾ?"

"ಹಠ ಏನಿಲ್ಲ..... ಆದರೆ ಅವರಿಗೆ ಆ ಆಸೆ ಇದ್ದುದಂತೂ ನಿಜ."

"ನಿನ್ನ ತಂದೆಯ ಆಸೆಗೆ ಅಷ್ಟು ಬೆಲೆ ಕೊಡ್ತೀಯಾ ಗೋಪಿ?" ಏನೋ ಸಂಶಯ ಅವಳಿಗೆ.

"ಅವರ ಮಗನಾಗಿ, ಅವರ ಆಸೆಗೆ ನಾನೂ ಸ್ವಲ್ಪ ಬೆಲೆ ಕೊಡಬೇಕು ಅಲ್ವಾ!"

"ಹಾಗಾದ್ರೇ.... ನಿನ್ನದೇ ಆಸೆ ಅಂತ ಏನೂ ಇಲ್ವಾ?"

"ಸಧ್ಯಕ್ಕಂತೂ ಇಲ್ಲಮ್ಮಾ.... ಮುಂದೆ ಗೊತ್ತಿಲ್ಲ" ವನಜ ಸುಮ್ಮನಾದಳು.

ಗೋಪಿ ಆ ಊರು ಬಿಟ್ಟು ಹೋಗಿ ವಾರದ ಮೇಲಾಗಿತ್ತು. ಒಂದು

ಯುಗವೇ ಕಳೆದು ಹೋಯ್ತೇನೋ ಎನ್ನುವಷ್ಟೆ ಬೇಜಾರಾಗಿತ್ತು ಅವಳಿಗೆ. ಇದ್ದಕ್ಕಿದ್ದಂತೆ ಮೈಥಿಲಿ ಬಂದಾಗ, ಅವಳಿಗೆ ಏನೋ ತವಕ.

"ಗೋಪಿಯಿಂದ ಕಾಗದ ಬಂತು. ಸಧ್ಯ ಹುಶಾರಾಗಿ ತಲುಪಿದ್ದಾನೆ. ಇದೇ ಮೊದಲನೇ ಸಲ ಮನೆ ಬಿಟ್ಟು ಹೋಗ್ತಾ ಇರೋದು. ನನಗಂತೂ ತುಂಬ ಆತಂಕವಾಗಿತ್ತು. ಸ್ವಲ್ಪ ಹೊತ್ತು ಮಾತನಾಡುತ್ತಾ ಕೂತಿದ್ದು ಮೈಥಿಲಿ ಹೊರಟಾಗ, ವನಜ ಅವರ ಜತೆಯಲ್ಲಿ ಹೊರಟಳು. ಇನ್ನೇನು ಅವರ ಮನೆ ಸಮೀಪಿಸಿತು ಅನ್ನುವಾಗ ಧೈರ್ಯವಹಿಸಿ ಕೇಳಿದ್ದಳು."

"ಆಂಟಿ, ನನಗೆ ಗೋಪಿಯ ಅಡ್ರೆಸ್ ಕೊಡ್ತೀರಾ?" ಯಾಕೆ ಎಂದು ಆಕೆ ಕೇಳಲಿಲ್ಲ.

"ಹೂಂ. ಮನೆಗೆ ಬಾ. ಕೊಡ್ತೀನಿ" ಎಂದಳು.

ಮೈಥಿಲಿ ಕೊಟ್ಟ ವಿಳಾಸ ಹಿಡಿದು ಓಡಿ ಬಂದಳು ಮನೆಗೆ ಬರುತ್ತಿದ್ದಂತೆಯೇ ಮೊದಲು ಮಾಡಿದ ಕೆಲಸ ಗೋಪಿಗೆ ಕಾಗದ ಬರೆದದ್ದು. ಅಗ ಈಗ ತಾವುಗಳು ಮಾತನಾಡುತ್ತಾ ಇದ್ದ ವಿಷಯಗಳನ್ನೇ ಸೇರಿಸಿ ಕಾಗದ ಬರೆದಿದ್ದಳು. ತಾನೇ ಹೋಗಿ ಪೋಸ್ಟ್ ಬಾಕ್ಸ್‌ಗೆ ಹಾಕಿಬಂದಿದ್ದಳು.

ಎಷ್ಟು ದಿನಗಳಾದರೂ ಅವನಿಂದ ಮರುತ್ತರ ಬರದಿದ್ದಾಗ ಗೋಪಿ ತನ್ನನ್ನು ಮರೆತು ಬಿಟ್ಟಿದ್ದಾನೆ ಎನ್ನುವ ತೀರ್ಮಾನಕ್ಕೆ ಬಂದಳು. ತಾನೊಂದು ಅಮೂಲ್ಯವಾದ ವಸ್ತುವನ್ನು ಕಳೆದುಕೊಂಡಂತೆ ಚಡಪಡಿಸಿದಳು. ಊಟನಿದ್ದೆ ಬೇಡವಾಯಿತು. ಸೊರಗಿ ಹೋದಳು.

ಎರಡು ವಾರಗಳ ನಂತರ ಮೈಥಿಲಿ ತಾನಾಗಿಯೇ ಬಂದು ವನಜಳಿಗೆ ಬಂದಿದ್ದ ಕಾಗದವನ್ನು ಅವಳ ಕೈಗಿತ್ತಾಗ, ಅವಳಿಗೆ ಏನೋ ಅನುಮಾನ. ಆದರೂ, ಅದನ್ನು ಭದ್ರವಾಗಿ ಹಿಡಿದು ತನ್ನ ರೂಮಿಗೆ ಹೋಗಿ ಬಾಗಿಲು ಹಾಕಿಕೊಂಡು ಕಾಗದವನ್ನು ಬಿಡಿಸಿ ಓದಿದಳು, ಓದಿ ನಿರಾಸೆಯಾಯಿತು.

"ಥೂ ಇವನೊಬ್ಬ! ಇದೆಂತಹ ಕಾಗದ? ಇವನಿಗೆ ಹೃದಯವಿಲ್ಲವೆ? ನನ್ನ ಅಸಕ್ತಿಯನ್ನು ಕೆರಳಿಸುವಂಥ ಯಾವ ವಿಷಯವೂ ಇದರಲಿಲ್ಲ. ಇವನೇಕೆ ಹೀಗೆ? ಇನ್ನು ತಾನು ಸುಮ್ಮನಿರಬಾರದು" ಎಂದುಕೊಂಡು ತಾನು ಮತ್ತೊಂದು ದೀರ್ಘವಾದ ಕಾಗದವನ್ನು ಬರೆದಳು.

ತನ್ನ ಹೃದಯವನ್ನು ತೆರೆದಿಟ್ಟು, ತಾನು ಅವನನ್ನು ಪ್ರೀತಿಸುತ್ತಿರುವುದಾಗಿ ನಿಸ್ಸಂಕೋಚವಾಗಿ ಬರೆದಿದ್ದಳು. ನೀನು ನನ್ನ ಕಣ್ಣೆದುರಿಗಿಲ್ಲದೇ ಎಲ್ಲಾ ಶೂನ್ಯ ಅಂತನ್ನಿಸುತ್ತಿದೆ. ನಿನ್ನ ಟ್ರೈನಿಂಗ್ ಯಾವಾಗ ಮುಗಿಯುತ್ತೆ? ಯಾವಾಗ

ಬರ್ತಿದೀಯ? ಎಂದು ಕೇಳಿ ಬರೆದು, ಕಾಲೇಜಿನ ವಿಳಾಸಕ್ಕೆ ಕಾಗದ ಬರೆಯುವಂತೆ ತಿಳಿಸಿದ್ದಳು. ಅದಕ್ಕೆ ಗೋಪಿಯಿಂದ ಉತ್ತರ ಬರಲೇ ಇಲ್ಲ. ಅವನಿಗೆ ನನ್ನ ಕಾಗದ ತಲುಪಿಲ್ಲವೆ? ಎಂದು ಸಂದೇಹ, ಅಡ್ರೆಸ್ ಸರಿಯಾಗಿತ್ತೋ, ಇಲ್ಲವೋ ಎಂದು ತಿಳಿದುಕೊಳ್ಳಲು, ತಾನೇ ಅವರ ಮನೆಗೆ ಹೋದಳು. ವನಜಳನ್ನು ಕಂಡೊಡನೆ ಮೈಥಿಲಿ ಸಂಭ್ರಮದಿಂದ, "ಗೋಪಿಯಿಂದ ನಿನಗೆ ಕಾಗದ ಬಂದಿದೆ ತಗೋ" ಎಂದು ಕೊಟ್ಟಾಗ ಅವಳು ಗಾಭರಿಯಾದಳು. ತಾಯಿಗೆ ತಿಳಿಯುವಂತೆ ತನಗೇಕೆ ಬರೆದು ಅಂತನ್ನಿಸಿದಾಗ ನಾಚಿಕೆಯಿಂದ ಮುಖ ಕೆಂಪಾಗಿತ್ತು. "ನೀನು ಓದು, ನಾನು ಕಾಫಿ ತರ್ತೀನಿ" ಎಂದು ಆಕೆ ಒಳಗೆ ಹೋದಾಗ ಅವಳು ಆತಂಕದಿಂದ ಕಾಗದವನ್ನು ಬಿಡಿಸಿದಳು. "ಪ್ರೀತಿಯ ವನಜಾ," ಎಂದು ಶುರು ಮಾಡಿದ್ದ ಗೋಪಿ. ಅದನ್ನೇ ಹತ್ತಾರು ಬಾರಿ ಓದಿಕೊಂಡಳು. ಅಷ್ಟೇ ಮುಂದೆಲ್ಲೂ ಪ್ರೀತಿಯ ಹೆಸರೇ ಇಲ್ಲ. ತನ್ನ ಟ್ರೈನಿಂಗ್ ಕುರಿತು, ತನ್ನ ಅಲ್ಲಿಯ ಜೀವನ, ಊಟ, ತಿಂಡಿ, ಸ್ನೇಹಿತರು ಸಿನಿಮಾ, ಇತ್ಯಾದಿ ಕುರಿತು ವಿವರವಾಗಿ ಬರೆದಿದ್ದ. ನಿನ್ನ ಓದು, ಹೇಗಿದೆ? ನಿನ್ನ ಪರೀಕ್ಷೆ ಯಾವಾಗ? ಓದಿನ ಕಡೆ ಗಮನ ಕೊಡು. ಅತ್ತಿತ್ತ ಮನಸ್ಸನ್ನು ಹರಿಯಬಿಡಬೇಡ ಎಂದು ಒತ್ತಿ ಒತ್ತಿ ಬರೆದಿದ್ದ. ಅಮ್ಮನಿಗೆ ನಾನಿಲ್ಲದೇ ಬೇಜಾರು. ಆಗಾಗ್ಗೆ ಮನೆಗೆ ಬರುತ್ತಿರು ಎಂದು ಬರೆದು ಕಾಗದವನ್ನು ಮುಗಿಸಿದ್ದ.

ಪತ್ರ ಅತಿ ಸಪ್ಪೆ ಅಂತನ್ನಿಸಿದರೂ, ಪ್ರೀತಿಯ ವನಜಾ... ಎಂದು ಬರೆದಿದ್ದು ಮಾತ್ರ ಪ್ರಿಯವಾಗಿತ್ತು. ಥೂ ನಾನು ಮುಚ್ಚು ಮರೆ ಇಲ್ಲದೇ ಮನಸ್ಸಿನಲ್ಲಿದ್ದುದನ್ನೆಲ್ಲ ಬರೆದಿದ್ದೆ. ಅವನು ಮಾತ್ರ ಏನೂ ಬರೆದಿಲ್ಲ. ಹಾಗಾದರೆ ಅವನು ನನ್ನನ್ನು ಪ್ರೀತಿಸುತ್ತಿಲ್ಲ. ಬರೀ ಸ್ನೇಹ ಅಷ್ಟೇ ಅಂತ ಅಂದುಕೊಳ್ಳಲಾಗದೇ ಒದ್ದಾಡಿದಳು. ಮತ್ತೆ ಅವನಿಗೆ ಪತ್ರ ಬರೆಯುವ ಆಸಕ್ತಿ ಇಲ್ಲವಾಯಿತು. ಆದರೆ, ಅವನು ಬರೆದಿದ್ದಂತೆ, ಅವನ ಮನೆಗೆ ಹೋಗಿ ಮೈಥಿಲಿಲಯೊಡನೆ ಗಂಟಗಟ್ಟಲೆ ಮಾತನಾಡಿ ಬರುತ್ತಿದ್ದಳು.

"ನೀನು ಬಂದರೆ ನನಗೆ ಎಷ್ಟೋ ಬೇಜಾರು ಕಳೆಯುತ್ತಮ್ಮಾ.... ಗೋಪಿ ಇಲ್ಲದ ಮನೆ ಬಿಕೋ ಅಂತನ್ನುತ್ತೆ. ಮನೆಗೆಲ್ಲಾ ನಾನೊಬ್ಬಳೇ... ಅವನು ಟ್ರೈನಿಂಗ್ ಮುಗಿಸಿ ಬಂದ ಕೂಡಲೇ ಅವನಿಗೆ ಮದುವೆ ಮಾಡಿಬಿಡ್ತೀನಿ" ಆಕೆ ಮಾತಿನ ಮಧ್ಯದಲ್ಲಿ ನುಡಿದಾಗ, ವನಜಳ ಎದೆ ಬಡಿತ ಹೆಚ್ಚಾಗಿತ್ತು. ಮುಖ ಕೆಂಪಾಗಿತ್ತು. ಆಂಟಿ ಈಗ ತನ್ನನ್ನೇನಾದರೂ ಕೇಳಿದರೆ ತಾನು ಏನು

ಹೇಳಬೇಕು ಎಂದು ತವಕಗೊಂಡಳು. ಆದರೆ ಮೈಥಿಲಿ ಏನನ್ನು ಕೇಳಲೇ ಇಲ್ಲ. ವನಜ ಪೆಚ್ಚಾದಳು.

ಭಾರವಾದ ಹೃದಯದೊಡನೆ ಮನೆಗೆ ಬಂದಳು. ಗೋಪಿ, ಗೋಪಿ ಅಂತ ತಾನೇಕೆ ತಲೆ ಕೆಡಿಸಿಕೊಳ್ಳಬೇಕು? ಅವನಿಗೆ ನನ್ನ ಮೇಲೆ ಪ್ರೀತಿ ಇಲ್ಲ. ಆಂಟಿಗೆ ನನ್ನ ಮೇಲೆ ಯಾವ ಭಾವನೆಯೋ? ಅಂತನ್ನಿಸಿ ಅಳು ಬರುವಂತಾಗಿತ್ತು. ಆದರೆ ತಾನು ಮಾತ್ರ ತನ್ನ ನಿಲುವನ್ನು ಬದಲಾಯಿಸಿಕೊಳ್ಳಲಿಲ್ಲ. ಪರೀಕ್ಷೆಯ ನೆವಹಾಕಿ ಗೋಪಿ ಮನೆಗೆ ಹೋಗುವುದನ್ನು ಕಡಿಮೆ ಮಾಡಿದಳು.

ಕಡೇ ದಿನದ ಪರೀಕ್ಷೆ ಮುಗಿಸಿಕೊಂಡು, ಸೀದಾ ಗೋಪಿಯ ಮನೆಗೆ ಬಂದಳು. ಬಾಗಿಲನ್ನು ತೆಗೆದವನು ಗೋಪಿಯೇ. ಬಾಗಿಲಿಗಿಂತ ಎತ್ತರಕ್ಕೆ ನಿಂತಿದ್ದವನ ಗುರುತು ಸಿಗಲಿಲ್ಲ. ಎರಡು ಹೆಜ್ಜೆ ಹಿಂದೆ ಸರಿದಳು.

"ಅರೇ. ವನಜಾ... ನೀನಾ?" ಎಂದ ಗೋಪಿ ಸಡಗರದಿಂದ. ಅವಳಿಗೆ ಸಂಭ್ರಮವೂ ಉಂಟಾಯಿತು. ನಾಚಿಕೆಯೂ ಆಯಿತು. ಮನಸ್ಸಿನಲ್ಲಿ ಅರಳಿದ ನಾನಾಭಾವನೆಗಳನ್ನು ತುಳುಕಿಸುತ್ತಾ.... "ಗೋಪೀನಾ....? ಗೋಪಿ ನೀನ್ಯಾವಾಗ ಬಂದೆ? " ಎಂದು ಪ್ರಶ್ನಿಸಿದಾಗ ಅವನು ನಕ್ಕ.

"ನಿಧಾನ..... ನಿಧಾನ..... ಅಷ್ಟು ಉದ್ವೇಗ ಏಕೆ? ಉದ್ವೇಗ ಆರೋಗ್ಯಕ್ಕೆ ಒಳ್ಳೆಯದಲ್ಲ. ನಾನೇ.... ಗೋಪೀನೇ.... ಮೊದಲು ಒಳಗೆ ಬಾ" ಎಂದು ಮೃದುವಾಗಿ ಕರೆದಾಗ ಅವಳು ಕರಗಿಹೋದಳು. ಪ್ರೀತಿಯ ಮಹಾಪೂರವೇ ಅಲ್ಲಿ ಮಡುಗಟ್ಟಿ ನಿಂತಿದೆಯಂತೆನ್ನಿಸಿತು. ಆದರೆ ಏನೋ ಮುಜುಗರ ತಾನೂ ಸೀದಾ ಕಾಲೇಜನಿಂದ ಹೀಗೇ ಬಂದಿದ್ದೇನೆ. ಕೂದಲೆಲ್ಲಾ ಕೆದರಿ ಹೋಗಿದೆ. ಮುಖವೆಲ್ಲಾ ಬೆವರಿನ ಜಿಡ್ಡಿನಿಂದ ಎಣ್ಣೆಗಟ್ಟಿದೆ. ಈ ಸೀರೆಯೋ, ಯಾವುದೋ ಒಂದು ನೂಲಿನ ಸೀರೆ.... ಛೆ.... ಇವತ್ತು ಇವನು ಬಂದಿರುತ್ತಾನೆ ಅಂತ ಗೊತ್ತಿದ್ದರೆ, ಚೆನ್ನಾಗಿ ಅಲಂಕರಿಸಿಕೊಂಡು ಬರಬಹುದಾಗಿತ್ತು. ಅಂತಂದುಕೊಂಡು, ಅವನಿಗೆ ತಿಳಿಯುದಂತೆ, ಅವನನ್ನೇ ನೋಡಿದಳು.

ಅವನು ಮೊದಲಿಗಿಂತ ಚೆನ್ನಾಗಿ ಆಗಿದ್ದಾನೆ. ಈ ಬಣ್ಣ, ಈ ರೂಪ ಈ ಪರ್ಸನಾಲಿಟಿ ಎಲ್ಲಾ ಚೆನ್ನಾಗಿದೆ... ತನ್ನನ್ನು ಅವನ ಜತೆಗೆ ಹೋಲಿಸಿಕೊಳ್ಳಲು ಹಿಂಜರಿದಳು.

"ಯಾಕೆ ಹಾಗೇ ನಿಂತು ಬಟ್ಟೆ? ಒಳಗೆ ಬಾ... ನಾನು ಇವತ್ತು ಬೆಳಿಗ್ಗೇನೇ ಬಂದೆ.... ನಿನಗೆ ಪರೀಕ್ಷೆ ನಡೀತಿದೆ ಅಂತ ಗೊತ್ತಾಯ್ತು.... ಪರೀಕ್ಷೆಲಿ ಹೇಗೆ ಮಾಡಿದೀಯಾ?"

"ಪರವಾಗಿಲ್ಲ. ಸುಮಾರಾಗಿ ಮಾಡಿದೀನಿ. ಆಂಟಿ ಇಲ್ವಾ?"

"ಏಕೆ ಆಂಟಿ ಇಲ್ಲದಿದ್ದರೆ ಬರುಲ್ವಾ?"

"ಹಾಗೇನಿಲ್ಲ. ಸುಮ್ಮನೇ ಕೇಳಿದೆ" ಅಂತ ಹೇಳಿ ಒಳಗೆ ಬಂದಳು.

"ಕಾಫಿ ಕುಡಿತೀಯಾ?.... ಎನ್ನುತ್ತಾ ತನ್ನ ಕಪ್‌ನಲ್ಲಿದ್ದ ಕಾಫಿಯನ್ನೂ ಎತ್ತಿಕೊಳ್ಳುತ್ತಾ ಕೇಳಿದ."

"ಬೇಡ ಗೋಪಿ, ಈಗ್ತಾನೇ ಕ್ಯಾಂಟೀನ್‌ನಲ್ಲಿ ಕುಡಿದೆ" ಸುಳ್ಳು ಹೇಳಿದಳು.

"ಕ್ಯಾಂಟೀನ್ ಕಾಫಿ ಎಷ್ಟು ಚೆನ್ನಾಗಿರುತ್ತೆ ಅಂತ ನನಗೆ ಗೊತ್ತು." ಎನ್ನುತ್ತಾ ಎದ್ದು ಹೋಗಿ ಒಳಗ್ನಿಂದ ಇನ್ನೊಂದು ಕಪ್‌ನ್ನು ತಂದು ಅರ್ಧಬಗ್ಗಿಸಿಕೊಟ್ಟ. ಕಾಫಿ ಮುಗಿಸಿ, ಇಬ್ಬರೂ ಮಾತಿಲ್ಲದೇ ಸುಮ್ಮನೇ ಕುಳಿತಿದ್ದಾಗ ಅವಳು ಹೊರಡುವ ತವಕವನ್ನು ತೋರಿದಳು.

"ಯಾಕೆ? ಏನು ಮಾತೇ ಇಲ್ವಾ? ಮುಂಚೆ ಅಷ್ಟು ಮಾತಾಡ್ತಿದ್ದೆ."

"ಈಗ ಏನು ಆಡಬೇಕೂಂತ ತೋಚ್ತಾನೇ ಇಲ್ಲ"

"ಹೋಗಲಿ... ಕೇರಂ ಆಡೋಣ್ವಾ? ಅವಳ ಕಡೆ ನೋಡಿ ತಮಾಷೆಯಿಂದ ಕೇಳಿದ."

"ಥೂ, ಬೇಡಪ್ಪಾ ಯಾಕೋ ಬೋರ್...."

"ಸರಿ. ಯಾವುದೂ ಬೇಡ....... ತಿಂಡಿ ತಿಂತೀಯಾ?"

"ಬೇಡ ಗೋಪಿ ನಾನು ಮನೆಗೆ ಹೋಗ್ತೀನಿ" ಎನ್ನುತ್ತಾ ಅವಳು ಎದ್ದಾಗ ಅವನು ಕೈ ಹಿಡಿದೆಳೆದು ಕೂರಿಸಿದ.

"ನಾನೇನು ಹೊಸಬನಾ ನಿನಗೆ? ನನ್ನ ಮೇಲೆ ಕೋಪಾನ? ಸುಮ್ಮನೇ ಕೂತ್ಕೋ ಏನಾದ್ರೂ ಮಾತಾಡು"

"ನೀನೇ ಆಡು......"

"ನನಗೆ ಆಡುಕ್ಕೆ ಹೆಚ್ಚಿಗೆ ವಿಚಾರಗಳೇನಿಲ್ಲ. ಏನಿದ್ದರೂ, ನನ್ನ ಟ್ರೈನಿಂಗ್ ಕುರಿತದ್ದೇ ಅದನ್ನೆಲ್ಲ ಕಾಗದದಲ್ಲಿ ಬರೆದಿದ್ದೆನಲ್ಲ...." ವನಜಾ ಅವನನ್ನೇ ನೋಡಿದಳು.

"ನಾನೂ ನಿನಗೊಂದು ಕಾಗದ ಬರೆದಿದ್ದೆ. ಅದನ್ನು ಓದಿ ನಿನಗೇನನ್ನಿಸಿತು" ಅವನ ಕಡೆ ನೋಡದೇ ಕೇಳಿದಳು.

"ಯಾವುದೂ?... " ಎನ್ನುತ್ತಾ ತಲೆಕೆರೆದುಕೊಂಡಾಗ ಅವಳು ಸಿಡಿದು ನುಡಿದಳು.

"ನಾಟಕ ಆಡಬೇಡ ನೀನು..... ನಿನಗೆಲ್ಲಾ ಗೊತ್ತಿದೆ. ನೀನೇತಕ್ಕೆ

ಉತ್ತರ ಬರೆಯಲಿಲ್ಲ?"

"ಏನಂತ ಬರೀಬೇಕು ಅಂತ ನನಗೆ ಗೊತ್ತಾಗಲಿಲ್ಲ" ನಕ್ಕ.

"ಅಂದ್ರೆ.... ನನಗೆ ನಿನ್ನ ಬಗ್ಗೆ ಇರುವ ಭಾವನೆ ತರಹ ನಿನಗೆ ನನ್ನ ಮೇಲೆ ಅದೇ ಭಾವನೆ ಇಲ್ಲ ಅಂತಾಯ್ತು."

"ಆ ಭಾವನೆಗಳನ್ನೆಲ್ಲಾ ಸದಾ ಬಾಯಲ್ಲಿ ಹೇಳೂದು, ಕಾಗದದಲ್ಲಿ ಬರೆಯೋದು ಇವೆಲ್ಲಾ ನನ್ನಿಂದ ಆಗುಲ್ಲ ವನಜಾ...."

"ಅಂದರೇ....."

"ಅದನ್ನೆಲ್ಲ ಇನ್ನೆಂದಾದ್ರೂ ನಿಧಾನವಾಗಿ ಮಾತನಾಡೋಣ. ಈಗ ಎರಡು ದಿನಗಳ ರಜದ ಮೇಲೆ ಬಂದಿದ್ದೀನಿ. ಬೇರೆ ಮಾತಾನಾಡು."

ವನಜಾ ಮೂತಿ ಊದಿಸಿಕೊಂಡಳು. ಅವಳಿಗೆ ಅವಮಾನವಾದಂತಾಗಿತ್ತು.... ಅವನು ಅವಳನ್ನೇ ಕೀಟಲೆ ಮಾಡುವವನಂತೆ ನೋಡುತ್ತಿದ್ದ. ಅಷ್ಟರಲ್ಲಿ ಹೊರಗೆ ಹೋಗಿದ್ದ ಅವನ ತಾಯಿ ಬಂದರು.

"ವನಜಾ..... ಎಷ್ಟು ಹೊತ್ತಾಯ್ತು ಬಂದು?" ಆಕೆ ಪ್ರಶ್ನಿಸಿದಾಗ ಅವಳಿಗೆ ಒಂದು ತರಹ ಮುಜುಗರವಾಗಿತ್ತು. "ಸ್ವಲ್ಪ ಹೊತ್ತಾಯ್ತು ಬಂದು" ಎಂದಳು.

"ಒಳ್ಳೆದಾಯ್ತು.... ಗೋಪಿ ಬೆಳಿಗ್ಗೆ ಬಂದ. ದೇವಸ್ಥಾನಕ್ಕೆ ಹೋಗಿದ್ದೆ. ಪ್ರಸಾದ ತಗೊಳ್ಳಿ. ಎನ್ನುತ್ತಾ ಆಕೆ ಇಬ್ಬರಿಗೂ ಪ್ರಸಾದವನ್ನು ಕೊಟ್ಟಳು. ಇಬ್ಬರೂ ಕಣ್ಣಿಗೊತ್ತಿಕೊಂಡು ತಿಂದರು."

"ಇವತ್ತು ನಮ್ಮ ಗೋಪಿ ಹುಟ್ಟಿದ ಹಬ್ಬ.... ಅವನ ಹೆಸರಿನಲ್ಲಿ ದೇವರಿಗೆ ಅಭಿಷೇಕ ಮಾಡಿಸಿದೆ. ಒಳ್ಳೇದಾಯ್ತು ಅವನೂ ಊರಿಗೆ ಬಂದಿದ್ದಾನೆ. ನೀನೂ ಬಂದಿದ್ದೀಯ. ಎಂಥಾ ಸುಯೋಗ ನೋಡು. " ಗೋಪಿ ಅವಳ ಕಡೆ ನೋಡಿ ಒಂದು ಕಣ್ಣು ಹೊಡೆದು ನಕ್ಕಾಗ ಅವಳು ಬೆವೆತಳು. "ಥೂ ಇವನೊಬ್ಬ ಇವನ ಮನಸ್ಸಲ್ಲಿ ಏನಿದೆ ಅಂತ ತಿಳಿತಿಲ್ಲವಲ್ಲ" ಎಂದು ಬೈದುಕೊಂಡಳು.

"ಹ್ಯಾಪೀ ಬರ್ತಿಡೇ ಟೂ ಯೂ ಗೋಪಿ ಎಂದಳು ಮುಗುಳ್ನಗುತ್ತಾ"

"ಥ್ಯಾಂಕ್ಸ್..... ಏನು ನಕ್ಕು ಬಿಟ್ಟೆಯಲ್ಲಾ..... ?" ಪ್ರಶ್ನಿಸಿದ.

"ಸದಾ ಏನೋ ಅನುಮಾನ ಕಾಡುತ್ತಿತ್ತು. ಈಗ ಈ ಅನುಮಾನ ಬಗೆಹರೀತು ಸಧ್ಯ...."

"ಯಾವ ಅನುಮಾನ?"

"ಇನ್ನೊಂದು ದಿನ ನಿಧಾನವಾಗಿ ಹೇಳ್ತಿನಿ. ಈಗ ಹೊತ್ತಾಯ್ತು ಮನೆಗೆ ಹೋಗ್ಲಾ.... ಕಾಲೇಜ್ನಿಂದ ಸೀದಾ ಹಾಗೇ ಬಂದಿದ್ದೆ. ಅಮ್ಮ ಅಪ್ಪ ಆತಂಕ ಪಡುತ್ತಿರುತ್ತಾರೆ."

"ಸರಿ ಹೊರಡು, ನಾನೂ ಸ್ವಲ್ಪ ದೂರ ನಿನ್ನ ಜತೆಗೆ ಬರ್ತೀನಿ" ಎನುತ್ತಾ ಹೊರಟಾಗ, ಮೈಥಿಲಿ ಬೇಡವೆನ್ನಲಿಲ್ಲ. ಒಂದು ಡಬ್ಬಿ ತುಂಬಾ ಪ್ರಸಾದವನ್ನು ತುಂಬಿ ಅವಳ ಕೈಗೆ ಕೊಟ್ಟಳು. "ಇದು ನಿಮ್ಮ ಮನೆಗೆ" ಎಂದಳು. ಅವರ ಮನೆಯ ತಿರುವಿನ ತನಕ ಬಂದ ಗೋಪಿ, ಅಪ್ಪ ಅಮ್ಮ ಹೇಗಿದ್ದಾರೆ? ಅವರನ್ನು ಕೇಳಿದೆ ಅಂತ ಹೇಳಿಬಿಡು. ನಾನು ಬರ್ತೀನಿ ಎಂದಾಗ,

"ಮನೆ ತನಕ ಬರುಲ್ವಾ?" ಅಂತ ಕೇಳಿದಳು.

ಇವತ್ತು ಬೇಡ. ಮುಂದಿನ ಸಲ ಊರಿಗೆ ಬಂದಾಗ ಖಂಡಿತಾ ಬರ್ತೀನಿ. ಅಮ್ಮ ಊಟಕ್ಕೆ ಕಾಯುತ್ತಿರಬಹುದು. ನಾನು ಅಪ್ಪನ್ನು ಸರಿಯಾಗಿ ಮಾತನಾಡಿಸಿಲ್ಲ. ಬೈ ಬರ್ತೀನಿ ವನಜಾ.... ಎಂದಾಗ ಅವಳು ತಲೆಯಾಡಿಸಿದ್ದಳು.

ಗೋಪಿ ಬದಲಾಯಿಸಿರಬಹುದೇ ಎಂಬ ಅನುಮಾನ ಅವಳನ್ನು ಕಾಡಿದರೂ, ಅದನ್ನು ಒಪ್ಪಿಕೊಳ್ಳಲು ಮನಸ್ಸು ಸಿದ್ಧವಿರಲಿಲ್ಲ. ನಾನೀಗ ಗೋಪಿ ಮನೆಯಿಂದ ಬಂದೆ ಅಂತಂದ್ರೆ ಅಮ್ಮ ಬೈಯಬಹುದು ಎಂದುಕೊಂಡು, ಪ್ರಸಾದದ ಡಬ್ಬಿಯನ್ನು ಸೀದಾ ತನ್ನ ಮನೆಗೆ ತೆಗೆದುಕೊಂಡು ಹೋದಳು. ಯಾರಿಗೂ ಕಾಣದಂತೆ ತಾನೇ ಎಲ್ಲವನ್ನೂ ತಿಂದು ಮುಗಿಸಿ, ನೀರು ಕುಡಿದು ತೇಗಿದಳು.

ಮಾರನೇ ದಿನ, "ನಾನು ಸ್ನೇಹಿತೆಯ ಮನೆಗೆ ಹೋಗಿ ಬರ್ತೀನಿ" ಎಂದವಳು, ಸೀದಾ ಗೋಪಿಯ ಮನೆಗೆ ಬಂದಳು. ಖಾಲಿ ಡಬ್ಬಿಯನ್ನು ಆಂಟಿಯ ಕೈಗಿತ್ತು, ಅತ್ತಿತ್ತ ನೋಡಿದಳು. ಮೈಥಿಲಿ ಅವಳ ಮನಸ್ಸನ್ನು ಗ್ರಹಿಸಿದವಳಂತೆ,

"ಗೋಪಿ ಇಲ್ಲೇ ಎಲ್ಲೋ ಹೋಗಿದ್ದಾನೆ ಬರ್ತಾನೆ ಕೂತ್ಕೋ" ಎನ್ನುತ್ತಾ ತಾನೂ ಕೂಳಿತಾಗ ವನಜಾ ವಿಧಿ ಇಲ್ಲದೇ ಕುಳಿತಳು. ಆಂಟಿ ಕೇಳಿದ್ದಕ್ಕೆಲ್ಲಾ ಉತ್ತರಿಸಿ ಬೇಜಾರಾಗ ತೊಡಗಿತ್ತು. ಈ ಗೋಪಿ ಮನಸ್ನಲ್ಲಿ ಏನಿದೆಯೋ, ಅವನಿಗೋಸ್ಕರ ತಾನೇಕೆ ಬರಬೇಕು ಅಂತನ್ನಿಸಿದಾಗ ಎದ್ದಳು.

"ಆಂಟಿ ನಾನು ಹೊರಡ್ತಿನಿ. ಅಮ್ಮಾ ಬೇಗ ಬಾ ಅಂದಿದ್ಲು"

"ಸರಿ. ನಿಮ್ಮ ಅಮ್ಮಾ ಬಂದೇ ಇಲ್ಲ. ಎಷ್ಟೊಂದು ದಿನಗಳಾಯ್ತು

ಅವರಿಗೂ ಬರುಕ್ಕೆ ಹೇಳು."

"ಹೂಂ, ಎನ್ನುತ್ತಾ ಹೊರಟಳು. ಬಾಗಿಲಿಗೆ ಅಡ್ಡವಾಗಿ ಗೋಪಿ ಬಂದು ನಿಂತಾಗ ಅವಳ ಮೈಯಲ್ಲಿ ಏನೋ ಹೊಸ ಸಂಚಾರ...."

"ಎಲ್ಲಿಗೆ ಹೋಗಿದ್ಯೋ..... ಈ ಹುಡುಗಿ ನಿನಗಾಗಿ ಕಾಯ್ತಾ ಇದ್ದಳು" ಅಂತ ಆಕೆ ಕೇಳಿದಾಗ, ವನಜಾ ನಾಚಿದಳು. ಗೋಪಿ ಅವಳ ಕೆಂಪಾದ ಮುಖವನ್ನೇ ನೋಡಿದ. ಹಾಗೇ ಅವಳ ಜತೆ ಹೊರಟ.

"ನಾನು ಇವತ್ತು ರಾತ್ರಿ ಟ್ರೈನಿಗೆ ವಾಪಸು ಹೊರಡ್ತಾ ಇದೀನಿ. ನನಗೇನಾದರೂ ಹೇಳುವುದಿದ್ದರೆ ಈಗಲೇ ಹೇಳಿಬಿಡು ಕಾಗದದಲ್ಲಿ ಮಾತ್ರ ಬರೀಬೇಡ"

"ಕಾಗದದಲ್ಲಿ ಯಾಕೆ ಬರೀಬಾರದು?"

"ಅಷ್ಟು ತಿಳಿಯಲ್ವಾ ನಿನಗೆ? ಅಲ್ಲಿ ನನ್ನ ಜತೆ ಬೇರೆಯವರೆಲ್ಲಾ ಇರ್ತಾರೆ. ನಾನೊಬ್ಬನೇ ಅಲ್ಲ."

ಬಾಯಲ್ಲಿ ಹೇಳುವುದಕ್ಕಿಂತ, ಕಾಗದದಲ್ಲಿ ಬರೆಯುವುದು ಸುಲಭವಲ್ಲವಾ? ಅದಕ್ಕೇ ಬರೆದಿದ್ದೆ. ನಿನಗೆ ಬೇಡವಾದರೆ ಬಿಡು. ಬರೆಯುವುದೂ ಇಲ್ಲ ಹೇಳುವುದೂ ಇಲ್ಲ.

"ಸರಿ, ನಿನ್ನಿಷ್ಟ" ಎಂದಾಗ ಅವಳು ಪೆಚ್ಚಾದಳು. ಗೋಪಿಯಿಂದ ಈ ರೀತಿ ಉತ್ತರವನ್ನು ತಾನು ನಿರೀಕ್ಷಿಸಿರಲಿಲ್ಲ. ಅವಳು ಮೌನಿಯಾದಾಗ ಅವನು ಮತ್ತೆ ಕೇಳಿದ.

"ಏನೋ ಹೇಳಬೇಕು ಅಂತ ನಿನ್ನ ಮನಸ್ನಲ್ಲಿದೆ. ನನಗೆ ಗೊತ್ತು ಅಮ್ಮನ ಎದುರಿಗೇ ಹೇಳಬಹುದಾಗಿತ್ತು" ಅಂತ ಮತ್ತೆ ಕೆಣಕಿದ.

"ಪರ್ಸನಲ್ ವಿಚಾರವನ್ನೆಲ್ಲಾ ಆಂಟಿ ಎದುರಿಗೆ ಹೇಳುಕ್ಕಾಗುಲ್ಲ."

"ಹಾಗೆ ನಿನಗೆ ಅನ್ನಿಸಬಹುದು. ಆದರೆ ಅಮ್ಮ ಎಂತಹವಳು ಅಂತ ನನಗೆ ಗೊತ್ತು. ಅವಳಿಗೆ ಗೊತ್ತಿಲ್ಲದ ವಿಚಾರ ಯಾವುದೂ ಇಲ್ಲ. ನನಗೆ ಎಲ್ಲಾ ಹೇಳಿದ್ದಾಳೆ ಗೊತ್ತಾ?"

"ಸರಿ ಬಿಡು. ನಾನು ಹೇಳುವುದೂ ಏನೂ ಇಲ್ಲ ಅಂತಾಯ್ತು. ಏನಾದ್ರೂ ಇದ್ದರೆ, ನೀನು ಟ್ರೈನಿಂಗ್ ಮುಗಿಸಿಕೊಂಡು ಬಂದಮೇಲೆ ಹೇಳ್ತೀನಿ."

"ಅಂದ್ರೆ.... ಅಲ್ಲೀವರೆಗೂ ನಾನು ಕಾಯಬೇಕು ಅಂತಾಯ್ತು. ಇರಲಿ ಪರವಾಗಿಲ್ಲ ಹೇಳು ಅಷ್ಟರಲ್ಲಿ ನಿನ್ನ ಮನಸ್ಸು ಬದಲಾಯಿಸಬಹುದು. ಅಥವಾ ನಾನೇ ಬದಲಾಗಬಹುದು. ಆಗೇನು ಮಾಡ್ತೀಯಾ?"

"ನೋ.... ನೋ.... ಹಾಗಾಗಬಾರದು." ರಸ್ತೆ ಎನ್ನುವುದನ್ನು ಮರೆತು ಅವಳು ಎತ್ತರದ ಧ್ವನಿಯಲ್ಲಿ ನುಡಿದಾಗ ಗೋಪಿ ಜೋರಾಗಿ ನಕ್ಕ.

"ಅಂದರೇ.... ನೀನು ಹೇಳುವುದೂ ಇಲ್ಲ, ನಾನು ಕೇಳುವುದೂ ಇಲ್ಲ. ಹೀಗೇ ರಸ್ತೇಲಿ ನಿಂತಿರೋದು ಅಂತಾನಾ?"

"ಪ್ಲೀಸ್ ಸುಮ್ಮನಿರು..... ನನ್ನ ಆತಂಕ ನಿನಗೆ ಗೊತ್ತಾಗುಲ್ಲ"

"ಆತಂಕ, ತವಕ, ಕೊರಗು ಎಲ್ಲಾ ಏಕೆ? ನನ್ನ ಹಾಗೆ ಹಾಯಾಗಿರು. ಎಲ್ಲಾ ಸರಿ ಹೋಗುತ್ತೆ.... ಇಲ್ಲದಿದ್ದರೆ ನನ್ನ ಹಾಗೆ ಜಾಲಿಯಾಗಿರಲು ಸಾಧ್ಯವಾಗುವುದಿಲ್ಲ."

"ನಿಜ ಹೇಳು ಗೋಪಿ, ನಿನಗೆ ಖಂಡಿತಾ ಏನೂ ಆತಂಕವಿಲ್ಲವಾ?"

"ಯೋಚನೆ ಮಾಡಿದರೆ, ಟೆನ್ಷನ್‌ಹೆಚ್ಚಾಗುತ್ತೆ. ಅದು ಆರೋಗ್ಯಕ್ಕೆ ಒಳ್ಳೇದಲ್ಲ. ಆದರಿಂದ ಬರೀ ತೊಂದರೇನೇ."

"ಹಾಗಾದ್ರೆ ನಿನಗೆ, ಯಾವ ಚಿಂತೆಯೂ ಇಲ್ವಾ ನಿನ್ನ ಅಪ್ಪ ಅಮ್ಮ, ನಿನ್ನ ಕೆಲಸ, ಯಾವ ಚಿಂತೆಯೂ ಖಂಡಿತಾ ಇಲ್ವಾ?"

"ಇಲ್ಲ ಎನಲಾರೆ. ಅಮ್ಮನ ನೆನಪಾದಾಗ, ಅಪ್ಪನಿಗೆ ಫೋನ್‌ಮಾಡಿ ವಿಚಾರಿಸುತ್ತಿದ್ದೆ. ಆಗಾಗ್ಗೆ ಕಾಗದ ಬರೀತಿದ್ದೆ. ನನ್ನ ಸ್ನೇಹಿತರ ಜತೇಲಿ ಖುಷಿಯಾಗಿ ಕಾಲ ಕಳೆದು ಬೇಸರವನ್ನು ಕಳೆದುಕೊಳ್ಳುತ್ತಿದ್ದೆ."

"ನಿನಗಾದ್ರೆ ಎಲ್ಲಾ ಸುಲಭ. ನನಗೆ ಮಾತ್ರ ತುಂಬಾ ಬೇಸರ."

"ಏನು ಬೇಸರಾನಾ? ಅಪ್ಪ, ಅಮ್ಮ, ತಂಗಿ, ಸ್ನೇಹಿತೆಯರು ಎಲ್ಲಾ ಇದ್ದಾರೆ. ಅಷ್ಟಾದರೂ ಬೇಸರಾನಾ?"

ಎಲ್ಲಾ ಇದ್ದರೂ ನೀನು ಇದ್ದ ಹಾಗೆ ಆಗುತ್ತಾ ಅಂತ ಹೇಳಬೇಕೆಂದು ಕೊಂಡರೂ ಹೇಳಲಾಗದೆ, "ಗೋಪಿ ಹೊತ್ತಾಯ್ತು ಬೇಗ ಹೋಗೋಣ... ಅವಳು ಅವಸರಿಸಿದಾಗ, ಅವನು ಅವಳ ಕೈ ಹಿಡಿದ."

"ಏಯ್, ಅದೇನೋ ಹೇಳಬೇಕು. ಅಂದೆಯಲ್ಲಾ ಹೇಳಲೇ ಇಲ್ಲ"

"ಹೇಳುಕ್ಕೆ ಎಲ್ಲಿ ಬಿಡ್ತೀಯಾ ನೀನು. ಯಾವಾಗಲೂ ಮಾತನ್ನ ಬದಲಾಯಿಸಿ ಬಿಡ್ತೀಯಾ. ನಿನಗೆ ನನ್ನ ಮೇಲೆ ಆಸಕ್ತಿ ಇಲ್ಲ. ಇನ್ನೂ ನನ್ನ ಮಾತನ್ನು ಕಟ್ಟಿಕೊಂಡು ಏನ್ಮಾಡ್ತೀಯ?"

"ಆಮೇಲೆ ಗೋಪಿ ಕೇಳಲೇ ಇಲ್ಲ ಅಂತ ಬೈಯಬೇಡ."

"ಇಲ್ಲಪ್ಪಾ ಇಲ್ಲ. ನಿನ್ನನ್ನ ಬೈಯೋಕೆ ನಾನ್ಯಾರು?"

"ಈಗ ಹಾಗಂತೀಯ ಅಷ್ಟೇ.... ನಂಗೊತ್ತು ಈಗ ನೀನು ಆಡುತ್ತಿರುವುದು

ಬರೀ ನಾಟಕ... ನಿನ್ನ ಮನಸ್ನಲ್ಲಿ ಏನಿದೆ ಅಂತ ನಂಗೊತ್ತು."

"ಏನಿದೆ? ಹೇಳು ನೋಡೋಣ."

"ಈಗ ಹೇಳಲೇ ಬೇಕಾ? ಮುಂದಿನ ಸಲ ಬಂದಾಗ ಹೇಳ್ತೀನಿ..."

"ಅಂತೂ ನಿನಗೆ ನನ್ನನ್ನು ಸತಾಯಿಸುವುದು ಅಂದರೆ ತುಂಬಾ ಇಷ್ಟ. ನಿನ್ನ ಸ್ನೇಹ ಮಾಡಿದೆನಲ್ಲ ನಾನು, ಅದು ನನ್ನ ಕರ್ಮ."

"ಪ್ಲೀಸ್, ಈಗ ಜಗಳ ಸಾಕು. ನಾನು ಇವತ್ತು ಊರಿಗೆ ಹೋಗಬೇಕು. ಆಮೇಲೆ ನಿನಗೆ ಬೇಜಾರಾಗುತ್ತೆ."

"ನಿನಗೆ, ಬೇಜಾರಾಗುಲ್ವಾ?"

"ಅಲ್ಲಿ ಯಾವ ಯೋಚನೆಗೂ ಸಮಯವೇ ಇರುವುದಿಲ್ಲ." ವನಜ ಮಂಕಾದಳು.

"ಅಲ್ಲಿಗೆ ಹೋಗಿ ನನ್ನನ್ನು ಮರತೇ ಬಡ್ತೀಯೇನೋ"

"ಛಿ..... ಹುಚ್ಚಿ.... ಮರೆಯುವುದಾದರೆ, ನಿನ್ನ ಹತ್ತಿರ ಇಷ್ಟು ಮಾತಾಡುತ್ತಿದ್ನಾ.... ಓ.... ಕೇ.... ಬೈ.... ಎಂದು ಕೈ ಬೀಸಿ, ಹಿಂತಿರುಗಿ ನಡದೇಬಿಟ್ಟ. ವನಜ ಬೆಪ್ಪಾಗಿ ಅವನನ್ನೇ ನೋಡಿದಳು. ಅವನ ಮನಸ್ನಲ್ಲಿ ಏನಿದೆ ಅಂತ ಕಡೆಗೂ ತಿಳಿಯಲಿಲ್ಲ. ಮಂಕಾಗಿ ಮನೆಗೆ ಬಂದಳು."

"ಏನೇ ಬಿಸಿಲ್ನಲ್ಲಿ ಅಲೆಯುದಕ್ಕೆ ಎಲ್ಲಿ ಹೋಗಿದ್ಯೆ?" ಅಂತ ತಾಯಿ ಗದರಿಸಿದಾಗ, ನಿಜವನ್ನೇ ನುಡಿದಿದ್ದಳು.

"ಗೋಪಿ ಊರಿಗೆ ಬಂದಿದ್ದಾನೆ. ನೋಡಿ ಮಾತನಾಡಿಸಿಕೊಂಡು ಬರೋಣ ಅಂತ ಹೋಗಿದ್ದೆ."

"ನಿನಗೆ ಅಷ್ಟು ತಿಳಿಯಲ್ವೆ? ನೀನು ಈಗ ಚಿಕ್ಕ ಹುಡುಗಿಯಲ್ಲ."

"ಗೊತ್ತಮ್ಮ..... ಗೋಪಿನ ಮಾತಾಡಿಸಿಕೂಂಡು ಬಂದ್ರೆ ತಪ್ಪೇನು?"

"ತಪ್ಪೋ..... ಸರಿಯೋ..... ಹೇಳಿದಷ್ಟು ಕೇಳು. ನಿಮ್ಮಪ್ಪನಿಗೆ ಗೊತ್ತಾದ್ರೆ ಕಾಲು ಮುರೀತಾರೆ.... ಅಷ್ಟೇ."

"ಕಾಲು ಮುರಿಸಿಕೊಳ್ಳುವಂತಹ ಕೆಲಸ ತಾನೇನು ಮಾಡಿದೀನಿ ಅಂತ ಅವಳಿಗೆ ಗೊತ್ತಾಗಲಿಲ್ಲ. ಈ ಅಮ್ಮನ ಗೊಣಗಾಟ ಇದ್ದೇ ಇರುತ್ತೆ ಅಂತಂದು ಕೊಂಡರೂ ಸ್ವಲ್ಪ ಆತಂಕವುಂಟಾಗಿತ್ತು. ತಾನು ಗೋಪಿಯನ್ನು ಪ್ರೀತಿಸುತ್ತಿದೀನಿ" ಅಂತ ಅನ್ನುವುದು ಅವಳಿಗೆ ಚೆನ್ನಾಗಿ ಅರ್ಥವಾಗಿತ್ತು. ಆದರೆ ಗೋಪಿ ತನ್ನನ್ನು ಪ್ರೀತಿಸುತ್ತಿದ್ದಾನೋ ಇಲ್ಲವೋ ತಿಳಿದಿರಲಿಲ್ಲ. ಒಳ್ಳೆಯ ಸ್ನೇಹಿತ.... ಅವನೇ ತನ್ನ ಬಾಳ ಸಂಗಾತಿಯಾಗಲಿ ಎಂದು ಆಶಿಸುತ್ತಿದ್ದಳು. ಆದರೆ

ಅದನ್ನು ಬಾಯಿಬಿಟ್ಟು ತನ್ನ ತಂದೆ ತಾಯಿಗೆ ಹೇಳುವ ಧೈರ್ಯ ಬಂದಿರಲಿಲ್ಲ.

ತಂದೆಗೆ ಪೋಲಿಸ್ ಇಲಾಖೆಯವರನ್ನು ಕಂಡರೆ ಅಷ್ಟಕ್ಕಷ್ಟೇ ಎಂದು ತಾಯಿಯಿಂದ ತಿಳಿದಿತ್ತು. ಆದರೆ ಅದಕ್ಕೆ ಕಾರಣ ತಿಳಿದಿರಲಿಲ್ಲ. ಇಲ್ಲಿ ಹೀಗಾದರೆ, ಗೋಪಿಯ ಮನೆಯಲ್ಲಿ ಇನ್ನೊಂದು ತರಹ.

ಗೋಪಿಯ ತಂದೆಗೆ ಮೊದಲಿನಿಂದಲೂ ಏನೋ ಅಹಂಕಾರ. ದರ್ಪ ಜೋರು, ಜಂಭ, ಇಂಥ ಗುಣಗಳನ್ನು ಅಳವಡಿಸಿಕೊಂಡಿದ್ದ ಅವರಿಗೆ ತಮ್ಮ ಇಲಾಖೆಯವರನ್ನು ಬಿಟ್ಟು ಬೇರೆಯವರನ್ನು ಕಂಡರೆ ಏನೋ ತಾತ್ಸಾರ. ಅದರಲ್ಲೂ, ಅವಿದ್ಯಾವಂತರು, ಬಡತನದಲ್ಲಿರುವವರು, ಅಸಹಾಯಕರು, ಇವರುಗಳನ್ನು ತಮ್ಮಿಂದ ದೂರ ಇಟ್ಟಿರುತ್ತಿದ್ದರು. ಯಾರನ್ನು ತಾನಾಗಿಯೋ ಎಂದೂ ಮಾತನಾಡಿಸಿದವರಲ್ಲ. ಮನೆಯಲ್ಲೂ ತಮ್ಮ ಶಿಸ್ತು ತಮ್ಮ ಮಾತೇ ನಡೆಯಬೇಕೆಂಬ ಹಠ. ಮೈಥಿಲಿಯಾಗಲೀ, ಗೋಪಿಯಾಗಲೀ, ಅವರ ನಿಯಮಗಳನ್ನು ಹೆಚ್ಚಿಗೆ ವಿರೋಧಿಸುತ್ತಿರಲಿಲ್ಲವಾದ್ದರಿಂದ, ಎಲ್ಲಾ ಸುಸೂತ್ರ. ಆದರೂ ಕೆಲವೊಮ್ಮೆ ಘರ್ಷಣೆಯಾಗುತ್ತಿದ್ದುದೂ ಉಂಟು.

ಚಿಕ್ಕ ಹುಡುಗಿ ವನಜ, ಮಳೆಯ ಕಾರಣದಿಂದ ಅವರ ಮನೆಗೆ ಬಂದಾಗಿನಿಂದ ಆಗಾಗ್ಗೆ ಅವರ ಮನೆಗೆ ಬರುತ್ತಿದ್ದುದನ್ನು ಅವರು ಹೆಚ್ಚಿಗೆ ಗಮನಿಸಿರಲಿಲ್ಲ. ಗಮನಿಸಿದ್ದರೂ ಅದಕ್ಕೆ ಬೆಲೆ ಕೊಡುತ್ತಿರಲಿಲ್ಲ. ಯಾಕೆಂದರೆ ಮನೆಯ ವಿಷಯಗಳಿಗಿಂತಲೂ, ಹೊರಗಿನ ಕೆಲಸದ ಕಡೆ ಗಮನ ಹೆಚ್ಚು. ಗೋಪಿ, ಅಪ್ಪನ ಆಸೆಯನ್ನು ಮೀರದೆ ಪೋಲಿಸ್ ಡಿಪಾರ್ಟ್‌ಮೆಂಟ್‌ಗೆ ಸೇರಿಕೊಳ್ಳಲು ಒಪ್ಪಿದಾಗ ಆತನಿಗೆ ಮಗನ ಮೇಲಿನ ವಿಶ್ವಾಸ ಅಧಿಕವಾಗಿತ್ತು. "ಮೈಥಿಲಿ, ನೋಡಿದ್ಯಾ ನನ್ನ ಮಗನ್ನ..... ನನ್ನ ಗೌರವವನ್ನು ಹೆಚ್ಚಿಸಲು ಹುಟ್ಟಿರುವವನು..... ಈ ಇಲಾಖೆಗೆ ಸೇರಿ, ನನಗಿಂತ ಹೆಚ್ಚಿನ ಸಮಾಜಸೇವೆ, ದೇಶಸೇವೆ ಮಾಡಲಿ ಅಂತ ನಾನು ಹಾರೈಸುತ್ತೀನಿ" ಎಂದು ನುಡಿದಿದ್ದನು.

ಮೈಥಿಲಿಗೆ ಮಾತ್ರ ಮನಸ್ಸು ಮುದುಡಿತ್ತು. ತಂದೆಗೆ ತಿಳಿಯದಂತೆ ಮಗನ ಕೈ ಹಿಡಿದು ಕೇಳಿಕೊಂಡಿದ್ದಳು.

"ನೀನು ಪೋಲಿಸ್ ನೌಕರಿ ಮಾಡಿದರೆ ನನಗೆ ಬೇಸರವಿಲ್ಲ. ಆದರೆ ನೀನು ನಿನ್ನ ಅಪ್ಪನಂತೆ ಒರಟು ಮನುಷ್ಯನಾಗಬಾರದು ಅಷ್ಟೇ."

"ಇಲ್ಲಮ್ಮಾ.... ಹಾಗಾಗಲಾರೆ. ನಿನ್ನ ಮಾತನ್ನು ಜ್ಞಾಪಕದಲ್ಲಿಟ್ಟುಕೊಳ್ತೀನಿ.

"ವನಜಂಗೆ ಹೇಳಿಬಿಟ್ಟು ಹೋಗು. ಈ ಊರಿನಲ್ಲಿ ನಿನ್ನ ಸ್ನೇಹಿತರಷ್ಟೇ ಆತ್ಮೀಯಳಾದವಳು ಅವಳು..... ಅಲ್ವಾ?

"ಹೌದಮ್ಮಾ.... ಆಗಾಗ್ಗೆ ನಮ್ಮ ಮನೆಗೆ ಅವಳು ಬರುತ್ತಿದ್ದರೆ ನಿನ್ನ ಬೇಸರ ಕಳೆಯುತ್ತೆ ಅಲ್ವಾ?

"ಹೌದು. ಆದಿನ ಅವತ್ತು ಆ ಹುಡುಗಿಯನ್ನು ಕಂಡದಿನದಿಂದ ನನಗೆ ಆ ಹುಡುಗಿಯ ಮೇಲೆ ಏನೋ ಮಮತೆ...."

"ವನಜಾ ನಿನಗೆ ಅಷ್ಟು ಇಷ್ಟಾನಾ? ಅಪ್ಪ ಏನನ್ನುತ್ತಾರೋ....."

"ಅವರು ಏನಾದರೂ ಅನ್ನಲಿ. ಅವರು ಸದಾ ನನ್ನ ಜತೇಲಿ ಮನೇಲಿರುವುದಿಲ್ಲ. ನನ್ನ ಯೋಗಕ್ಷೇಮ ವಿಚಾರಿಸುಕ್ಕೆ ಬಂದರೆ ಆ ಹುಡುಗಿಯನ್ನು ಯಾರು ಆಕ್ಷೇಪಣೆ ಮಾಡುವುದಿಲ್ಲ."

"ಸರಿ" ಎಂದು ಹೊರಟಾಗ, ತಂದೆ ಗುಡುಗಿದ್ದರು.

"ಅವರು ಯಾವ ದೊಡ್ಡ ಮನುಷ್ಯರು ಅಂತ ಅವರ ಮನೆಗೆ ಹೋಗಿ ಹೇಳಬೇಕು? ನನಗಿದೆಲ್ಲ ಸರಿ ಹೋಗುಲ್ಲ."

"ಅವರೂ ನಮ್ಮ ಪರಿಚಯದವರೇ.... ಆ ಹುಡುಗಿ ಆಗ ಈಗ ನಮ್ಮ ಮನೆಗೆ ಬಂದು ನಮಗೆ ಹತ್ತಿರದವಳಾಗಿದ್ದಾಳೆ. ಹೇಳಿ ಬಂದರೆ ತಪ್ಪೇನು?"

"ಸುಮ್ಮನಿರು, ತಲೆಹರಟೆ ಜನರು ಅವರುಗಳು....."

"ಅವರು ಹೇಗಿದ್ದರೆ ನಮಗೇನು? ನಮಗೆ ಹೇಗೆ ಬೇಕೋ ಹಾಗೆ ನಾವು ಇರಬೇಕು! ಅದು ಜಾಣತನ."

"ಆ ಹುಡುಗಿ ಪರವಹಿಸಿ, ನೀನು ನನ್ನ ಹತ್ತಿರ ವಾದ ಮಾಡಬೇಡ ಅವರ ಮನೆ ಕೆಲಸವನ್ನೆಲ್ಲ ನಮಗೆ ತಿಳಿಸಿಯೇ ಮಾಡ್ತಾರ್ಯೆ?"

"ಅವರ ಮನೇಲಿ ಇಂಥ ಸಂದರ್ಭ ಬಂದಿಲ್ಲ."

"ನೋಡು ಮೈಥಿಲಿ, ನಿನ್ನ ಮಾತು ನನಗೆ ಬೇಡ.... ಆ ಹುಡುಗಿ ಹೆಚ್ಚಿಗೆ ಬರುವುದೇ ನನಗಿಷ್ಟವಿಲ್ಲ."

"ನನಗೆ ಗೊತ್ತು ನಿಮಗೆ ಇಷ್ಟವಿಲ್ಲ ಅಂತ. ದೇವರೂ ನನಗೂ ಒಂದು ಹೆಣ್ಣು ಮಗುವನ್ನು ಕರುಣಿಸಿದ್ದರೆ, ನಾನು ಹೀಗಾಡುತ್ತಿರಲಿಲ್ಲವೇನೋ...."

ಆ ಮಾತಿಗೆ ಆತ ಸುಮ್ಮನಾದರು. ಗೋಪಿ ಹುಟ್ಟಿದ ಮೇಲೆ ಅವರಿಗೆ ಮಕ್ಕಳಾಗಿರಲಿಲ್ಲ. ಅಲ್ಲದೇ ಅವರು, ಮೈಥಿಲಿಗೆ ತಿಳಿಯದಂತೆ ಒಂದು ಕೆಲಸವನ್ನು ಮಾಡಿದ್ದರು. ಮೈಥಿಲಿಗೆ ಹುಟ್ಟಿದ್ದು ಅವಳಿ ಮಕ್ಕಳು. ಗೋಪಿ ಜನಿಸಿದ ಹದಿನೈದು ನಿಮಿಷಗಳ ನಂತರ ಇನ್ನೊಂದು ಗಂಡು ಮಗು ಹುಟ್ಟಿತ್ತು. ಆ ಸಮಯದಲ್ಲಿ ಅಲ್ಲಿದ್ದ ಅವರ ತಂಗಿ ಅಣ್ಣನನ್ನು ಕಾಡಿ

ಬೇಡಿ, ಇನ್ನೊಂದು ಮಗುವನ್ನು ತಾನು ಪಡೆದಿದ್ದಳು. ಮೈಥಿಲಿಗೆ ಆ ವಿಷಯ ತಿಳಿದರೆ ಕೊರಗುತ್ತಾಳೆ ಎಂದು ತಿಳಿದಿದ್ದರಿಂದ ಅದನ್ನು ರಹಸ್ಯವಾಗಿಟ್ಟಿದ್ದರು. ತಂಗಿ ಆ ಮಗುವನ್ನು ಕರೆದುಕೊಂಡು ತಮಿಳುನಾಡಿಗೆ ಹೊರಟುಹೋಗಿದ್ದರಿಂದ ಆ ವಿಷಯ ಯಾರಿಗೂ ತಿಳಿಯಲೇ ಇಲ್ಲ. ಅವರುಗಳು ಹೆಚ್ಚಿಗೆ ಬರುತ್ತಿರಲಿಲ್ಲವಾದ್ದರಿಂದ ಯಾರಿಗೂ ಆ ವಿಷಯವನ್ನು ಯೋಚಿಸುವ ಅವಕಾಶವೇ ಬರಲಿಲ್ಲ. ಆ ನಂತರ ತಮಗೆ ಮತ್ತೆ ಮಕ್ಕಳಾಗದಿದ್ದಾಗ ಆತನಿಗೆ ವ್ಯಥೆ ಎನಿಸಲಿಲ್ಲ. ಆದರೆ ಮೈಥಿಲಿ ಮಕ್ಕಳ ಮೇಲೆ ಆಸೆ ವ್ಯಕ್ತ ಪಡಿಸಿದಾಗ, ನಿಜ ವಿಷಯವನ್ನು ತಿಳಿಸುವ ಇಚ್ಛೆ ಇರಲಿಲ್ಲ. ತಂಗಿಗೆ ಕೊಟ್ಟ ಮಗುವನ್ನು ವಾಪಸ್ಸು ಪಡೆದು, ಸಣ್ಣವರಾಗುವ ಆಸೆ ಇಲ್ಲ. ಹೆಂಡತಿಗೆ ನಿಜ ವಿಷಯತಿಳಿಸಿ, ದ್ರೋಹ ಮಾಡಿದುದನ್ನು ಒಪ್ಪಿಕೊಳ್ಳಲು ಸಿದ್ಧರಾಗಿರಲಿಲ್ಲ. ಹೀಗಾಗಿ ಏನೋ ಜಂಭ, ಏನೋ ದುರಹಂಕಾರ, ಏನೋ ಧಿಮಾಕು ಎಂದು ಹೆಸರುಗಳಿಸಿ, ತಮ್ಮ ಲೋಕದಲ್ಲೇ ಕಾಲ ಕಳೆಯುತ್ತಿದ್ದರು. ಹಾಗಾಗಿ ಹೆಂಡತಿ ಅಕ್ಕಪಕ್ಕದವರ ಮನೆಯ ಮಕ್ಕಳನ್ನು ಕರೆದು ತಿಂಡಿ, ಹಣ್ಣು ಕೊಡುವುದನ್ನು ಕಂಡಾಗ ಕಂಡೂ ಕಾಣದಂತೆ ತಿರುಗಾಡಿ ಕೊಂಡಿರುತ್ತಿದ್ದರು. ಆದರೂ, ಯಾರೋ ಒಬ್ಬ ಗುಮಾಸ್ತನ ಮಗಳು ವನಜ, ಹೆಂಡತಿಗೆ ಪ್ರಿಯವಾದ ಸಂಗತಿ ಅವರಿಗೆ ಅಪ್ರಿಯವಾಗಿತ್ತು. ಆದರೆ ಅದನ್ನು ಖಂಡಿಸಲಾರರು. ಕ್ರಮೇಣ ಕಡಿಮೆಯಾಗಬಹುದು ಎಂದು ಭಾವಿಸಿದ್ದರು. ಆದರೆ ಅದು ಯಾವ ಹಂತದಲ್ಲಿದೆ ಎಂದು ತಿಳಿದುಕೊಳ್ಳುವ ವ್ಯವಧಾನ ಅವರಿಗಿರಲಿಲ್ಲ. ತಾಯಿ ಮಗ ಒಂದು. ಇಬ್ಬರಿಗೂ ವನಜಳನ್ನು ಕಂಡರೆ ಇಷ್ಟ ಎನ್ನುವ ವಿಚಾರ ಆತನಿಗೆ ತಿಳಿದಿರಲಿಲ್ಲವಾದರೂ, ಮಗ ಟ್ರೈನಿಂಗ್‌ಗೆಂದು ಪರ ಊರಿಗೆ ಹೊರಟಾಗ, ಆತನಿಗೆ ಏನೋ ಸಮಾಧಾನ.

ತಾನು ಅಷ್ಟು ಹೇಳಿದರೂ, ಮಗ ಅವರ ಮನೆಗೆ ಹೋಗಿ ಹೇಳಿಬಂದ ಎನ್ನುವ ವಿಷಯ ತಿಳಿದಾಗ, ಮಗನ ಮೇಲೆ ಕೋಪವುಂಟಾಗಿತ್ತು. ಆದರೆ ಮಗನೊಡನೆ ವಿರೋಧ ಕಟ್ಟಿಕೊಳ್ಳುವ ಮನಸ್ಸಿಲ್ಲದಿದುದರಿಂದ ಸುಮ್ಮನಾಗಿದ್ದರು. ಹೇಗೂ ದೂರ ಹೋಗ್ತಾನೆ. ಎಲ್ಲಾ ಸರಿಹೋಗುತ್ತದೆ ಎಂದುಕೊಂಡಿದ್ದರು.

ಆ ನಂತರವೂ ವನಜ ಆಗಾಗ್ಗೆ ಬರುತ್ತಿದ್ದುದು ಗೋಪಿ ವನಜಳಿಗೆ ಕಾಗದ ಬರೆದುದು ಒಂದೂ ಆತನಿಗೆ ತಿಳಿಯದು. ಎಷ್ಟಾದರೂ ತಾಯಿ ಮಗ ಒಂದು. ತಾನೇ ಒಂದು ಎಂದು ತಿಳಿದಿದ್ದರೂ, ತಾನು ಮಗನ ಮೇಲೆ ತನ್ನ ಹಕ್ಕನ್ನು ಚಲಾಯಿಸುತ್ತಿದ್ದೇನೆ ಎನ್ನುವ ಒಂದು ಸಮಾಧಾನ.

ಈ ವಿಷಯಗಳೆಲ್ಲ ಗೋಪಿಗೆ ತಿಳಿಯದ್ದೇನಲ್ಲ. ತನ್ನ ವಿದ್ಯಾಭ್ಯಾಸ, ಉದ್ಯೋಗ ತನ್ನ ತಂದೆಯ ಇಚ್ಛೆಯಂತೆಯೇ ನಡೆದ ಮೇಲೆ ತನ್ನ ಮದುವೆಯೂ ಅವರ ಇಚ್ಛೆಯಂತೆಯೇ ನಡೆಯಬಹುದು ಎಂದು ಅವನು ಊಹಿಸಿದ್ದ. ವನಜಳ ಬಗ್ಗೆ ಅವರಿಗೆ ಯಾವ ಆಸಕ್ತಿಯೂ ಇಲ್ಲ. ಅವಳ ಮನೆಯವರ ಬಗ್ಗೆ ಯಾವ ಆದರಾಭಿಮಾನಗಳಿಲ್ಲ ಎನ್ನುವುದನ್ನು ತಿಳಿದಿದ್ದ. ಆದರೂ, ಯಾರಿಗೂ ತಿಳಿಯದಂತೆ ಒಳಗೊಳಗೇ ಅವಳನ್ನು ಪ್ರೀತಿಸಿದ್ದ. ಅದನ್ನು ತಾಯಿಗೂ ತಿಳಿಸಿರಲಿಲ್ಲ. ಆದರೆ ಮಗನ ಮನಸ್ಸಿನಲ್ಲೇನಿದೆ ಎಂದು ತಾಯಿಗೆ ತಿಳಿದಿತ್ತು. ಅರ್ಥಮಾಡಿಕೊಂಡಿದ್ದಳು. ಅದನ್ನು ಅವಳು ಒಪ್ಪಿಕೊಂಡಿಯೂ ಇದ್ದಳು.

ವನಜ ಮೊದಲಿನಿಂದ ಕಂಡ ಹುಡುಗಿ. ಗೋಪಿಯ ಸ್ನೇಹಿತೆ. ಅವನು ಅವಳನ್ನು ಪ್ರೀತಿಸಿದರೆ ಅದರಲ್ಲಿ ತಪ್ಪೇನಿಲ್ಲ ಎಂದು ಅವಳ ಅನಿಸಿಕೆ. ಆದರೆ ಅದನ್ನು ಎಂದೂ ಬಹಿರಂಗವಾಗಿ ಯಾರ ಎದುರಿಗೂ ಹೇಳಿದವಳಲ್ಲ. ಆದರೆ ಯಾವಾಗಲೋ ಒಮ್ಮೆ ಗಂಡನಾಡಿದ್ದ ಮಾತು ನೆನಪಿಗೆ ಬಂತು.

ಪೋಲಿಸ್ ಇಲಾಖೆಯಲ್ಲಿ ಕೆಲಳದಲ್ಲಿರುವವರು, ಅದೇ ಇಲಾಖೆಯಲ್ಲಿರುವವರ ಜತೆ ನೆಂಟಸ್ತಿಕೆ ಬೆಳೆಸಬೇಕು. ಅದೇಸರಿ. ಇಲ್ಲದಿದ್ದರೆ ಸಂಬಂಧ ಸರಿಹೋಗುವುದಿಲ್ಲ. ಅದಕ್ಕೇ ನಾನು ನನ್ನ ಮಗನಿಗೆ ಪೋಲಿಸ್ ಅಧಿಕಾರಿಯ ಮಗಳನ್ನು ಹೊರತು ಬೇರೆ ಯಾವ ಹೆಣ್ಣನ್ನು ನೋಡುವುದಿಲ್ಲ ಎಂದು ಆಡಿದ್ದರು. ಆ ಮಾತು ಅವಳನ್ನು ಹೆದರಿಸಿತ್ತು. ತಂದೆ ಆಡಿದ ಮಾತನ್ನು ಮಗನಿಗೆ ಹೇಳಿ, ಮಗನ ಮನಸ್ಸನ್ನ ಕೆಡಿಸಲು ಇಷ್ಟವಾಗಲಿಲ್ಲ. ತಂದೆಯ ಆಸೆಗೆ ಒಪ್ಪಿ ಈ ಇಲಾಖೆಗೆ ಕೆಲಸಕ್ಕೆ ಸೇರಿದ ಮಾತ್ರಕ್ಕೆ. ಇದೇ ನಿಯಮ ಮದುವೆಗೂ ನಡೆಯವೇಕೆಂದೇನಿಲ್ಲ. ಹಾಗೇನಾದರೂ ಆದರೆ ಮಗ ಸುಖವಾಗಿರುವುದಿಲ್ಲವೆಂದು ಅವಳು ಬಲ್ಲಳು. ಆದರೆ ಇದನ್ನು ಗಂಡನಿಗೆ ತಿಳಿಸಲಾರಳು. ಆದರೂ ಮನದಲ್ಲಿ ಏನೋ ಆತಂಕ. ದಿಗಿಲು!

ವನಜಳಾದರೋ, ಗೋಪಿಗೆ, ತಕ್ಕಂತೆ ಹೇಳಿ ಮಾಡಿಸಿರುವ ಹುಡುಗಿಯಲ್ಲ ಎಂದು ಗೊತ್ತು. ಅತಿ ಸಾಧಾರಣ ರೂಪಿನ ವನಜ ಗೋಪಿಗೆ ಸಮವಲ್ಲ. ಆದರೆ ಗೋಪಿಗೆ, ತನಗೆ, ಪ್ರಿಯಳಾದ ಹುಡುಗಿ ವನಜಳನ್ನು, ಇಬ್ಬರೂ ರೂಪಿನಿಂದ ಅಳೆದವರಲ್ಲ. ವನಜ ಕುರೂಪಿ ಏನಲ್ಲ. ಮನಸ್ಸು ಒಪ್ಪಿಕೊಂಡರೆ, ಕಣ್ಣು ಒಪ್ಪುತ್ತದೆ ಎನ್ನುವ ಮತ ಆಕೆಯದು. ಈ ವಿಚಾರಗಳು ವನಜಳಿಗೆ

ತಿಳಿಯದು. ಮುಗ್ಧೆಯಂತೆ ಗೋಪಿಯನ್ನು ಪ್ರೀತಿಸಿದ್ದಳು.

ಆದರೆ ಈಚೆಗೆ ಗೋಪಿ, ಬದಲಾಗಿದ್ದಾನೆ ಎನ್ನುವ ಅನುಮಾನ ಅವಳನ್ನು ಕಾಡುತ್ತಿತ್ತು. ಅದಕ್ಕೆ ಬಹುಶಃ ತನ್ನ ರೂಪ ಕಾರಣವಿರಬಹುದು ಎನ್ನುವ ಸಂದೇಹ.

ಟ್ರೈನಿಂಗ್ ಮುಗಿದ ನಂತರ, ಯಾವುದೋ ಒಂದು ಊರಿನಲ್ಲಿ ಮೊದಲು ಪೋಸ್ಟಿಂಗ್ ಆಗಿತ್ತು. ಆರೇಳು ತಿಂಗಳ ನಂತರ ತಂದೆಯ ಶಿಫಾರಸ್ಸಿನಮೇಲೆ, ಇದೇ ಊರಿಗೆ ಬಂದು ಸೇರಿಕೊಂಡಿದ್ದ. ಆದರೆ ಮನೆಯಿಂದ ಹದಿನೈದು ಇಪ್ಪತ್ತು ಕಿಲೋ ಮೀಟರ್‌ಗಳಿಗಿಂತಲೂ ದೂರವಾದುದರಿಂದ ಗೋಪಿಗೆ ಸಮಯ ಸಿಗುತ್ತಿದುದೇ ಕಡಿಮೆ. ಆದರೆ ಭಾನುವಾರಗಳಂದು ವನಜಾ ಅವನಿಗಾಗಿ ಕಾಯುತ್ತಿದ್ದಳು. ಅವನು ಬರದಿದ್ದರೆ ಅವನ ಮೇಲಿನ ಸಂದೇಹ ಹೆಚ್ಚಾಗುತ್ತಿತು. ಅವನ ಮನೆಗೆ ಹೋಗುವಂತಿಲ್ಲ. ಅಲ್ಲಿ ಅವರ ಅಪ್ಪ ಇರುತ್ತಾರೆ. ಇಲ್ಲಿಗೆ ಅವನು ಬರುವಂತಿಲ್ಲ. ಅಪ್ಪ ಅಮ್ಮ ಇಬ್ಬರೂ ಅವನು ಬರುವುದನ್ನು ಸಂದೇಹದಿಂದ ನೋಡುತ್ತಾರೆಂದು ಅವಳಿಗೆ ಗೊತ್ತು. ಆದರೆ ಗೋಪಿಗೆ ಆ ಹೆದರಿಕೆ ಇಲ್ಲ. ಒಂದೊಂದು ಸಲ ದಿಢೀರನೇ ಬಂದು ಬಿಡುತ್ತಿದ್ದೆ. ವನಜಳೇ ಉಪಾಯ ಮಾಡಿ ಅವನು ಮನೆಗೆ ಬರದಂತೆ ಮಾಡಿ ಹೊರಗೆಲ್ಲಾದರೂ ಭೇಟಿಯಾಗುವುದನ್ನು ಯೋಚಿಸುತ್ತಿದ್ದಳು.

"ಈ ನಡುವೆ ನನಗೆ ನಿನ್ನ ಮೇಲೆ ಏನೋ ಅನುಮಾನ ಜಾಸ್ತಿಯಾಗ್ತಿದೆ." ಅನುಮಾನ ವ್ಯಕ್ತಪಡಿಸಿದಾಗ ಅವನು ಜೋರಾಗಿ ನಕ್ಕಿದ್ದ.

"ನಗಬೇಡ ನಿಜ ಹೇಳು ಗೋಪಿ. ನಿನಗೆ ನನ್ನ ಮೇಲಿನ ಪ್ರೀತಿ ಕಡಿಮೆಯಾಗ್ತಿದೆ ಅಲ್ವಾ?"

"ಹಾಗಂತ ಹೇಳಬೇಕಾದವನು ನಾನು. ನೀನಲ್ಲ"

ಆದರೂ ನನಗೇನೋ ಹೆದರಿಕೆ... ನೀನು ಎಷ್ಟೇ ಚೆನ್ನಾಗಿದೀಯ.... ನಾನು ನಿನಗೆ ತಕ್ಕವಳಲ್ಲ ಅಂತ ಮುಜುಗರವಾಗುತ್ತೆ. ಆಗ ಏನೇನೋ ಅನ್ನಿಸುತ್ತೆ.

"ಆ ಮಾತು ಈಗೇಕೆ? ನಾನು ಎಂದಾದ್ರೂ ತಮಾಷೆಗೋಸ್ಕರನಾದ್ರೂ ನಾನು ನಿನ್ನನ್ನು ಹಾಗಂದಿಲ್ಲ. ನೀನಗೇಕೆ ಹಾಗೆನ್ನಿಸಬೇಕು?"

"ಹಾಗಲ್ಲ ಗೋಪಿ.... ಅದು ನಿಜವಾದ ಮಾತು ಅಲ್ವಾ? ಯಾರಾದ್ರೂ ನಂಬುವಂತಹ ಮಾತು. ನಿನ್ನ ಹೆಂಡತಿ ಸುಂದರವಾಗಿರಬೇಕು ಅಂತ ನಿನಗನ್ನಿಸುಲ್ವಾ?"

"ಅದೆಲ್ಲ ನನಗೆ ತಿಳಿಯದು. ನನ್ನ ಕಣ್ಣಿಗೆ ನೀನು ಸುಂದರಿಯೇ.... ಅಲ್ಲದೇ ನಾನು ಹಾಗೆಲ್ಲ ಅತಿ ಆಸೆ ಪಡುವವನಲ್ಲ..... ಹೆಂಡತಿ ತುಂಬಾ ಚೆನ್ನಾಗಿದ್ರೆ ಸ್ನೇಹಿತರಿಗೆ ಹೊಟ್ಟೆಕಿಚ್ಚು ಬರುತ್ತೆ. ಶತೃಗಳೂ ಹೆಚ್ಚಾಗ್ತಾರೆ....."

"ಈ ಕಾರಣದಿಂದ ನನ್ನನ್ನ ಮದುವೆಯಾಗ್ತೀಯಾ? ಹಾಗಾದ್ರೇ..."

"ಮದುವೆ ಮಾತನ್ನೆಲ್ಲಿ ಆಡಿದೆ? ಸುಮ್ಮನೇ ಜನರಲ್ ಆಗಿ ಹೇಳಿದೆ."

"ಮದುವೆ ವಿಷಯ ಎತ್ತಿದ ಕೂಡಲೇ, ನೀನು ತಮಾಷೆಯಾಗಿ ಮಾತನ್ನಾ ತೇಲಿಸ್ತೀಯಾ? ಗಂಭೀರವಾಗಿ ಯಾವಾಗ ಯೋಚಿಸ್ತೀಯಾ?"

"ಆಗಲಿ ಅವಾಂತರವೇನು?"

"ಅವಾಂತರವೇನೂ ಇಲ್ಲದಿದ್ದರೆ ನಿಧಾನವಾಗಿಯೇ, ಯೋಚಿಸು. ಅಷ್ಟರಲ್ಲಿ ನಾನು ಮುದುಕಿಯಾಗಿರ್ತೀನಿ."

ಪರವಾಗಿಲ್ಲ ಬಿಡು. ಆಗ ನಾನು ನಿನ್ನನ್ನೇ ಮದುವೆಯಾಗ್ತೀನಿ. ಯಾಕೆಂದ್ರೆ ನಾನೂ ಮುದುಕನಾಗಿರ್ತೀನಿ. ನನಗೆ ಬೇರೆಯಾರು ಹೆಣ್ಣು ಕೊಡ್ತಾರೆ....?

"ಪ್ಲೀಸ್ ಗೋಪಿ ಹೀಗೇ ತಮಾಷೆಯಾಗಿ ಕಾಲ ಕಳೀಬೇಡ.... ಆಮೇಲೆ ನಾನು ನಿನಗೆ ಸಿಗದೇ ಹೋಗಬಹುದು....."

"ಯಾಕೆ ಸಿಗುಲ್ಲ? ಮೊದಲ್ನಿಂದ ನೀನೇ ನನ್ನ ಗೆಳತಿ... ಮುಂದೆ ನೀನೇ ನನ್ನ ಬಾಳ ಸಂಗಾತಿ.... ಹಾಗಿಲ್ಲದೇ ಬೇರೆ ಇಲ್ಲವೇ ಇಲ್ಲ ನನಗೆ ಗತಿ...." ದಿಢೀರನೇ ವನಜಾ ಆ ಜಾಗದಿಂದ ಎದ್ದು ಹೊರಟು ಹೋಗುತ್ತಿದ್ದಳು. ಗೋಪಿ ಯಾಕೆ ಹೀಗೆ ನಿಧಾನಿಸುತ್ತಾನೆ ಎಂದು ಅವಳಿಗೆ ಅರ್ಥವಾಗುತ್ತಿರಲಿಲ್ಲ.

ವನಜಳ ಓದು ಮುಗಿದಿತ್ತು. ಕೆಲಸಕ್ಕೆ ಸೇರಿಸುವ ಉದ್ದೇಶವಿಲ್ಲದ್ದರಿಂದ ಮುಂದೆ ಓದಿಸಲಿಲ್ಲ. ಬೆಳೆದು ನಿಂತಿರುವ ಹುಡುಗಿಗೆ ಬೇಗ ಮದುವೆ ಮಾಡಿ ಜವಾಬ್ದಾರಿ ಮುಗಿಸಿಕೊಳ್ಳುವ ಆಸೆ ಸುನಂದಳಿಗೆ. ಸಮಯ ಸಿಕ್ಕಾಗ ಗಂಡನೊಡನೆ ಈ ವಿಷಯವನ್ನು ಪ್ರಸ್ತಾಪ ಮಾಡಿದ್ದಳು. ತಾಯಿ, ತಂದೆಯೊಡನೆ ಮಾತಾಡಿದುದನ್ನು ಕೇಳಿಸಿಕೊಂಡ, ವನಜ, ತಾನು ಗೋಪಿಯನ್ನು ಪ್ರೀತಿಸುತ್ತಿರುವ ಬಗ್ಗೆ ತಾಯಿಗೆ ಅನುಮಾನವಿಲ್ಲವೆಂದು ತಿಳಿದಳು.

ಸುನಂದಳಿಗೆ ಮಗಳ ವಿಷಯದಲ್ಲಿ ಆ ಬಗ್ಗೆ ಅನುಮಾನವಿಲ್ಲದಿದ್ದರೂ, ವನಜ ಆಗಾಗ ಗೋಪಿಯ ಮನೆಗೆ ಹೋಗಿ ಬರುತ್ತಿರಬಹುದು ಎಂಬ ಅನುಮಾನ ಸಹ ಇರಲಿಲ್ಲ. ಗೋಪಿಯನ್ನು ಭೇಟಿ ಮಾಡಿ ಮಾತನಾಡುತ್ತಾಳೆ ಎಂದು ಊಹಿಸಿರಲಿಲ್ಲ. ಮನೆಯ ಕೆಲಸ ಕಾರ್ಯಗಳ ಕಡೆ ಹೆಚ್ಚು ಗಮನ ಕೊಡುತ್ತಿದ್ದುದರಿಂದ ಬೇರೆ ಅನುಮಾನಗಳಿಗೆ ಆಸ್ಪದವಿರಲಿಲ್ಲ. ಅಲ್ಲದೇ

ಅಪರೂಪಕ್ಕೊಮ್ಮೆ ಮೈಥಿಲಿಯಾಗಲೀ, ಗೋಪಿಯಾಗಲೀ, ಬಂದರೆ, ಸ್ನೇಹದಿಂದ ಬರುತ್ತಾರೆ ಎಂದು ಭಾವಿಸಿದ್ದಳು.

ಗಂಡ ಸದಾನಂದನಿಗೆ, ಗೋಪಿ, ಮನೆಯವರ ಮೇಲೆ ಯಾವ ಆದರವೂ ಇಲ್ಲ ಎನ್ನುವುದನ್ನು ಬಲ್ಲಳು. ಹಾಗಾಗಿ, ಸ್ನೇಹವನ್ನು ಎಷ್ಟೋ ಅಷ್ಟೋ ಮಾತ್ರ ಇಟ್ಟುಕೊಂಡಿದ್ದಳು. ಚಿಕ್ಕವಯಸ್ಸಿನಲ್ಲಿ ಆಗಾಗ್ಗೆ ಅವರ ಮನೆಗೆ ಹೋಗುತ್ತಿದ್ದ ವನಜಳನ್ನು ಗದರಿಸುತ್ತಿದ್ದುದು ಉಂಟು.

"ಆಕೆ ಕೊಡುವ ಕರಿದ ತಿಂಡಿಯ ಆಸೆಗೆ, ಅವರ ಮನೆಗೆ ಹೋಗ್ತೀಯಲ್ಲ ನಿನಗೆ ನಾಚಿಕೆ ಆಗುಲ್ವಾ? ಮೈಗೆ ಒಳ್ಳೇದೂ ಅಲ್ಲ ಗೊತ್ತಾ?"

ಅವರ ಮನೇಲಿ ಎಲ್ಲರೂ ತಿಂತಾರಲ್ಲ. ಅವರು ಆರೋಗ್ಯವಾಗೇ ಇದಾರಲ್ಲ.

"ತಲೆಹರಟೆ... ಅವರು ಏನಂದು ಕೊಳ್ತಾರೆ? ಇವರ ಮನೇಲಿ ತಿಂಡಿ ಮಾಡುಲ್ಲ. ಅದಕ್ಕೇ ಅಕ್ಕ ತಂಗಿಯರು ಓಡಿ ಬತ್ತಾರೆ ಅಂತ ಅಂದುಕೊಳ್ತಾರೆ...."

"ಸುಮ್ಮನಿರಮ್ಮಾ.... ನಾವು ಹೋಗಿ ನಮಗೆ ತಂಡಿ ಕೊಡಿ ಅಂತ ಅವರನ್ನೇನು ಕೇಳುಲ್ಲ. ಅವರಾಗಿಯೇ ಕೊಡ್ತಾರೆ....."

"ಮನೇಲಿ ಇರೋದು ಮೂರುಜನ.... ಮಾಡಿದ ತಿಂಡಿ ಖರ್ಚಾಗಿರುಲ್ಲ. ನಿಮ್ಮ ಮುಖಕಂಡ ಕೂಡಲೇ ಖರ್ಚಾದರೆ ಸಾಕು ಅಂತ ಕೊಡ್ತಾಳೆ ಅಷ್ಟೇ."

"ಪ್ರತಿಯೊಂದು ಮತಿಗೂ, ನಿನ್ನ ಅರ್ಥವೇ ಬೇರೆ.... ನೀನೇ ಧಾರಾಳವಾಗಿ ತಿಂಡಿ ಮಾಡಿಕೊಡು ನಾವೂ ತಿನ್ನೋಣ. ಅವರ ಮನೆಗೂ ಕೊಡು ಹೋಗಿ ಕೊಡ್ತೀನಿ. ಅವರಿಗೂ ಖುಷಿಯಾಗುತ್ತೆ."

"ನಿಮ್ಮಪ್ಪನಿಗೆ ಗೊತ್ತಾದ್ರೆ ಅಷ್ಟೇ. ಹಲ್ಲು ಉದುರಿಸುತ್ತಾರೆ."

"ಅಮ್ಮಾ. ಅಪ್ಪನಿಗೇಕಮ್ಮಾ ಅವರುಗಳನ್ನು ಕಂಡರೆ ಅಷ್ಟಕಷ್ಟೆ?"

"ನಂಗೊತ್ತಿಲ್ಲ....."

"ಅವರು ಪೋಲಿಸ್ ಡಿಪಾರ್ಟ್‌ಮೆಂಟನಲ್ಲಿದ್ದಾರೆ ಅಂತಲೇ....?"

"ಇರಬಹುದು...."

"ಅದರಲ್ಲಿ ತಪ್ಪೇನಮ್ಮಾ.... ಅದೂ ಒಂದು ಕೆಲಸ... ಅವರು ಅನುಕೂಲವಾಗಿದ್ದಾರೆ ಅಂತ ಅಪ್ಪನಿಗೆ ಅಸೂಯೆ."

"ಅಸೂಯೇನೂ ಇಲ್ಲ. ಕೋಪಾನೂ ಇಲ್ಲ. ಅವರಿಗೆ ಹೆದರುತ್ತಾರೆ"

“ಯಾಕೆ? ಹೆದರಿಕೆ ಯಾಕೆ? ಅವರೇನು ತಿಂದು ಬಿಡ್ತಾರಾ?”

“ನನಗೇನು ಗೊತ್ತು? ಅವರುಗಳ ಸ್ನೇಹ ಬೇಡ ಅಂತ ಹೇಳ್ತಾನೇ ಇರ್ತಾರೆ. ಅದಕ್ಕೇ ನಾನು ನಿನಗೆ ಹೇಳೂದೂ ನೀನೂ ಹೆಚ್ಚಿಗೆ ಹೋಗಬೇಡ ಅಂತ.....”

“ಬಿಡಮ್ಮಾ ಅಪ್ಪನಿಗೆ ಬೇಡವಾದರೆ ಬೇಡ. ನಾನು ಹೋಗಿ ಬಂದರೆ ಏನೀಗ?”

“ಬೇಡ ಅಂದ್ರೆ ಬೇಡ. ನೀನೀಗ ಚಿಕ್ಕ ಹುಡುಗಿಯಲ್ಲ. ಸದಾ ಅವರ ಮನೆಗೆ ಹೋದರೆ ಚೆನ್ನ ಅಲ್ಲ... ” ತಾಯಿ ಒರಟಾಗಿ ನುಡಿದಾಗ ಅವಳು ಸುಮ್ಮನಾದಳು. ಆದರೆ ಆಗಾಗ ಗೋಪಿಯ ಮನೆಗೆ ಹೋಗುವುದನ್ನು ತಪ್ಪಿಸಿರಲಿಲ್ಲ. ಈ ವಿಷಯ ತಂದೆ ತಾಯಿಗೆ ತಿಳಿಯದು.

ಆದರೆ ಈಗ? ತಾನು ಗೋಪಿಯನ್ನು ಪ್ರೀತಿಸುತ್ತಿರುವ ವಿಷಯವನ್ನು ತಂದೆ ತಾಯಿಗೆ ತಿಳಿಸುವ ಸಮಯ ಬಂದಿದೆ. ಆದರೆ ಹೇಗೆ? ಅವರು ಖಂಡಿತಾ ಒಪ್ಪುವುದಿಲ್ಲ. ಒಂದು ವೇಳೆ ಗೋಪಿ ತಾನಾಗಿಯೇ ಬಂದು, “ನನಗೆ ವನಜಳ ಮೇಲೆ ಪ್ರೀತಿ ಇದೆ. ಅವಳನ್ನು ಮದುವೆಯಾಗ್ತೀನಿ ಅಂತ ಹೇಳಿದರೆ ಒಪ್ಪಬಹುದೇನೋ.... ಆದರೆ ಆ ಮಹಾಶಯ ಆ ಬಗ್ಗೆ ತಲೇನೇ ಕೆಡಿಸಿಕೊಳ್ಳುವುದಿಲ್ಲ. ಅವರ ಮನೇಲೂ ಅವರ ಅಪ್ಪ ವಿರೋಧಿಸಬಹುದು ಅಂತ ಹೆದರುತ್ತಾನೇನೋ.... ಹಾಗಂತ ಎಷ್ಟು ದಿನ ಹೀಗೇ ಇರುವುದು? ಎಲ್ಲಾ ಬಿಟ್ಟು ನಿನ್ನಂಥೋನ್ನ ನಾನು ಪ್ರೀತಿಸಿದ್ನಲ್ಲ. ತಲೆ ತಲೆ ಚಚ್ಚಿಕೊಂಡಳು.”

ಸದಾನಂದ ಹೆಂಡತಿಯ ಮಾತಿನಂತೆ ವರನ್ವೇಷಣೆ ಶುರುಮಾಡಿದ್ದ. ನಾಲ್ಕಾರು ಜಾತಕಗಳು ಕೂಡಿಬರಲಿಲ್ಲ. ಜತೆಗೆ ಅನೇಕ ಬೇರೆಬೇರೆ ಕಾರಣಗಳಿಂದ ಮುಂದುವರೆದಿರಲಿಲ್ಲ. ಈ ಒಬ್ಬ ವರ, ವಧುಪರೀಕ್ಷೆಗೆಂದು ಬರುವವನಿದ್ದ.

“ವನಜಾ.... ನಾಳೆ ಒಬ್ಬ ಹುಡುಗ ನಿನ್ನನ್ನ ನೋಡೋಕೆ ಬರ್ತಾನೆ. ಬಿಸಿಲ್ನಲ್ಲಿ ತಿರುಗಿ ಮುಖ ಕೆಡಿಸಿಕೊಳ್ಳಬೇಡ. ಒಳ್ಳೆ ಸೀರೆ, ರವಿಕೆ, ಎಲ್ಲಾ ಚೆನ್ನಾಗಿ ಇಸ್ತ್ರಿ ಮಾಡಿ ಇಟ್ಟುಕೋ.... ” ತಾಯಿ ಮೊದಲೇ ತಿಳಿಸಿದಳು.

“ನನಗೀಗಲೇ ಮದುವೆ ಬೇಡಮ್ಮಾ.....”

“ನಿನ್ನನ್ನು ಕೇಳಿ ನಾವು ಮದುವೆ ಮಾಡಬೇಕಾ? ನಮ್ಮ ಜವಾಬ್ದಾರಿ ನಮಗೆ ತಿಳಿದಿದೆ.. ಇನ್ನೆರಡು ವರ್ಷ ಕಳೆದರೆ, ಜಲಜೆಗೆ ಮದುವೆ ಮಾಡಬೇಡವೇ?”

"ಅವಳಿಗೇ ಮೊದಲು ಮಾಡಿಬಿಡಿ. ಆಮೇಲೆ ನಾನು ಮಾಡಿಕೊಳ್ತೀನಿ"

"ಹುಂ.... ಕೇಳಿದೋರು ನಗ್ತಾರೆ ಅಷ್ಟೇ. ಏನು ಮಾತೇ?"

"ನಗುವಂಥದ್ದು ಏನಿದೆ? ನಮ್ಮಿಷ್ಟ ಅಂದರಾಯ್ತು."

"ಇವಳಿಗೆ ಏನೋ, ಐಬು, ಅದಕ್ಕೆ ಮಾಡಿಲ್ಲ ಅಂತ ಅಂದುಕೊಳ್ತಾರೆ. ನಿನ್ನ ಮಾತು ಕೇಳಿದರೆ ಆಯ್ತು."

"ಅಮ್ಮಾ ನಾನು ಒಂದು ಮಾತು ಹೇಳಲಾ?" ತಾಯಿಯ ಕಡೆ ತಿರುಗಲಾಗಲಿಲ್ಲ. ನಾನು ಯಾರನ್ನಾದರೂ ಪ್ರೀತಿಸ್ತೀನಿ. ಅವನನ್ನೇ ಮದುವೆಯಾಗ್ತೀನಿ ಅಂತಂದ್ರೆ ಏನು ಮಾಡ್ತೀಯಾ? ಎಂದು ಹೇಳಬೇಕೆಂದು ಕೊಂಡವಳು ಸುಮ್ಮನಾದಳು. "ನಿನ್ನ ಮಾತು ಮುಗಿಯುವುದೇ ಇಲ್ಲ. ಖಂಡುಗ ಕೆಲಸವಿದೆ" ಎಂದು ತಾಯಿ ಅಲ್ಲಿಂದ ಹೊರಟು ಹೋದಳು. ಇವಳ ಮನಸ್ಸು ಮಂಥನವನ್ನು ಪ್ರಾರಂಭಿಸಿತ್ತು.

ಗೋಪಿಗೆ ವಿಷಯ ತಿಳಿಸಿ ಆಗಿತ್ತು. ಅವನ ನಿರಾತಂಕ ಕಂಡು ಆಶ್ಚರ್ಯವಾಗಿತ್ತು. ಅವನು ಪ್ರೀತಿಸುತ್ತಿಲ್ಲವೇನೋ, ಇದೇ ಸಮಯ, ಇವಳು ಮದುವೆಯಾಗಿ ಹೋದರೆ ಸಾಕು ಅಂತ ಕಾಯುತ್ತಿರಬಹುದು... ನಾಳೆ ಬರುವ ವರ ನನ್ನನ್ನು ಒಪ್ಪದಿರಲಿ ದೇವರೇ....ಎಂದು ಪ್ರಾರ್ಥಿಸಿದಳು. ಕನ್ನಡಿಯಲ್ಲಿ ತನ್ನನ್ನು ತಾನೇ ನೋಡಿಕೊಂಡಳು. "ನಾನೇನೂ ಚೆನ್ನಾಗಿಲ್ಲ. ಅವರು ನನ್ನನ್ನು ಒಪ್ಪುವುದಿಲ್ಲ ಗೊತ್ತು. ಆದರೆ ಗೋಪಿಯೂ ನನ್ನನ್ನು ಒಪ್ಪಿಲ್ಲವೇನೋ ಅಂತಂದು ಕೊಂಡಾಗ ಅಳು ಬರುವಂತಾಗಿತ್ತು." ಥೂ ಹೆಣ್ಣಾಗಿ ಹುಟ್ಟಬಾರದು... ಹುಟ್ಟಿದರೂ ರೂಪವತಿಯಾಗಿ ಹುಟ್ಟಬೇಕು. ಗೋಪಿಯಂತಹ ಸುರದ್ರೂಪಿಗೆ ದೇವಲೋಕದ ಅಪ್ಸರೆಯಂತಹ ಹುಡುಗಿಯೇ ಸರಿ. ನಾನು ಮೇನಕೆ ಅಲ್ಲ. ರಂಭೆ ಊರ್ವಶಿಯಲ್ಲ. ಆದರೂ, ನಾನು ಗೋಪಿಯನ್ನು ಬಿಟ್ಟು ಕೊಡಲಾರೆ....

ಆಗಲಿ, ನಾಳೆ ಆ ವರ ಬಂದು ನನ್ನನ್ನು ನೋಡಲಿ.... ಅವನು ಒಪ್ಪದಿರುವಂತೆ ಕೆಟ್ಟದಾಗಿ ಅಲಂಕರಿಸಿಕೊಳ್ತೀನಿ. ಹೇಗೂ ಗೋಪಿ ಬರ್ತೀನಿ ಅಂತ ಹೇಳಿದಾನಲ್ಲ. ಅದೊಂದೇ ಸಾಕು. ಮುಂದೆ ಅದೇನಾಗುತ್ತೋ ನೋಡಿಯೇ ಬಿಡ್ತೀನಿ ಎಂದು ನಿರ್ಧರಿಸಿ, ತನ್ನಲ್ಲಿದ್ದ ಕೆಲವೇ ಸೀರೆಗಳಲ್ಲಿ ಅತಿಯಾಗಿ ಬಣ್ಣ ಹೋಗಿ ಮಂಕಾಗಿದ್ದ ಸೀರೆಯನ್ನು ಆರಿಸಿ ತೆಗೆದಳು. ಅದಕ್ಕೆ ಒಂದು ಚೂರೂ ಒಪ್ಪದ ರವಿಕೆಯನ್ನು ತೆಗೆದು ನೀಟಾಗಿ ಮಡಿಸಿಟ್ಟಳು. "ಇಸ್ತ್ರೀ ಬೇರೆ ಕೇಡು ಇದಕ್ಕೆ" ಎಂದು ಹೇಳಿಕೊಂಡು ಹಾಗೇ ಒಂದು ಕಡೆ

ಇಟ್ಟಳು ಮನಸ್ಸು ಮುದುಡಿತ್ತು. ಗೋಪಿ ಕೈ ಕೊಟ್ಟು ಬಿಟ್ಟರೇ... ಎಂದು ಮನಸ್ಸು ಚಡಪಡಿಸುತ್ತಿತ್ತು. ಹಾಗೇನಾದರೂ ಆದರೆ ಈ ಜನ್ಮದಲ್ಲಿ ನಾನು ಗೋಪಿಯನ್ನು ಖಂಡಿತಾ ಕ್ಷಮಿಸುವುದಿಲ್ಲ. ಹೀಗೆ ಮಾಡಿದರೆ ಹೇಗೆ? ಯಾರಿಗೂ ತಿಳಿಯದಂತೆ, ತಾನು ಗೋಪಿಯ ಮನೆಗೇ ಹೋಗಿ ಇದ್ದು ಬಿಟ್ಟರೇ ಆಂಟಿಗೆ ಎಲ್ಲಾ ವಿಷಯ ತಿಳಿಸಿದರೆ ಒಪ್ಪಬಹುದೇನೋ.... ಆದರೆ ಅದು ಸಾಧ್ಯವೇ... ಗೋಪಿಯೇ ತನ್ನನ್ನು ಖಂಡಿತಾ ವಾಪಸ್ಸು ತಂದು ಇಲ್ಲಿಗೆ ಬಿಡ್ತಾನೆ. ಆಗ ಈ ಮನೆಯೇ ನನಗೆ ಬಂದೀಖಾನೆ ಆಗುತ್ತದೆ. ಈ ಮುಂಚೆ ಅವನನ್ನು ಭೇಟಿಯಾದಾಗ ಆಡಿದ ಮಾತುಗಳು ನೆನಪಿಗೆ ಬಂತು ಅವನು ಎಂದಿನಂತೆ ಆಡಿದ್ದ.

"ಈಗೇನು ಅವಸರ ಮದುವೆಗೆ? ಹೀಗೇ ಆರಾಮವಾಗಿದೀವಲ್ಲ"

"ಹಾಗಲ್ಲ ಗೋಪಿ. ಈಗಿನಂತೆ ಸದಾ ಇರುಕ್ಕೆ ಆಗುತ್ತಾ? ಅಪ್ಪ ನನ್ನ ಮದುವೆಗೆ ಪ್ರಯತ್ನ ಮಾಡ್ತಾ ಇದ್ದಾರೆ. ಯಾರೂದರೂ ಒಬ್ಬ ನನ್ನನ್ನು ಒಪ್ಪಿದ ಕೂಡಲೇ, ಅಪ್ಪ ಬಲವಂತ ಮಾಡಿ ಮದುವೆ ಮಾಡಿ ಮಗಿಸ್ತಾರೆ."

"ಆ ದಿನ ಖಂಡಿತಾ ಬರುವುದಿಲ್ಲ. ಅಂಥ ಬಲವಂತಕ್ಕೆ ನೀನು ಒಪ್ಪಬಾರದು."

"ನೀನು ಹೇಳುವಷ್ಟು ಸುಲಭವಲ್ಲ. ಅಥವಾ ನಾನು ಅಷ್ಟು ಹೋಪ್‌ಲೆಸ್ ಅಂತಲೋ.....?"

"ಛೆ..... ನಾನೆಲ್ಲಿ ಹಾಗಂದೆ? ನಾನು ನಿನ್ನನ್ನು ಮೆಚ್ಚಿರುವಾಗ ಇನ್ನೊಬ್ಬ ನಿನ್ನನ್ನು ಒಪ್ಪಲು ಧೈರ್ಯ ಮಾಡಲಾರ. ಯಾರೂ ಬಲವಂತ ಮಾಡಲಾರರು."

"ನಿನ್ನ ಮಾತು ಕೇಳಿದರೆ ನನಗೆ ನಗು ಬರುತ್ತೆ ಗೋಪಿ. ಅದು ಸರಿ. ನಾವು ನಾವೇ ಯಾಕೆ ಆದಷ್ಟು ಬೇಗ ಮದುವೆ ಯಾಗಬಾರದು?"

"ನಾನ್ಸೆನ್ಸ್.... ಯಾಕೆ? ನಮ್ಮವರು ಅಂತ ನಮಗೆ ತಂದೆ ತಾಯಿ ಯಾರೂ ಇಲ್ವಾ?"

"ಅವರುಗಳು ಒಪ್ಪದಿದ್ದರೆ.....?"

"ಮಕ್ಕಳ ಮೇಲೆ ಪ್ರೀತಿ ಇದ್ದರೆ ಅವರು ಒಪ್ಪಲೇ ಬೇಕಾಗುತ್ತದೆ. ನಮ್ಮ ಅಪ್ಪನ್ನ ಒಪ್ಪಿಸುವ ಜವಾಬ್ದಾರಿ ಅಮ್ಮನಿಗೆ ಸೇರಿದ್ದು."

"ಆದರೆ.... ನಮ್ಮನೇಲಿ, ಅಪ್ಪ ಅಮ್ಮನ್ನ ನಾನು ಕೇಳಲಾರೆ. ನೀನೇ ಬಂದು ಕೇಳಬೇಕಪ್ಪಾ."

"ಸಮಯ ಬರಲಿ ವನಜಾ... ನಾನೇ ಬಂದು ಕೇಳ್ತಿನಿ"

"ಆ ಸಮಯ ಬರುತ್ತೋ, ಇಲ್ಲವೋ ಅಂತ ಅನುಮಾನ. ಮುದುಕ ಮುದುಕಿಯರಾದ ಮೇಲೆ ಏನು ಉಪಯೋಗ?"

"ಹೀಗೇ ಸ್ನೇಹಿತರಂತೆ ಇದ್ದು ಬಿಡೋಣ."

"ಸದಾ ಹೀಗೇ ಹೇಳ್ತೀಯಲ್ಲ ಯಾಕೆ?"

"ಯಾವ ಜಂಝಾಟ, ಮನಸ್ತಾಪ ಇರುಲ್ಲ ಅದಕ್ಕೇ...."

"ಸರಿ ಬಿಡು. ನಿನಗೆ ಇಷ್ಟವಿಲ್ಲದ ಮೇಲೆ ನಾನೇಕೆ ನಿನಗೋಸ್ಕರ ಒದ್ದಾಡಲಿ? ಇನ್ನು ಮೇಲೆ ನಾನು ನಿನ್ನ ಮುಖ ಕೂಡಾ ನೋಡುಲ್ಲ...."

"ಮುಂದೆ ಎಂದಾದರೂ, ನನಗೆ ಪ್ರಶಸ್ತಿ ಸಿಕ್ಕರೆ, ನನ್ನ ಫೋಟೋ ಪೇಪರ್ನಲ್ಲಿ ಬರುತ್ತೆ. ಅದನ್ನಾದ್ರೂ ನೋಡ್ತಿಯಾ ತಾನೇ...?"

"ವೀರಪ್ಪನ್ ಹಾಗೂ ಅವನ ತಂಡದವರನ್ನು ಹಿಡಿಯುವ ಉಪಾಯ ಮಾಡ್ತೀದೀಯ ಹೇಗೆ?" ಎನ್ನುತ್ತಾ ಕೇಳಿದಳು.

"ಆ ದಿನ ಬಂದರೂ ಬರಬಹುದು. ಅದಕ್ಕೇ ನೀನೇ ಸ್ಫೂರ್ತಿ ನನಗೆ ರಾಷ್ಟ್ರಪತಿ ಪದಕ ಸಿಗುತ್ತಲ್ಲ. ಅದರ ಕ್ರೆಡಿಟ್ ನಿನಗೇ....."

"ಆಗಲಿ. ಆಗಲಿ. ಆ ದಿನದವರೆಗೂ ಕಾಯ್ತೀನಿ. ಆಮೇಲೆ ಮತ್ತೆ ಬರ್ತೀನಿ" ಎನ್ನುತ್ತಾ ಮುಂದೆ ಅಡಿ ಇಟ್ಟವಳ ಜಡೆ ಹಿಡಿದೆಳೆದು ನಿಲ್ಲಿಸಿದ.

"ವೀರಪ್ಪನ್ ಗ್ಯಾಂಗ್‌ನವರು, ನನ್ನನ್ನೇ ಕಿಡ್ನಾಪ್ ಮಾಡಿದರೇ? ಅಥವಾ ನನ್ನನ್ನೇ ಮುಗಿಸಿ ಬಿಟ್ಟರೇ... ಆಗೇನು ಮಾಡ್ತೀಯಾ?"

"ಇಂಥಾ ಮಾತುಗಳನ್ನಾಡಿ ನನ್ನನ್ನು ಹೆದರಿಸಬೇಡ. ನಾನು ಬದುಕಿರುವುದು ನಿನಗೋಸ್ಕರ ನಿನ್ನನ್ನು ಕಳೆದುಕೊಳ್ಳುವುದಕ್ಕಲ್ಲ"

"ಸುಮ್ಮನೇ ಹೀಗೇ ಲೈಟ್ ಆಗಿ ಹೇಳಿದೆ ಅಷ್ಟೇ. ಅದಕ್ಯಾಕೆ ಇಷ್ಟು ಉದ್ವೇಗ?"

"ನೀನು ನನ್ನನ್ನು ಮದುವೆಯಾಗು ಅಥವಾ ಆಗದಿರು. ಆದರೆ ನಿನಗೆ ಮಾತ್ರ ಯಾವ ಆಪತ್ತು ಬರಬಾರದು."

"ಹೋಗಲಿ ಬಿಡು.... ಈಗ ಐಸ್‌ಕ್ರೀಂ ಕೊಡಿಸ್ಲಾ? ಅಥವಾ ಎಳೆನೀರು ಕೊಡಿಸ್ಲಾ?"

"ಯಾವುದೂ ಬೇಡ. ಐಸ್‌ಕ್ರೀಂ ಆಗಲಿ, ಎಳೆನೀರಾಗಲೀ, ನನಗೆ ಸಮಾಧಾನ ಕೊಡುವುದಿಲ್ಲ. ಮುಖ್ಯವಾದ ವಿಚಾರ ಮಾತನಾಡು ಅಂತಂದ್ರೆ ಅದನ್ನು ಬಿಟ್ಟು ಬೇರೆ ಏನೇನನ್ನೋ ಆಡ್ತೀಯಲ್ಲ ಯಾಕೆ ಹಿಂಜರಿಕೆ?"

"ಹಾಗೇನಿಲ್ಲ. ಮೊದಲು ನಮ್ಮ ಅಪ್ಪನ್ನ ಒಪ್ಪಿಸಬೇಕಲ್ಲ. ಸ್ವಲ್ಪ ಅದೇ

ಕಷ್ಟ. ಅಪ್ಪ ಮನೇಲಿದ್ದಾಗ, ನಾನು ಇರುಲ್ಲ. ನಾನು ಮನೇಲಿದ್ದಾಗ ಅವರು ಇರುಲ್ಲ.... ಹೀಗಾಗಿದೆ."

"ಈ ನಿಮ್ಮಿಬ್ಬರ ಜೂಟಾಟ ನನಗೆ ಬೇಕಿಲ್ಲ. ನಿನ್ನ ಮನಸ್ನಲ್ಲಿ ಏನಿದೆ ಅಂತ ಹೇಳು. ಸಹಿಸುವ ಶಕ್ತಿ ನನಗಿದೆ."

"ಅಪ್ಪನ ಮನಸ್ನಲ್ಲಿ ಏನೇನೋ ಆಸೆಗಳಿವೆ. ನಾನು ತುಂಬಾ ಮುಂದೆಬರಬೇಕು. ನನಗೆ ಉನ್ನತ ಪದವಿ ಸಿಗಬೇಕು. ಗೌರವ ಸಿಗಬೇಕು. ರಾಷ್ಟ್ರಪತಿಯಿಂದ ಪ್ರಶಸ್ತಿಯನ್ನು ಪಡೆಯಬೇಕು.... ಹೀಗೇ ಹಲವಾರು...."

"ನನಗೂ ನಿನಗೆ ಪ್ರಶಸ್ತಿಗಳು ಸಿಗಲಿ ಎನುವ ಆಸೆ ಇದೆ... ಆದರೆ ಮದುವೆಗೂ ಅದಕ್ಕೂ ಏನೂ ಸಂಬಂಧ?"

ಹೌದು ನನಗೂ ಗೊತ್ತು. ಆದರೆ ಅವರ ಎದುರಿಗೆ ನಿಂತು ಮೊದಲು ನನಗೆ ಮದುವೆ ಮಾಡಿ ಅಂತ ನಾನು ಹೇಗೆ ಕೇಳಲಿ? ನೀನೆ ಹೇಳು.

"ಸರಿ ಬಿಡು. ಆ ದಿನ ಬರಬಹುದು ಎನ್ನುವ ಆಸೆ ನನಗೆ ಹೊರಟು ಹೋಯಿತು. ಒಂದು ವೇಳೆ ತಡವಾಗಿ ಆ ದಿನ ಬಂದರೆ, ಆಗ ನಾನು ನಿನಗೆ ಸಿಗುಲ್ಲ ಅಷ್ಟೇ... ಇದು ನೀನು ಬೇಕೂಂತ ಮಾಡುತ್ತಿರುವ ಪ್ಲಾನ್...." ಎಂದು ರೇಗಿಸಿ ಹಿಂತಿರುಗಿ ನೋಡದೇ ಅಲ್ಲಿಂದ ಹೊರಟಾಗ, ಅವನು ಜೋರಾಗಿ ನಕ್ಕಿದ್ದು ಕೇಳಿಸಿದರೂ ತಿರುಗಿ ನೋಡಿರಲಿಲ್ಲ. ಈ ಗೋಪಿ ನನ್ನನ್ಯಾಕೆ ಹೀಗೆ ಸತಾಯಿಸ್ತಾನೆ ಎಂದು ಕುಪಿತಳಾಗಿದ್ದಳು.

ಈಚೆಗೆ ವನಜ ಆಗಾಗ್ಗೆ ತಮ್ಮಿಬ್ಬರ ಮದುವೆ ಬಗ್ಗೆ ಚರ್ಚೆ ಮಾಡಿ ಕೋಪಿಸಿಕೊಂಡು ಹೋದರೂ, ಗೋಪಿ ಹೆಚ್ಚಿಗೆ ತಲೆ ಕೆಡಿಸಿಕೊಂಡಿರಲಿಲ್ಲ. ಅರ್ಥವಿಲ್ಲದೇ ಅವಳನ್ನು ಸತಾಯಿಸುತ್ತಿದ್ದ. ತಾನು ಅವಳನ್ನು ಪ್ರೀತಿಸುವ ವಿಚಾರವನ್ನು ತಾನಾಗಿಯೇ ತನ್ನ ತಂದೆಯೊಡನೆ ಹೇಳಲಾರ, ತಾಯಿಯೊಡನೆ ಹೇಳಿ, ಅಪ್ಪನನ್ನು ಒಪ್ಪಿಸು ಎಂದು ಕೇಳಲಾಗದೇ ಸುಮ್ಮನಿದ್ದ. ಪರಿಹಾರ ತಿಳಿದಿರಲಿಲ್ಲ.

ಆದರೆ, ಈ ದಿನ ವನಜ ಅಷ್ಟು ಮಾತನಾಡಿದ ಮೇಲೆ, ಅದೂ ಪೋಲಿಸ್ ಸ್ಟೇಷನ್‌ಗೆ ಬಂದು, ಅವನಿಗಾಗಿ ಕಾದು, ಅಸಹನೆಯಿಂದ ಅಷ್ಟೆಲ್ಲಾ ಹೇಳಿದ ಮೇಲೆ, ಅವನಿಗೂ, ಚಿಂತಿಸುವಂತಾಗಿತ್ತು. ಮನೆಗೆ ಬಂದ ನಂತರ, ಪರ್ಯಾಯವಾಗಿ ಏನೇನೋ ಮಾತನಾಡಿದ.

"ಈ ಪೋಲಿಸ್ ಇಲಾಖೆಯವರನ್ನು ಬಿಟ್ಟರೆ ಬೇರೆಯವರು ಮನುಷ್ಯರೇ ಅಲ್ಲ ಅಂತ ನಿಮ್ಮ ಅಪ್ಪನ ಭಾವನೆ ಸಾಮಾನ್ಯವಾದ ಹುಡುಗಿಯನ್ನು

ನಿಮ್ಮಪ್ಪ ಒಪ್ಪುವ ಸಂಭವ ಕಡಿಮೆ" ಎಂದಿದ್ದಳು ಮೈಥಿಲಿ.

"ಅಪ್ಪನಿಗೆ ದುರಭಿಮಾನ ಕಡಿಮೆಯಾಗುವವರೆಗೂ ನಾನು ಮದುವೇನೇ ಆಗುಲ್ಲ ಅಂತ ಅಂದ್ಕೊಂಡಿದ್ದೆ... ಆದರೆ....."

"ಅವರು ಯಾರನ್ನೋ ಗೊತ್ತು ಮಾಡಿ, ಇವಳನ್ನೇ ಮದುವೆಯಾಗು ಅಂದ್ರೆ ಆಗೇನು ಮಾಡ್ತೀಯಾ?"

"ಆ ದಿನ ಬರದೆ ಇರಲಿ ಅಂತ ನಿನ್ನ ದೇವರಲ್ಲಿ ಹರಕೆಯ ಕಾಣಿಕೆ ಕಟ್ಟಿಡು. ಒಂದ್ಮಾತು ಕೇಳ್ತೀನಿ, ವನಜಳ ಬಗ್ಗೆ ನಿನ್ನ ಅಭಿಪ್ರಾಯ ಏನು?..... " ಅನುಮಾನದಿಂದ ಕೇಳಿದ್ದ. ತಾಯಿ ಅವನ ಕಡೆ ನೋಡಿ ಮುಗುಳ್ನಕ್ಕಾಗ ಅವನಿಗೆ ಸಮಾಧಾನವಾಗಿತ್ತು.

"ನಾನೇನೋ ಹೀಗೇ ಆಜನ್ಮ ಬ್ರಹ್ಮಚಾರಿಯಾಗಿ ಇರಬಲ್ಲೆ. ಆದರೆ ವನಜ ಸಿಕ್ಕಾಗೆಲ್ಲ ಅದನ್ನೇ ಕೇಳ್ತಾಳೆ. ನಾನು ಅವಳನ್ನು ಪ್ರೀತಿಸುವುದಕ್ಕಿಂತ ಜಾಸ್ತಿ ಅವಳು ನನ್ನನ್ನು ಹಚ್ಚಿಕೊಂಡಿದ್ದಾಳೆ. ಈಗ ಅದೇ ಸಮಸ್ಯೆ. ನೀನೇನು ಹೇಳ್ತೀಯಾ?"

"ನನಗೆ ಈ ಬಗ್ಗೆ ಅನುಮಾನ ಎಂದೋ ಇತ್ತು. ನೀನಾಗಿಯೇ ಹೇಳಲಿ ಅಂತ ಕಾದಿದ್ದೆ. ಹೆಣ್ಣು ಹುಡುಗಿಯರ ಮನಸ್ಸು ತುಂಬಾ ಸೂಕ್ಷ್ಮ. ನೀನಾದರೋ ನಿನ್ನ ಕೆಲಸ ಕಾರ್ಯಗಳಲ್ಲಿ ಎಲ್ಲಾ ಮರೆಯಬಹುದು. ಆದರೆ ಆ ಹುಡುಗಿ ಕೊರಗಿ ಹಾಳಾಗ್ತಾಳೆ."

ನಿಧಾನವಾಗಿ, ವನಜ ತನ್ನೊಡನೆ ಹೇಳಿದ್ದನ್ನೆಲ್ಲ ತಿಳಿಸಿದ. "ನಾಳೆ ಒಬ್ಬ ವರ ಅವರ ಮನೆಗೆ ಅವಳನ್ನು ನೋಡಲು ಬರುತ್ತಿದ್ದಾನಂತೆ. ಅವನೊಡನೆ ಮದುವೆ ನಡದೇ ಹೋಗುತ್ತದೆ ಅನ್ನುವ ಹೆದರಿಕೆ ಅವಳಿಗೆ."

"ಅದು ಸಹಜ ತಾನೇ....."

"ಈಗ ನಾನೇನು ಮಾಡಲಿ ಹೇಳು"

"ನೀನೇ ಒಂದು ಉಪಾಯ ಹುಡುಕು ನಿನಗೆ ನನ್ನ ಸಹಕಾರವಿದೆ. ಆದರೆ ನಿಮ್ಮ ಅಪ್ಪನಿಗೆ ಯಾವ ಅನುಮಾನ ಬರಬಾರದು."

"ಅಮ್ಮ ನನಗಿಂತ ನೀನೇ ಜಾಣೆ.... ನೀನೇ ಒಂದು ಉಪಾಯ ಹುಡುಕು. ನನಗೀಗ ಸಮಯವಿಲ್ಲ. ಒಂದು ಲೋಟ ಸ್ಟ್ರಾಂಗ್ ಕಾಫಿ ಕೊಡು. ಕುಡಿದು ಒಂದು ನಿದ್ದೆ ಮಡಿ ಏಳ್ತಿನಿ"

"ಚೆನ್ನಾಗಿದೆ..... ಪ್ರೀತಿಸಿ ಮದುವೆಯಾಗುವವನು ನಿನು. ನಿಮ್ಮ ಅಪ್ಪನಿಗೆ ತಿಳಿದರೆ ಮುಗೀತು ನಿನ್ನ ನನ್ನ ಗತಿ"

"ಅಪ್ಪನಿಗೆ ಸದಾ ಕಾಲ ಹೀಗೆ ಹೆದರಿದರೆ ಹೇಗೆ? ಅವರು ಮನೇಲಿ ಪೋಲಿಸ್ ಅಧಿಕಾರಿಯಲ್ಲ....."

"ಏನೋಪ್ಪ...... ಮೊದಲ್ನಿಂದ ಅವರು ಆಡಿದ್ದೇ ನಡೆದಿದೆ ಈ ಮನೆಯಲ್ಲಿ. ಈಗ ನಿನ್ನ ಕಾಲದಲ್ಲಿ ಬದಲಾಗಬೇಕಾಗಿದೆ. ಆಗಲಿ ಶ್ರೀರಾಮ ಹೇಗೆ ನಡೆಸ್ತಾನೋ ಹಾಗಾಗಲಿ."

"ನಾನು ನಿನಗೆ ಹೇಳಿದರೆ, ನೀನು ದೇವರ ಮೇಲೆ ಭಾರ ಹಾಕ್ತೀಯಲ್ಲ..."

"ದೇವರ ಮೇಲೆ ಭಾರಹಾಕಿ, ನಮ್ಮ ಪ್ರಯತ್ನ ನಾವು ಮಾಡಿದರೆ ಅದು ಖಂಡಿತಾ ಸಫಲವಾಗುತ್ತದೆ."

"ಸರಿಯಮ್ಮಾ ನೀನು ಇಷ್ಟು ಸಪ್ಪೋರ್ಟ್ ಕೊಟ್ಟರೆ, ನನಗೆ ಬೇಕಾದಷ್ಟು, ಎನ್ನುತ್ತಾ ತಾಯಿ ಕೊಟ್ಟ ಕಾಫಿಯನ್ನು ಕುಡಿದು, ತನ್ನ ರೂಮಿಗೆ ಹೋಗಿ ಮುಂಚದ ಮೇಲೆ ಉರುಳಿಕೊಂಡ. ಕೆಲವೇ ಕ್ಷಣಗಳಲಿಲ ನಿದ್ದೆ ಬಂದಿತ್ತು. ಏನೋ ಸೊಗಸಾದ ಕನಸು. ಕನಸಿನಲ್ಲಿ ಅವನ ನಗುವಿಗೇ ಅವನಿಗೆ ಎಚ್ಚರವಾದಾಗ ಕಣ್ಣು ಹೊಸಕಿಕೊಂಡು ಎದ್ದ."

ಎಂದಿನಂತೇ ಬೆಳಗಾಯಿತು. ನಿತ್ಯದಂತೆ ತಿಂಡಿ ಕಾಫಿ ಮುಗಿಸಿ ಯೂನಿಫಾರಂ ಧರಿಸಿ, ಸ್ಟೇಶನ್‌ಗೆ ಹೊರಟವನನ್ನು ತಾಯಿ ತಡೆದಳು.

"ಇವತ್ತು ರಜ ಹಾಕು. ವನಜಾ ನಿನಗೋಸ್ಕರ ಕಾಯುತ್ತಿರುತ್ತಾಳೆ. ನಾವು ಅವರ ಮನೆಗೆ ಹೋಗೋಣ. ಆ ಹುಡುಗಿಗೆ ಧೈರ್ಯ ಬರುತ್ತೆ."

"ಅವರ ಅಪ್ಪ ನಮ್ಮನ್ನು ಅಪಾರ್ಥ ಮಡಿಕೊಂಡರೇ.....?"

"ನಾವೇನು ಹೊಸಬರೇ? ಸ್ನೇಹಿತರಂತೆ ಹೋದರಾಯ್ತು......?"

"ನಂಗೇನೋ ಮುಜುಗರ....."

"ನೀನು ನಿಮ್ಮ ಅಪ್ಪನಿಗೆ ತಕ್ಕ ಮಗನಲ್ಲ. ಅವರಿಗೆ ಹೆದರಿಕೆ ಮುಜುಗರ ಒಂದೂ ತಿಳಿಯದು."

"ಅವರಿಗೆ ಇಂತಹ ಸ್ಥಿತಿ ಒದಗಿರಲಿಲ್ಲವಲ್ಲ."

"ಅದೂ ನಿಜ. ಎಲ್ಲರೂ ಒಂದೇ ತರಹ ಇರುಕ್ಕೆ ಸಾಧ್ಯವಿಲ್ಲ. ಈಗ ನಿನ್ನ ವನಜಳ ಭವಿಷ್ಯದ ತೀರ್ಮಾನ ನಿನ್ನ ಕೈಲಿದೆ. ಅದಕ್ಕೆ ನೀನೇ ಮುಂದುವರೆಯ ಬೇಕು ಅಲ್ಲವೇ...."

"ಹೌದಮ್ಮ.... ನೀನು ನನಗೆ ಆಶೀರ್ವಾದ ಮಾಡು" ಎನ್ನುತ್ತಾ ನಾಟಕೀಯವಾಗಿ ತಾಯಿಯ ಕಾಲಿಗೆ ನಮಸ್ಕರಿಸಿದಾಗ, ಆಕೆ ಮುಗುಳ್ನಕ್ಕು ಮಗನ ತಲೆಯ ಮೇಲೆ ಕೈ ಇಟ್ಟು ಆಶೀರ್ವದಿಸಿದಳು. ಗೋಪಿ ಯೂನಿಫಾರಂ

ಬದಲಾಯಿಸಿ, ಬೇರೆ ಬಟ್ಟೆ ಧರಿಸಿ ಬಂದ. ಇಬ್ಬರೂ ಅವರ ಮನೆಗೆ ಹೋರಟರು. ಬೈಕು ಅವರ ಮನೆ ಮುಂದೆ ನಿಂತಾಗ, ವನಜಾ ಬಾಗಿಲಿಗೆ ಬಂದು ನಿಂತಳು. ತಾಯಿ ಮಗ ಒಟ್ಟಾಗಿ ಬಂದುದನ್ನು ಕಂಡು ಅವಳ ಮನಸ್ಸು ಅರಳಿತು. ಸಂತಸ ಕಣ್ಣಲ್ಲಿ ತುಳುಕಿತು. ಗೋಪಿ ಅವಳ ಕಡೆ ನೋಡಿ ಆತ್ಮೀಯವಾಗಿ ಮುಗುಳ್ನಕ್ಕಾಗ ಅವಳು ಚುರುಕಾದಳು.

"ಅವರಿಬ್ಬರನ್ನು ನೋಡಿ, ಸುನಂದ, ಸದಾನಂದ ಮುಖ ಮುಖ ನೋಡಿಕೊಂಡರು. ಇದ್ದಕ್ಕಿದ್ದಂತೇ, ಅದೂ ಈ ದಿನ ಇವರೇಕೆ ಬಂದರು ಎನ್ನುವ ಗೊಂದಲ ಅವರ ಮುಖದಲ್ಲಿ ಎದ್ದು ಕಾಣುತ್ತಿತ್ತು. ಮೈಥಿಲಿ ಅದನ್ನು ಗುರುತಿಸಿದಳು. ತಾನೇ ಪ್ರಾರಂಭಿಸಿದಳು ಮಾತಿಗೆ."

"ಏನು ವಿಶೇಷ..... ಎಲ್ಲರೂ ಯಾರಿಗೋ ಕಾಯತ್ತಿರುವಂತಿದೆ?"

"ಹುಂ...... ಹೌದು, ಇವತ್ತು ನಮ್ಮ ವನಜನ್ನು ನೋಡೋಕೆ ವರನ ಕಡೆಯವರು ಬರುತ್ತಿದ್ದಾರೆ" ಎಂದಳು. ಸದಾನಂದ ಹೆಂಡತಿಯನ್ನು ಹುಬ್ಬು ಗಂಟಿಕ್ಕಿ ನೋಡಿ, ಗುರ್ ಎಂಬುದನ್ನು ಗಮನಿಸಿ ತನ್ನಲ್ಲೇ ನಕ್ಕಳು.

ಅವರುಗಳು ಹೋಗಬಾರದೇ ಎನ್ನುವ ತವಕ ಆ ದಂಪತಿಗಳಲ್ಲಿರುವುದನ್ನು ಗಮನಿಸಿಯೂ ಮೈಥಿಲಿ ವನಜಳೊಡನೆ ಮಾತನಾಡುತ್ತಾ ಕುಳಿತಳು. ಗೋಪಿ ಜಲಜಳೊಡನೆ ಮಾತನಾಡುತ್ತಿದ್ದ. ಸ್ವಲ್ಪ ಹೊತ್ತಿನಲ್ಲೇ ವರನ ಕಡೆಯವರು ಆಟೋದಲ್ಲಿ ಬಂದಿಳಿದರು.

ವಾಸುಕಿ, ತನ್ನ ಅಕ್ಕ ಭಾವ ಹಾಗೂ ಅವರ ಮಗುವಿನೊಂದಿಗೆ ವಧು ಪರೀಕ್ಷೆಗೆಂದು ಬಂದಿದ್ದ. ಎಲ್ಲರೂ ಅವರನ್ನು ಸ್ವಾಗತಿಸಿದರು. ಸದಾನಂದ ವಿಧಿಇಲ್ಲದೆ ಖಿಣ್ ಎನ್ನುವ ಮುಖದೊಂದಿಗೆ ಗೋಪಿಯನ್ನು ಮೈಥಿಲಿಯನ್ನು ಅವರಿಗೆ ಪರಿಚಯ ಮಾಡಿಕೊಟ್ಟ. ಪರಸ್ಪರ ಪರಿಚಯದ ನಂತರ ಎಲ್ಲರೂ ಕುಳಿತು ಹರಟ ತೊಡಗಿದರು. ಗೋಪಿ ವಾಸುಕಿಯನ್ನೇ ಆಗಾಗ ನೋಡಿದ. ಸ್ಪುರದ್ರೂಪಿ, ಚಿಕ್ಕವಯಸ್ಸಿನವನಂತೆ ಕಾಣುತ್ತಿದ್ದ ವಾಸುಕಿಯನ್ನು ನೋಡಿ ಮೆಚ್ಚುಗೆಯಾಯಿತು. ಯಾವುದೋ ಒಂದು ಕಂಪೆನಿಯ ಸೇಲ್ಸ್ ರೆಪ್ರೆಸೆಂಟೆಟಿವ್ ಆಗಿ ಕೆಲಸದಲ್ಲಿದ್ದವನು, ತಂದೆ ತಾಯಿ ಇಲ್ಲ. ಅಕ್ಕ ಭಾವನೇ ಅವನ ಪರವಾಗಿ ಎಲ್ಲಾ ವಿಷಯಗಳನ್ನು ಹೇಳುತ್ತಿದ್ದರು. ಮೈಥಿಲಿ ಎಲ್ಲಾ ವಿಷಯಗಳನ್ನು ಸಂಗ್ರಹಿಸಿದಳು.

ಸುನಂದ ಎಲ್ಲರಿಗೂ ಕಾಫಿ ತಿಂಡಿ ತಂದಿತ್ತಳು. ವನಜ, ಜಲಜಳೊಡನೆ ಹೊರಗೆ ಬಂದು, ಅವರುಗಳೆಲ್ಲರ ಎದುರಿಗೆ ಕುಳಿತಳು. ಎಲ್ಲರೂ ಗಮನಿಸಿದರು.

ಉಟ್ಟಿದ್ದ ಅತಿ ಸಾಮಾನ್ಯವಾದ ನೂಲಿನ ಸೀರೆ, ಅದಕ್ಕೆ ಒಪ್ಪದ ಯಾವುದೋ ಬಣ್ಣದ ರವಿಕೆ, ಬಿಗಿಯಾಗಿ ಹೆಣೆದ ಜಡೆ, ಮುಖದ ಅಂದವನ್ನು ಕುಗ್ಗಿಸುವಂತೆ ಹಣೆಗಿಟ್ಟುಕೊಂಡ ಅಗಲದ ಕುಂಕುಮ, ವಾಸುಕಿ ಮತ್ತೆ ಅವಳ ಕಡೆ ತಿರುಗಲಿಲ್ಲ. ಅವನಿಗೆ ತಿಂಡಿ ಕಾಫಿಯನ್ನು ಮುಗಿಸುವುದು ಅಸಾಧ್ಯವಾಗಿ ಕಂಡಿತ್ತು. ಗೋಪಿಯ ತುಟಿಯಂಚಿನಲ್ಲಿ ಕಿರುನಗೆ ಮೂಡಿದರೂ, ವನಜಳ ಈ ಅಲಂಕಾರ ಅವನಿಗೂ ಹಿಡಿಸಿರಲಿಲ್ಲ. ತನ್ನೆದುರಿಗೆ ಅವಳು ಹೀಗೆ ಬಂದು ನಿಂತರೆ, ತಾನೂ ಅವಳನ್ನು ನಿರಾಕರಿಸುವುದು ಖಂಡಿತಾ ಅಂತಂದುಕೊಂಡ.

ಸುನಂದ ಕಿಡಿ ಕಿಡಿಯಾದಳು. ಮಗಳು ಬೇಕೂಂತ ಹೀಗೆ ಅಲಂಕರಿಸಿಕೊಂಡು ತಮಗೆ ಅವಮಾನ ಮಾಡುತ್ತಿದ್ದಾಳೆ ಅಂತ ಊಹಿಸಿದಳು. ವಾಸುಕಿ ಸ್ಪುರದ್ರೂಪಿ, ಬಹುಶಃ ಅವನು ವನಜನ್ನ ಒಪ್ಪುವುದಿಲ್ಲವೆಂದು ಸದಾನಂದನಿಗೆ ಖಚಿತವಾಗಿತ್ತು. ಈ ಸನ್ನಿವೇಶದಲ್ಲಿ ಗೋಪಿ, ಮೈಥಿಲಿ ಬಂದುದು ಅವನಿಗೆ ಮೈ ಪರಚಿಕೊಳ್ಳುವಷ್ಟು ಅಸಹನೀಯವಾಗಿತ್ತು.

ವಧು ಪರೀಕ್ಷೆ ಬಹಳ ಬೇಗ ಮುಗಿದು ಹೋಯಿತು. ಶಾಸ್ತ್ರಕ್ಕೆ ಲೋಪ ಬರದಂತೆ ತಂದಿದ್ದ ಹಣ್ಣು ಹೂವುಗಳನ್ನು ತೆಗೆದಿಟ್ಟು, ಸುನಂದ ಕೊಟ್ಟ ಅರಿಶಿನ ಕುಂಕುಮ ಎಲೆ ಅಡಿಕೆಯನ್ನು ತೆಗೆದುಕೊಂಡಳು ವಾಸುಕಿಯ ಅಕ್ಕ ಲಲಿತ ವನಜ ಅಲ್ಲಿಂದ ಎದ್ದು ಹೋಗಿದ್ದಳು. ವರನ ಕಡೆಯವರು ನಿರಾಸಕ್ತಿಯಿಂದ 'ಬರ್ತೀವಿ' ಎಂದು ಹೇಳಿ ಹೊರಟಾಗ ಸದಾನಂದನಿಗೆ ಮುಖ ಭಂಗವಾದಂತಾಗಿತ್ತು. ಮೈಥಿಲಿ ಒಳಗೆ ಹೋಗಿ ವನಜಳೊಡನೆ ಏನೋ ಮಾತನಾಡಿ ಬಂದಳು. ಹತ್ತು ನಿಮಿಷಗಳ ನಂತರ ತಾಯಿ ಮಗ ಅಲ್ಲಿಂದ ಹೊರಟರು. ಅವರಿಬ್ಬರ ಮುಖದ ಮೇಲಿನ ನಸುನಗೆ, ಸುನಂದಳನ್ನು ಅಣಕಿಸಿದಂತಿತ್ತು. ಸದಾನಂದ ಮರ್ಯಾದೆಯನ್ನು ಮರೆತು, ಅವರಿಬ್ಬರಿಗೂ ಹೇಳದೇ ಮನೆಯಿಂದ ಹೊರಗೆ ಹೊರಟು ಹೋಗಿದ್ದ.

ತಾಯಿ ಮಗ ಬೈಕ್ ಹತ್ತುವುದನ್ನೇ ಕಾದಿದ್ದವಳಂತೆ ಸುನಂದ ಮಗಳನ್ನು ತರಾಟೆಗೆ ತೆಗೆದುಕೊಂಡಳು.

"ನಮ್ಮ ಮರ್ಯಾದೆ ಕಳೆಯಬೇಕೂಂತ ತೀರ್ಮಾನ ಮಾಡಿದ್ಯಾ? ಇದೇನಿದು ನಿನ್ನ ಅಲಂಕಾರ?.... ಏನಿಲ್ಲದೇನೇ..... ನಿನ್ನಂತಹವಳನ್ನು ಗಂಡು ಹುಡುಗರು ಒಪ್ಪುವುದು ಕಷ್ಟ. ಅಂಥದ್ದರಲ್ಲಿ ಇದಕ್ಕಿಂತ ಹಳೆಯ ಸೀರೆ ಇರಲಿಲ್ವಾ? ಬೇರೆ ರವಿಕೆ ಇರಲಿಲ್ವಾ ವ್ಯಂಗ್ಯದಿಂದ ಮುಖತಿವಿದು ಆಡಿದಾಗ

ವನಜಾ ರೇಗಿದ್ದಳು."

"ಬಿಡಮ್ಮಾ..... ಅವನು ನನ್ನ ಸೀರೆ ಅವಿಕೀನ ನೋಡೋಕೆ ಬಂದಿರಲಿಲ್ಲ.... ಅವನು ನನ್ನನ್ನು ಒಪ್ಪುವುದು ನನಗೆ ಬೇಕಿಲ್ಲ."

"ನನಗೆ ಗೊತ್ತು ಕಣೇ..... ಅದಕ್ಕೇ ಹೀಗೆ ಮಾಡಿದೀಯ.... ನಿನ್ನ ಜವಾಬ್ದಾರಿ ಕಳೆದರೆ ಸಾಕು ಅಂತ ನಾವು ಇರುವಾಗ ನಿನಗೆ ತಮಾಷೆ ಅತ್ತೆ ಮಾವಂದಿರ ಕಾಟವಿಲ್ಲ. ನಾದಿನಿ ಮೈದುನರ ಜವಾಬ್ದಾರಿ ಇಲ್ಲ. ಹುಡುಗ ಅಂತೂ ದಿವಿನಾಗಿದ್ದಾನೆ..... ಇನ್ನೇನು ಬೇಕು ನಿನಗೆ?....."

"ಆ ದಿನಿನಾಗಿರುವ ಹುಡುಗ ನನ್ನನುನ ಖಂಡಿತಾ ಒಪ್ಪಲ್ಲ. ನನಗೆ ಗೊತ್ತು. ನಿನಗ್ಯಾಕೆ ದುರಾಸೆ? ನಿನಗೇ ಗೊತ್ತು ನಿನ್ನ ಮಗಳು ಅಪ್ರತಿಮ ಸುಂದರಿ ಅಲ್ಲ ಅಂತ."

"ಸಾಕು ತಲೆ ಹರಟೆ.... ಒಳ್ಳೆಯ ರೇಶಿಮೆ ಸೀರೆ ಉಟ್ಟು, ಕಾಲೇಜಿಗೆ ಹೋಗುವಂತೆ ನವೀನವಾಗಿ ಅಲಂಕರಿಸಿಕೊಂಡಿದ್ದರೆ ಖಂಡಿತಾ ಒಪ್ತಿದ್ದ.... ನಾನೂ ನೋಡಿದೆ. ಅವನು ನಿನ್ನ ಕಡೆ ನೋಡಲೇ ಇಲ್ಲ...."

"ಅವನಿಗೆ ಆಸಕ್ತಿಯಿದ್ದರೆ ನೋಡ್ತಿದ್ದ ಬಿಡಮ್ಮ..... ನೀನು ನನ್ನ ಹತ್ತಿರ ಮತ್ತೆ ಮತ್ತೆ ಅದೇ ಮಾತನಾಡಬೇಡ."

"ಈ ನಡುವೆ ನಿನ್ನ ಗರ್ವ ಹೆಚ್ಚಾಗಿದೆ. ಅದ್ಸರಿ ಗೋಪಿ ಅವನ ತಾಯಿ ಜತೆ ಯಾಕೆ ಬಂದಿದ್ದ? ಅದೂ ಇವತ್ತೇ?....."

"ನಂಗೇನು ಗೊತ್ತು? ನೀನೇ ಕೇಳಬೇಕಾಗಿತ್ತು......"

"ತಿಳುವಳಿಕೆ ಇಲ್ಲದ ಜನ..... ವರನ ಕಡೆಯವರು ಬರ್ತಾರೆ ಅಂತ ತಿಳಿದ ಮೇಲೂ ಕೂತಿದ್ರಲ್ಲ. ಕೆಟ್ಟ ಕುತೂಹಲ" ವನಜ ತನಗೆ ಆ ಮಾತು ಕೇಳಿಸಲಿಲ್ಲವೆನ್ನುವಂತೆ, ನನಗೆ ಇನ್ನೂ ಸ್ವಲ್ಪ ಕೇಸರಿ ಬಾತ್ ಉಪ್ಪಿಟ್ಟು ಕೊಡು. ತುಂಬಾ ರುಚಿಯಾಗಿತ್ತು..... ಅಂತಂದಳು.

"ಎಲ್ಲಿ ಉಳಿದಿದೆ? ಮಾಡಿದ್ದೇ ಸ್ವಲ್ಪ. ಅವರಿಬ್ಬರೂ ಬಂದಿದ್ರಲ್ಲ....."

"ಹೋಗಲಿ ಬಿಡು. ನಮ್ಮ ಮನೇಲಿ ಎಂದೂ ಗೋಪಿ ತಿಂಡಿ ತಿಂದಿರಲಿಲ್ಲ."

"ಯಾಕೆ? ಮುಂಚೆ ಹಬ್ಬದಲ್ಲಿ ನಮ್ಮ ಮನೆಗೆ ಕರೀತಿದ್ದೆವಲ್ಲ ಆಗ ಕೊಡ್ತಾ ಇರಲಿಲ್ವೆ?"

"ಅವರೂ ಕೊಡುತ್ತಿದ್ದರಲ್ಲ..... ಹೌದಮ್ಮ..... ಆಗೆಲ್ಲಾ ನಿನಗೆ ಆಂಟಿಯನ್ನು ಕಂಡರೆ ಇಷ್ಟವಿತ್ತು. ಈಗೇಕೆ ಸಿಡುಕುತ್ತಿದೀಯಾ?"

ಹೊತ್ತು ಗೊತ್ತು, ಸಮಯಸಂದರ್ಭ ಆಕೆಗೆ ತಿಳಿಯಲ್ಲವಲ್ಲ ಅದಕ್ಕೇ.... ನನಗೇನೂ ಆಕೆ ಮೇಲೆ ದ್ವೇಷವಿಲ್ಲ. ಆದರೆ ಆಕೆಯ ಗಂಡ ಆ ಪೋಲಿಸ್ ಅಧಿಕಾರಿಗೆ ಅತೀ ಅಹಂಕಾರವಂತೆ...... ನಿಮ್ಮಪ್ಪ ಹೇಳ್ತಾರೆ.

"ಅವರ ವೃತ್ತಿಗೆ ತಕ್ಕಹಾಗೆ ಅಧಿಕಾರ ದರ್ಪ ಜೋರು, ಅದನ್ನ ಅಪ್ಪ ಅಹಂಕಾರ ಅತಾರೆ...... ಅಪ್ಪನ ಹಾಗೆ ಗುಮಾಸ್ತರಾಗಿದ್ದರೆ..... ಕತ್ತು ಬಗ್ಗಿಸಿ ಕೈ ಕಟ್ಟಿ ವಿನೀತನಾಗಿ ನಿಲ್ಲುತ್ತಿದ್ದರೇನೊ......?"

"ನಿಮ್ಮಪ್ಪ ಗುಮಾಸ್ತ ಅಂತ ಹಂಗಿಸಿ ಅಂತೀದೀಯ.... ಸ್ವಂತ ಮಗಳು ನಿನಗೇ ಹೀಗಿದ್ದರೆ ಇನ್ನು ಉಳಿದವರು ಹೇಗಾಡ್ತಾರೋ...... ಹಿರಿಯಕ್ಕನ ಚಾಳಿ ಮನೆ ಮಕ್ಕಳಿಗೆಲ್ಲ ಅಂತ..... ನಿನ್ನಿಂದ ಆ ಜಲಜೀನೂ ಹೀಗೇ ಆಡ್ತಾಳೆ. ನೀವು ಹುಟ್ಟಿದ್ದಕ್ಕೆ ನಮ್ಮ ಜನ್ಮ ಸಾರ್ಥಕವಾಯ್ತು."

"ಬಿಡಮ್ಮಾ.... ನಾವು ಹುಟ್ಟಿದ್ದು ನಮ್ಮ ತಪ್ಪಲ್ಲ. ಹುಟ್ಟಿದ ತಪ್ಪಿಗೆ ನಮ್ಮ ನಮ್ಮ ಜನ್ಮಾವ ನಾವು ಸಾರ್ಥಕ ಪಡಿಸಿಕೊಂಡರೆ ಸಾಕಾಗಿದೆ."

"ಏನೇ ಹೀಗೆಲ್ಲಾ ಆಡ್ತೀಯಾ?"

"ಮತ್ತಿನ್ನೇನು? ಅಪ್ಪ ಒಂದು ತರಹ, ನೀನೋ ಇನ್ನೊಂದು ತರಹ. ಮಧ್ಯೆ ನಾವಿಬ್ಬರು. ನಮ್ಮನ್ನ ಹಂಗಿಸಿ ಅಂತೀಯ. ಎಂದಾದ್ರೂ ವಿಶ್ವಾಸದಿಂದ ಮಾತನಾಡಿಸಿದೀಯ......?"

"ಇಲ್ಲಮ್ಮಾ ಇಲ್ಲ. ಪ್ರೀತಿ ವಿಶ್ವಾಸವಿಲ್ಲದೇನೇ.... ನಿಮ್ಮನ್ನಾ ಬೆಳಸಿ ದೊಡ್ಡವರನ್ನು ಮಾಡಿದೆವು. ವಿದ್ಯೆ ಕಲಿಸಿದೆವು. ಬುದ್ಧಿ ಇಲ್ಲದ ಕೆಲಸ ಮಾಡಿದೆವು. ಇದು ನಿನ್ನ ತಪ್ಪಲ್ಲ. ನಿನ್ನ ವಯಸ್ಸಿನ ಮಹಿಮೆ. ನಿನಗೂ ಮದುವೆಯಾಗಿ ನೀನೂ ಮಕ್ಕಳ ತಾಯಿ ಆದಮೇಲೆ, ತಾಯಿಯ ಬೆಲೆ ತಿಳಿಯುತ್ತೆ. ನನ್ನ ಕರ್ಮಕ್ಕೆ ನಿನ್ನನ್ನೇಕೆ ಅನ್ನಲಿ? " ಎನ್ನುತ್ತಾ ಮುಸಿ ಮುಸಿ ಅಳುತ್ತಾ ಕಣ್ಣು ಮೂಗು ಒರೆಸಿಕೊಂಡಾಗ ವನಜಾ ಕೆಟ್ಟಮುಖ ಮಾಡಿದಳು.

"ಈ ಅಮ್ಮನೋ..... ತಾನೂ ಏನೇನೋ ಆಡಿ, ನನ್ನ ಬಾಯಿಂದಲೂ ಆಡಿಸಿ ಕಡೆಗೆ ನನ್ನನ್ನೇ ದೂಷಿಸ್ತಾಳೆ. ತನ್ನ ಪಾಡಿಗೆ ತಾನೇಕೆ ಇರಬಾರದು? ನನ್ನನ್ನೇಕೆ ನನ್ನ ಪಾಡಿಗೆ ಬಿಡಬಾರದು?" ಎಂದುಕೊಂಡು ತನ್ನ ತಂಗಿಯನ್ನು ಕರೆದಳು.

"ಏಯ್ ಜಲಜೀ ಬಾರೇ ಇಲ್ಲಿ. ಆ ಬಾಳೆಹಣ್ಣು ಚೆನ್ನಾಗಿ ಹಣ್ಣಾಗಿದ್ದರೆ ನಾಲ್ಕು ತಂದುಕೊಡು. ಹಾಗೇ ಆ ಮಾವಿನ ಹಣ್ಣನ್ನು ತೊಳೆದುಕೊಂಡು ತಗೊಂಡು ಬಾ..... ಇಬ್ಬರೂ ತಿನ್ನೋಣ." ಜಲಜಾ ಸಂಭ್ರಮದಿಂದ ಬಾಳೆ

ಹಣ್ಣಿನ ಚಿಪ್ಪನ್ನು ಎತ್ತಿಕೊಂಡಾಗ ತಾಯಿ ಹಣೆಹಣೆ ಚಚ್ಚಿಕೊಂಡಳು.

ಸ್ವಲ್ಪ ಹೊತ್ತಿನ ನಂತರ ಮನೆಗೆ ವಾಪಸ್ಸಾಗಿದ್ದ ಸದಾನಂದ ಏರು ಧ್ವನಿಯಲ್ಲಿ ಹೆಂಡತಿಯನ್ನು ಪ್ರಶ್ನಿಸಿದ್ದ.

"ಅವರಿಬ್ಬರೂ, ಅಮ್ಮ ಮಗ ಇವತ್ತೇ ಏಕೆ ಬಂದಿದ್ದರು?"

"ಏಕೆ ಬಂದಿದ್ದರೋ ನನಗೇನು ಗೊತು?"

"ಅವನು ಕೆಲಸಕ್ಕೂ ಹೋಗದೇ ಬಂದಿದ್ದ. ಏನೋ ಕುತಂತ್ರ.... ಏನೇ ವನಜಾ.... ನಿನಗೇನಾದ್ರೂ ಗೊತ್ತೇನೆ?....."

"ಅವಳಿಗೇನು ಗೊತ್ತು? ಎಲ್ಲಾ ಬಿಟ್ಟು ವರ ನೋಡೋಕೆ ಬರೋ ದಿನ ಹುಡುಗಿ ತಾನಾಗಿಯೇ ಇನ್ನೊಬ್ಬರ ಹತ್ತಿರ ಏಕೆ ಹೇಳ್ತಾಳೆ?" ಎಂದು ಸುನಂದ ಮಗಳ ಪರವಹಿಸಿ ಮಾತನಾಡಿದರೂ, ಅವಳಿಗೂ ಏನೋ ಸಂದೇಹ ಉಂಟಾಯಿತು. ಮಗಳೂ ಅವಲಕ್ಷಣವಾಗಿ ಅಲಂಕರಿಸಿಕೊಂಡು ನಿರುತ್ಸಾಹದಿಂದ ಕೂತಿದ್ದುದು ಅರ್ಥವಾಗತೊಡಗಿತ್ತು. ತನಗೆ ಈ ಅನುಮಾನ ಮೊದಲೇ ಬಂದಿರಲಿಲ್ಲ. ಮಗಳೂ ಸರಿಯಾಗಿ ಮಾತನಾಡಿರಲಿಲ್ಲ ಅಂತನ್ನಿಸಿದಾಗ ಇದು ವನಜಳ ಕಿತಾಪತಿ ಎಂದು ಊಹಿಸಿದಳು. ಆದರೂ ಗಂಡನೊಡನೆ ನಡೆದುದನ್ನು ತಿಳಿಸಲು ಹೆದರಿದಳು. ಆದರೂ ಸದಾನಂದ ಎಲ್ಲರಿಗೂ ಕೇಳಿಸುವಂತೆ ಆಡಿದ್ದ.

"ನನಗೆ ಎಲ್ಲಾ ತಿಳಿಯತ್ತೆ. ನೀವೆಲ್ಲಾ ಅತಿ ಜಾಣರು. ಏನಾದರೂ ಎಡವಟ್ಟಾಗಿ ಈ ಮದುವೆ ನಿಂತು ಹೋದರೆ, ಇನ್ನು ನಾನು ಈ ಜನ್ಮದಲ್ಲಿ ನಿನ್ನ ಮಗಳಿಗೆ ಗಂಡು ಹುಡುಕಿ ಮದುವೆ ಮಾಡುವುದಿಲ್ಲ."

"ಒಳ್ಳೇದೇ ಆಯ್ತು ಎಂದು ಕೊಂಡು ವನಜ ತನ್ನಲ್ಲೇ ನಕ್ಕಿದ್ದಳು. ಆದರೆ ಸುನಂದಾ ಮಾತ್ರ" ಸುಮ್ಮನಿರಿ ಅಪಶಕುನದ ಮಾತೇಕೆ ಆಡ್ತೀರಿ.... ಎಂದು ಇಬ್ಬರಿಗೂ ಸಮಾಧಾನ ಹೇಳುವಂತೆ ಮಾತನಾಡಿದ್ದಳು.

ಗೋಪಿ ಬಂದು ಹೋದದ್ದು ವನಜಳಿಗೆ ಸಮಾಧಾನ ನೀಡಿತ್ತು. ಅಲ್ಲದೇ ಆಂಟಿ ಬಂದುದು ಏನೋ ಬೆಂಬಲವಿದ್ದಂತೆ, ಹೇಗೂ ಇಬ್ಬರೂ ಒಟ್ಟಿಗೆ ಬಂದಿದ್ದಾರೆ. ತಂದೆಯ ಬಳಿ ತಮ್ಮ ಮದುವೆಯ ವಿಷಯವನ್ನು ಎತ್ತಬಹುದೇನೋ ಎಂದು ಕಾದಳು. ಆದರೆ ಯಾಕೋ ಆ ಮಾತನೆತ್ತಲಿಲ್ಲ. ಅವಳಂತೂ ವಾಸುಕಿಯನ್ನು ನೋಡಲೇ ಇಲ್ಲ. ಗೋಪಿಯ ಎದುರಿನಲ್ಲಿ ಅವನನ್ನು ನೋಡುವುದು ಬೇಡವೆಂದೆನಿಸಿತ್ತು. ಆದರೆ ಈಗ, ಆ ಪ್ರಭೃತಿಯನ್ನು ಒಂದು ಸಲವಾದರೂ ನೋಡಿದ್ದರೆ ಗೋಪಿಯನ್ನು ರೇಗಿಸಬಹುದಾಗಿತ್ತು

ಎಂದೆನಿಸಿತ್ತು. ತನ್ನ ಹೊರತು, ಬೇರ್ಯಾವ ಗಂಡಸನ್ನು ಅವಳು ವರ್ಣಿಸಬಾರದು ಎಂದಿದ್ದನಲ್ಲವೇ.... ವಾಸುಕಿ ಹಾಗಿದ್ದ. ಹೀಗಿದ್ದ ಎಂದು ಆಡಿ ಗೋಪಿಯನ್ನು ಸತಾಯಿಸಬಹುದಾಗಿತ್ತು ಎಂದುಕೊಂಡಳು.

ಗೋಪಿಯ ಮೌನ ಮೈಥಿಲಿಗೆ ಅರ್ಥವಾಗಿತ್ತು. ಇದುವರೆಗೂ ಆ ವಿಷಯವನ್ನು ಗಂಭೀರವಾಗಿ ತೆಗೆದುಕೊಳ್ಳದೇ ಈಗ ಇಷ್ಟು ಆಲೋಚಿಸುತ್ತಿದ್ದಾನಲ್ಲ ಅಂತನ್ನಿಸಿತ್ತು. ತಾನೇ ಏನಾದರೂ ಉಪಾಯ ಸೂಚಿಸಬೇಕು ಅಂತ ಅಂದುಕೊಂಡಳು. ಇದ್ದಕ್ಕಿದ್ದಂತೆ ಮೌನವನ್ನು ಮುರಿದು ಗೋಪಿ ಕೇಳಿದ.

"ಹಾಗಾದ್ರೆ ಅಪ್ಪ ಒಪ್ಪುವುದೇ ಇಲ್ಲ ಅಂತೀಯ......?" ಮೈಥಿಲಿ ಒಂದುಗಳಿಗೆ ಅವನನ್ನೇ ನೋಡಿದಳು.

"ಒಂದು ವೇಳೆ ಅವರು ಒಪ್ಪದದಿದ್ದರೆ ಏನು ಮಾಡಬೇಕು ಅಂತ ನೀನೇನೂ ಯೋಚಿಸಿಲ್ವಾ?"

"ಇಲ್ಲಮ್ಮಾ..... ನನ್ನ ತಲೆ ಖಾಲಿಯಾದಂತಾಗಿದೆ. ಅಪ್ಪನ್ನ ನೀನು ಒಪ್ಪಿಸಲು ಸಾಧ್ಯವಿಲ್ಲವಾ?"

"ಅವರು ಒಂದು ತರಹ ಹಠದ ಸ್ವಭಾವದವರು. ತಮ್ಮ ಮಾತೇ ನಡೆಯಬೇಕು ಅಂತ ಅವರ ಮನಸ್ನಲ್ಲಿ ಬಂದರಾಯ್ತು.... ಬ್ರಹ್ಮ ಬಂದರೂ ತಮ್ಮ ನಿಲುವನ್ನು ಬದಲಾಯಿಸುವುದಿಲ್ಲ. ಆಗ ಎಲ್ಲಾ ಕಷ್ಟವಾಗುತ್ತೆ. ಅವರು ಹೇಗಾದರೂ ಒಪ್ಪುವಂತೆ ಮಾಡಬೇಕು. ಅದಕ್ಕೆ ಸ್ವಲ್ಪ ಕಾಲಾವಕಾಶಬೇಕು....."

"ಇವತ್ತು ಬಂದಿದ್ನಲ್ಲ ಆ ಹುಡುಗ, ಅವನು ವನಜನ್ನ ಒಪ್ಪುವ ಸಾಧ್ಯತೆ ಇದೆ ಅಂತೀಯಾ?"

"ಒಪ್ಪಲಾರ..... ವನಜಳ ನಿರುತ್ಸಾಹದ ಮುಖ ನೋಡಿದರೆ, ಅವನಿಗೂ ಏನೋ ಅನುಮಾನ ಬಂದಿರುತ್ತೆ...."

"ಹಾಗೇ ಆದರೆ ಸರಿ..... ಇನ್ನು ಕೆಲವು ದಿನ ಸಮಯ ಸಿಗುತ್ತೆ"

"ಹಾಗಲ್ಲ ಕಣೋ. ವನಜಾ ತಾನೇ ಎಷ್ಟು ದಿನಾಂತ ಕಾಯ್ತಾಳೆ. ಇವನಲ್ಲದಿದ್ದರೆ ಇನ್ನೊಬ್ಬ, ಅವನಲ್ಲದಿದ್ದರೆ ಮತ್ತೊಬ್ಬ, ಹೀಗೆ ವರ ಪರೀಕ್ಷೆ ನಡೆಯುತ್ತಲೇ ಇದ್ದರೆ, ಯಾವುದಾದರೂ ಒಂದು ಸೆಟ್ಲ್ ಆಗಿ ಹೋದರೇ....?"

"ಇಲ್ಲಮ್ಮಾ ವನಜಾ ಬೇರೆ ಯಾರನ್ನೂ ಒಪ್ಪಲ್ಲ"

"ಆ ಸ್ವತಂತ್ರ ಹೆಣ್ಣು ಹುಡುಗಿಯರಿಗೆಲ್ಲಿದೆ? ಅಪ್ಪ ಅಮ್ಮ ಬಲವಂತ ಮಾಡಿದರೆ, ನೀನೂ ಹೀಗೆ ನಿಧಾನ ಮಾಡಿದರೆ, ಆ ಹುಡುಗಿ ತಾನೇ

ಏನು ಮಾಡ್ತಾಳೆ?"

"ಹಾಗಾದ್ರೆ ಏನು ಮಾಡೋದು ನೀನೇ ಹೇಳು......"

"ಆ ಹುಡುಗ ಯಾರು? ಅವನು ಎಲ್ಲಿದ್ದಾನೆ ಅಂತ ಅವನ ವಿಳಾಸ ಕೇಳಿ ತಿಳಿದುಕೊಂಡೆಯಾ?"

"ಇಲ್ಲಮ್ಮ ನಮಗ್ಯಾಕೆ ಅದು?"

"ಈಗ ಅದು ಬೇಕಾಗಿದೆ. ಮೊದಲು ನಾವು ಹೋಗಿ ಅವನ ಹತ್ತಿರ ಮಾತನಾಡೋಣ."

"ಛೆ..... ಅದೆಲ್ಲ ಚೆನ್ನಾಗಿರುಲ್ಲಮ್ಮಾ....... ಬೇಡ"

"ಈಗ ನನ್ನ ಮನಸ್ನಲ್ಲಿ ಒಂದು ಉಪಾಯವಿದೆ. ಅದು ಆಗ ಬೇಕಾದರೆ, ನಾವು ಅವರೊಡನೆ ಮಾತಾಡಲೇ ಬೇಕು. ನೀನು ಅವರು ಎಲ್ಲಿವಾಸವಾಗಿದ್ದಾರೆ ಅಂತ ತಿಳಿದುಕೋ......"

"ವನಜನನ್ನೇ ಕೇಳಬೇಕಾಗುತ್ತೆ...."

"ಹೂಂ. ಮತ್ತೆ, ಆದಷ್ಟು ಬೇಗ ಅವರ ಅಡ್ರೆಸ್ ತಿಳಕೋ...."

"ಹೂಂ, ಎಂದ, ತಾಯಿಯ ಪ್ಲಾನ್ ಏನೋ ಎಂಬ ಕುತೂಹಲ ಅದು ನೆರವೇರಲಿ ಎಂಬ ಹಂಬಲ...... ಅದೇ ದಿನ ವನಜಳಿಂದ ವಿಳಾಸವನ್ನು ಪಡೆದ."

"ನಿನ್ನ ಪ್ಲಾನ್ ಏನೂಂತ ಹೇಳೋ ಮಾರಾಯ...."

"ನನಗೂ ಗೊತ್ತಿಲ್ಲ. ಅಮ್ಮ ಕೇಳಿದ್ದರಿಂದ ವಿಳಾಸ ಕೇಳಿದೆ ಅಷ್ಟೇ.."

"ಸಧ್ಯ, ನಿಮ್ಮ ಪೋಲಿಸ್ ನಾಯಿಗಳನ್ನು 'ಛೂ' ಬಿಟ್ಟು ಅಟ್ಟಿಸಿಕೊಂಡು ಹೋಗಿ, ಅವನನ್ನು ಅರೆಸ್ಟ್ ಮಾಡಿ, ಲಾಕಪ್‌ನಲ್ಲಿ ಹೊಡೆಸಿ, ಮತ್ತೆ ಬೇರೆ ಯಾವ ಹೆಣ್ಣನ್ನು ನೋಡಲು ಆಗದ ಹಾಗೆ ಭಯಂಕರ ಪ್ಲಾನ್ ಅಲ್ಲ ತಾನೇ?...."

"ಛೆ......." ನಾನು ನನ್ನ ಅಮ್ಮ ಅಷ್ಟು ನೀಚರು ಅಂತ ಅನ್ನಿಸುತ್ತಾ ನಿನಗೆ?

"ಹಾಗಲ್ಲ. ಪೋಲಿಸ್ನೋರ ಐಡಿಯಾಗಳು ಹೀಗಿರಬಹುದೇನೋ ಅಂತ...."

"ಅವನಿಗೆ ಹಾಗೆ ತೊಂದರೆ ಕೊಡುವ ಬದಲು, ನಿನ್ನನ್ನು ಅವನಿಗೆ ಒಪ್ಪಿಸಲು ಸಿದ್ಧ ನಾನು...."

"ಸಧ್ಯ ನನ್ನ ಕಾಟ ತಪ್ಪಿದರೆ ಸಾಕು ಅಂತ ಕಾಯ್ತ ಇದೀಯ ಅಂತ ಕಾಣಿಸುತ್ತೆ ಅಲ್ವಾ?"

"ಹಾಗೇ ತಿಳಕೋ" ಎಂದು ನಕ್ಕು ನುಡಿದು ಹೊತ್ತಾಯ್ತು ಅಮ್ಮ ಕಾಯ್ತಾ ಇರ್ತಾಳೆ ನಾನು ಬರ್ತೀನಿ ಎಂದು ಹೊರಟು ಹೋದ.

ಅವನ್ಯಾಕೆ ಮತ್ತೆ ಬಂದಿದ್ದ ? ತಾಯಿ ಅನುಮಾನದಿಂದ ಕೇಳಿದಾಗ ರೇಗಿದ್ದಳು.

"ನೀನೇ ಬಂದು ಕೇಳಬೇಕಾಗಿತ್ತು....."

"ಅವನು ನಿನ್ನ ಹತ್ತಿರ ಹರಟೆ ಹೊಡೀತಿದ್ನಲ್ಲ ಅದಕ್ಕೆ ಕೇಳಿದೆ"

"ಬೆಳಿಗ್ಗೆ ಇಲ್ಲೇ ಹೆಲ್ಮೆಟ್ ಮರೆತು ಹೋಗಿದ್ದನಂತೆ. ತಗೊಂಡು ಹೋಗೋಕೆ ಬಂದಿದ್ದ."

"ಅದೆಷ್ಟು ಹೊತ್ತು ಮಾತ್ನಾಡ್ತಿದ್ದ ಮತ್ತೆ?"

"ನೀನೂ ಬಂದಿದ್ದರೆ ಇನ್ನು ಸ್ವಲ್ಪ ಹೊತ್ತು ಮಾತ್ನಾಡ್ತಿದ್ದ ಗೊತಾ?"

"ಸಧ್ಯ, ನನಗೆ ನಿನ್ನ ಹಾಗೆ ಬೇರೆ ಕೆಲಸವಿಲ್ವಾ?" ಎನ್ನುತ್ತಾ ತಾಯಿ ಸುಮ್ಮನಾದಾಗ, ಅವಳು ತಾಯಿಯನ್ನೇ ದುರುದುರು ನೋಡಿದಳು.

ಗೋಪಿ ಮೈಥಿಲಿ ಬೈಕ್‌ನಲ್ಲಿ ಕುಳಿತು ಸೀದಾ ವಾಸುಕಿಯ ಮನೆಗೆ ಬಂದರು. ಅವನ ಅಕ್ಕ ಮಾತ್ರ ಮನೆಯಲ್ಲಿದ್ದಳು. ಇವರು ತಾವಾಗಿಯೇ ಮತ್ತೆ ತಮ್ಮ ಪರಿಚಯ ಹೇಳಿಕೊಂಡಾಗ, ಅವಳು ಒಳಕ್ಕೆ ಆಹ್ವಾನಿಸಿದಳು.

"ನಿಮ್ಮ ತಮ್ಮನಿಗೆ ವನಜ ಒಪ್ಪಿಗೆಯಾದಳೆ?" ಎಂದು ಮೈಥಿಲಿ ದಿಢೀರನೇ ಕೇಳಿದಾಗ ಲಲಿತಾ ಕಕ್ಕಾಬಿಕ್ಕಿ. ಆದರೂ ಸಾವರಿಸಿಕೊಂಡು,

"ಇಲ್ಲ..... ಅವನಿನ್ನು ತನ್ನ ನಿರ್ಧಾರವನ್ನು ತಿಳಿಸಿಲ್ಲ" ಎಂದಳು.

"ನಾವು ವನಜಳ ಬಗ್ಗೆ ಮಾತಾಡಲೆಂದೇ ಬಂದಿದ್ದೇವೆ....." ಎಂದಾಗ ಲಲಿತಾ ಗಾಭರಿಯಾದಳು.

"ನೋಡಿ, ಏನೇನೋ ಇಲ್ಲ ಸಲ್ಲದ ಮಾತಾಡಲು ಬಂದಿದ್ದರೆ ದಯವಿಟ್ಟು ಹೊರಟು ಹೋಗಿ.... ನೀವು ಅವರ ಪರಿಚಯದವರಿರಬಹುದು. ಆದರೆ ನೀವು ಈಗ ಏನು ಹೇಳುತ್ತೀರಿ ಎನ್ನುವುದರಲ್ಲಿ ನಮಗೆ ಆಸಕ್ತಿ ಇಲ್ಲ....."

"ದಯವಿಟ್ಟು ತಪ್ಪು ತಿಳಿದುಕೊಳ್ಳಬೇಡಿ. ನಾವು ಯಾರ ಮೇಲೂ ಇಲ್ಲ ಸಲ್ಲದ ವಿಷಯವನ್ನಾಡಲು ಬಂದಿಲ್ಲ. ಮೊದಲು ನಾವು ಹೇಳುವುದನ್ನು ಕೇಳಿ, ನಂತರ ನಿಮ್ಮ ತೀರ್ಮಾನ ತಿಳಿಸಿ ಪರವಾಗಿಲ್ಲ"

"ಹುಂ, ಹೇಳಿ, ಆಕೆ ಬೇಸರದಿಂದ ನುಡಿದಾಗ, ಗೋಪಿಗೆ ಮುಜುಗರವಾಗಿತ್ತು. ಯಾರೋ ಅಪರಿಚಿತರ ಮನೆಗೆ ಬಂದು, ಅವರ ತಿರಸ್ಕಾರದ ದೃಷ್ಟಿಗೆ ಬಿದ್ದೆವಲ್ಲ ಅಂತನ್ನಿಸಿತ್ತು....."

"ಇವನು ನನ್ನ ಮಗ ಗೋಪಿ, ಇವನು ವನಜನ್ನ ಪ್ರೀತಿಸುತ್ತಾನೆ. ಇವನಿಗಿಂತ ಹೆಚ್ಚಾಗಿ ವನಜ ನಮ್ಮ ಗೋಪಿಯನ್ನು ಪ್ರೀತಿಸುತ್ತಾಳೆ."

"ಸರಿ, ಅದಕ್ಕೆ.....?" ನಾನೇನು ಮಾಡಲಿ ಎನ್ನುವಂತೆ ಕೇಳಿದಳು.

"ಈ ವಿಷಯ ಅವಳ ತಂದೆ ತಾಯಿಗೆ ತಿಳಿಯದು. ಇವನ ತಂದೆಗೂ ತಿಳಿಯದು. ತಿಳಿದರೆ ಮದುವೆ ನೆರವೇರಬಹುದು ಎಂಬ ನಂಬಿಕೆ ಇಲ್ಲ. ಆದ್ದರಿಂದ ನೀವು ಈಗ ನಮಗೆ ಸಹಾಯ ಮಾಡಬೇಕು"

"ಅಂದರೆ....! ನಾವು ಈ ವಿಷಯವನ್ನು ಅವರಿಗೆ ತಿಳಿಸಬೇಕೆ? ಚೆನ್ನಾಗಿದೆ. ಯಾರಾದ್ರೂ ನಗ್ತಾರೆ ಅಷ್ಟೇ....."

"ಹಾಗಲ್ಲ ಲಲಿತಮ್ಮ.... ನಾನು ಇಷ್ಟು ಹೇಳಿದ ಮೇಲೆ ನೀವುಗಳು ಖಂಡಿತಾ ವನಜಳನ್ನು ಒಪ್ಪಲಾರಿರಿ.... ಆದರೆ ಈಗ ನೀವು ನಮಗೋಸ್ಕರ ಅವಳನ್ನು ಒಪ್ಪಿರುವಂತೆ ನಾಟಕವಾಡಬೇಕು....."

"ಅದ್ಯಾಕೆ? ಇದಕ್ಕೆ ನಮ್ಮ ವಾಸುಕಿ ಒಪ್ಪದಿದ್ದರೇ.....?"

"ನಿಮ್ಮ ತಮ್ಮನಿಗೆ ಹೇಳಿ ಒಪ್ಪಿಸಿ..."

"ಅದೆಲ್ಲಾ ನಾನು ಹೇಳುಕ್ಕಾಗುಲ್ಲ. ಅವನ ಮನಸ್ನಲ್ಲಿ ಏನಿದೆಯೋ...." ನೀವು ಬೇಕಾದರೆ ಅವನ ಹತ್ತಿರನೇ ಮಾತಡಬಹುದು.....

"ಸರಿ, ಹಾಗಾದ್ರೆ.... ಅವರ ವಿಳಾಸ ಕೊಡಿ....."

"ಸಾಯಂಕಾಲ ಐದೂವರೆಯ ಮೇಲೆ ಬಂದರೆ, ಅವನು ಇಲ್ಲಿಯೇ ಸಿಗ್ತಾನೆ. ಆಗ ಬನ್ನಿ" ಎನ್ನುತ್ತಾ ಅಕ್ಕ ಲಲಿತ ಅವರುಗಳನ್ನು ಕಳಿಸಿಕೊಟ್ಟಳು.

"ಅವಳೇನಾದರೂ ಈಗಲೇ ಸದಾನಂದರಾಯರಿಗೆ ತಿಳಿಸಿದರೇ.... ಎಂಬ ಅನುಮಾನ ಬಂದರೂ, ಏನೂ ಮಾಡುವಂತಿರಲಿಲ್ಲ."

"ಅಮ್ಮ.... ಇದೇನಮ್ಮಾ ಫಜೀತಿ..... ಯಾರ್‍ಯಾರ ಮನೆ ಬಾಗಿಲಿಗೋ ಹೋಗುವ ಸ್ಥಿತಿ ಬಂತಲ್ಲಮ್ಮಾ"

"ಹಾಗೇ ಕಣೋ. ಕೆಲವು ಸಲ ನಮ್ಮ ಕೆಲಸವಾಗಬೇಕಾದರೆ ಕತ್ತೆ ಕಾಲನ್ನೂ ಕಟ್ಟ ಬೇಕಾಗುತ್ತದೆ. ಒದೆತ ತಿನ್ನಬೇಕಾಗುತ್ತದೆ. ಗೋಪಿಗೆ ಯಾಕೋ ಬೇಸರವಾಗತೊಡಗಿತ್ತು. ವಾಸುಕಿ ಚೆನ್ನಾಗಿದ್ದಾನೆ. ಒಳ್ಳೆಕೆಲಸದಲ್ಲಿದ್ದಾನೆ ವನಜಳನ್ನು ಮದುವೆಯಾದರೆ ಅವಳು ಸುಖವಾಗಿರಬಹುದು, ಆದರೆ ಅವಳನ್ನು ಪ್ರೀತಿಸುತ್ತಿರುವವನು ನಾನು, ಅವಳನ್ನು ಅಷ್ಟು ಸುಲಭವಾಗಿ ಬಿಟ್ಟು ಕೊಡಬಾರದು ಅಂತನ್ನಿಸಿದಾಗ, ಬಂದದ್ದೆಲ್ಲಾ ಬರಲಿ ಎಲ್ಲವನ್ನೂ ಎದುರಿಸುತ್ತೀನಿ. ಆದರೆ ಯಾರ ವಿರೋಧವನ್ನು ಕಟ್ಟಿಕೊಳ್ಳದಂತೆ ಆಗದಿರಲಿ

ಎಂದುಕೊಂಡ."

ಮನೆಗೆ ಬಂದ ಮೈಥಿಲಿ, ಕೈ ಕಾಲು ತೊಳೆದು, ರಾಮಾಯಣದ ಸುಂದರ 'ಕಾಂಡ' ದಲ್ಲಿನ ನಾಲ್ಕಾರು ಶ್ಲೋಕಗಳನ್ನು ಓದಿಕೊಂಡಳು. ಸುಂದರಕಾಂಡವನ್ನು ಓದಿದರೆ ಮನಸ್ಸಿನ ಅಭಿಲಾಷೆಗಳು ಈಡೇರುತ್ತವೆ ಎಂಬ ನಂಬಿಕೆ ಅವಳದು.

ಮತ್ತೆ ಸಾಯಂಕಾರ ಗಂಡ ಮನೆಗೆ ಬಂದು ಹೊರಗೆ ಮತ್ತೆ ಹೋದನಂತರ, ಇಬ್ಬರೂ ಹೊರಟರು. ಅವರುಗಳು ಇವರನ್ನೇ ಕಾಯುತ್ತಿರುವಂತೆ ಅನ್ನಿಸಲಿಲ್ಲವಾದರೂ, ಇವರುಗಳನ್ನು ನಗೆಮಾಗದಿಂದ ಬರಮಾಡಿಕೊಂಡರು.

"ಇದು ಅಕ್ಕ ತಮ್ಮನಿಗೆ ಸಂಬಂಧಿಸಿದ ವಿಷಯ. ಆದ್ದರಿಂದ ನಾನು ಹೀಗೇ ಸುತ್ತಾಡಿ ಬರ್ತೀನಿ ಎಂದು ಲಲಿತಳ ಗಂಡ ರಘುರಾಮ ಹೊರಟು ಬಿಟ್ಟ. ಮೈಥಿಲಿ ಮತ್ತೊಮ್ಮೆ ಸಂಕ್ಷಿಪ್ರವಾಗಿ ಎಲ್ಲವನ್ನು ವಾಸುಕಿಗೆ ತಿಳಿಸಿದಳು."

"ಈ ವಿಷಯದಲ್ಲಿ ನಾವು ನಿಮಗೆ ಏನು ಸಹಾಯ ಮಾಡುವುದಕ್ಕಾಗುತ್ತೆ? ಇದು ನಿಮನಿಮಗೆ ಸಂಬಂಧಿಸಿದ ವಿಷಯ ತಾನೇ.....?"

ನಿಜ ಆದರೆ ನಾವು ನಾವೇ ಕೆಲವು ವಿಷಯಗಳನ್ನು ನಿರ್ಧರಿಸಿ ಕಾರ್ಯಗತಕ್ಕೆ ತರಲಾಗುತ್ತಿಲ್ಲವಾದ್ದರಿಂದ ಹೇಗೂ ಈಗ ಮಧ್ಯೆ ನೀವುಗಳು ಬಂದಿರುವುದರಿಂದ ನಿಮ್ಮ ಸಹಾಯವನ್ನು ಕೇಳ್ತೀದೀನಿ ಅಷ್ಟೇ....

"ಸರಿ. ಈಗ ನಾನೇನು ಮಾಡಬೇಕು ಹೇಳಿ....."

"ನೀವೀಗ ವನಜಳನ್ನು ಒಪ್ಪಿರುವುದಾಗಿ ಹೇಳಿಬಿಡಿ......"

"ಅಂ! ನಾನಿನ್ನೂ ಆ ಬಗ್ಗೆ ತೀರ್ಮಾನವನ್ನೇ ತಗೊಂಡಿಲ್ಲವಲ್ಲ...."

"ನಾನು ಯಾಕೆ ಹೇಳ್ತಿದೀನಿ ಅಂತಂದ್ರೆ.... ನೀವು ಒಪ್ಪಿಗೆ ಕೊಟ್ಟರೆ, ಅವರುಗಳು ಬೇರೆ ಗಂಡನ್ನು ನೋಡುವುದಿಲ್ಲ. ನಾವು ಮತ್ತೆ ಮತ್ತೆ ನಿಮ್ಮ ಜತೆ ಮಾತಾಡಿದ ಹಾಗೆ ಎಲ್ಲರ ಹತ್ತಿರ ಮಾತನಾಡಲಾಗುವುದಿಲ್ಲ"

"ಇದೊಳ್ಳೆ ಚೆನ್ನಾಗಿದೆ. ಏನು ನಿಮ್ಮ ಮಾತು?"

"ಪರಿಸ್ಥಿತಿ ಹಾಗಿದೆ. ಏನಪ್ಪಾ ಮಾಡೋದು? ಇಲ್ಲಿ ಸದಾನಂದರಾಯರು ಪೋಲಿಸ್ ಇಲಾಖೆಯವರಲ್ಲ ಅದೇ ಮೊದಲ ಸಮಸ್ಯೆ. ನಮ್ಮವರಿಗೆ ಇಷ್ಟವಾಗುವುದಿಲ್ಲ.... ಅವರನ್ನು ಹೇಗಾದರೂ ಒಪ್ಪಿಸಬೇಕಾಗಿದೆ"

"ಲವ್ ಮ್ಯಾರೇಜ್‌ನಲ್ಲಿ ಹುಡುಗ ಹುಡುಗಿಯರದೇ ಅಂತಿಮ ತೀರ್ಮಾನ.... ಅಂಥಾದ್ದರಲ್ಲ....." ಈಗ ಯಾಕೆ ಸಮಸ್ಯೆ?

"ಇಬ್ಬರೂ ಲವ್ ಮಾಡಿರಬಹುದು. ಆದರೆ ಅದನ್ನು ನಾವುಗಳು

ಅರೇಂಜ್ ಮಾಡಿ ಮದುವೆ ಕಾರ್ಯ ನೆರವೇರಿಸಬೇಕಾಗಿದೆ. ಅದಕ್ಕೀಗ ನಿಮ್ಮ ಸಹಕಾರ ಬೇಕಾಗಿದೆ."

"ನಾವು ಇನ್ನೂ ನಾಲ್ಕಾರು ಹುಡುಗಿಯರನ್ನು ನೋಡಿದ್ದೆವು. ಅದರಲ್ಲಿ ಒಬ್ಬಳನ್ನು ಆರಿಸುತ್ತಿದ್ದೆವು. ಈಗ ಈ ಹುಡುಗಿಯ ವಿಚಾರವನ್ನು ಕೈಬಿಡುತ್ತೇವೆ. ಅಷ್ಟು ಸಾಲದೇ... " ಅಕ್ಕ ಮಧ್ಯೆ ಬಾಯಿ ಹಾಕಿದ್ದಳು.

"ನಿಮಗೆ ಮೊದಲೇ ಎಲ್ಲಾ ವಿಷಯವನ್ನು ತಿಳಿಸಿ, ನಡೆಯಲಿರುವ ಸಂಬಂಧವನ್ನು ನಿಲ್ಲಿಸುವುದರಲ್ಲಿ ನಮ್ಮ ಸ್ವಾರ್ಥತನವೇ ಜಾಸ್ತಿ..... ಆದರೆ ಒಂದು ಮಾತು ಮಾತ್ರ ನಿಜ. ವನಜ ಸ್ವಭವತಃ ಒಳ್ಳೆಯ ಹುಡುಗಿ. ಅವಳಲ್ಲಿ ಯಾವ ದುರ್ಗುಣವೂ ಇಲ್ಲ. ಮೊದಲಿನಿಂದಲೂ ನಮ್ಮಿಬ್ಬರಿಗೆ ಮೆಚ್ಚುಗೆಯಾದವಳು. ಆದರೆ ನಮ್ಮ ಯಜಮಾನರಿಗೆ ಈ ಸಂಬಂಧ ಬೆಳೆಸುವ ಇಚ್ಛೆ ಇಲ್ಲ. ವನಜಳ ತಂದೆ ತಾಯಿಯರೂ ಅಷ್ಟೇ. ಆದರೆ ಆ ಕಾರಣದಿಂದ ಪರಸ್ಪರ ಕುಟುಂಬದವರ ಒಪ್ಪಿಗೆ ಇಲ್ಲದೇ ಅವಳನ್ನು ಮದುವೆಯಾಗುವ ಆಸೆ ನಮ್ಮ ಗೋಪಿಗಿಲ್ಲ"

"ನೀವೇ ಏಕೆ ಹೋಗಿ ಧೈರ್ಯವಾಗಿ ಕೇಳಬಾರದು.....?"

"ಹುಂ.... ಅಂದರೆ ಸರಿ. ಇಲ್ಲದಿದ್ದರೆ, ಕೆಲಸ ಶುರುವಾಗುವ ಮೊದಲೇ ಕೆಟ್ಟು ಹೋಗುತ್ತದೆ... ನಂತರ ಸರಿ ಪಡಿಸಲಾಗುವುದಿಲ್ಲ"

"ಆದರೂ ಇದು ನೀವು ನೀವುಗಳೇ ನಿರ್ಧರಿಸಬೇಕಾದ ವಿಷಯ. ಮಧ್ಯೆ ನಾವು ತಲೆ ಹಾಕುವುದು ಸರಿಯಲ್ಲ"

"ಪ್ಲೀಸ್, ಹಾಗೆನ್ನ ಬೇಡಿ. ಒಬ್ಬ ಪೋಲಿಸ್ ಅಧಿಕಾರಿಯ ಪತ್ನಿಯಾಗಿ ಮಗನ ಹಿತಕ್ಕಾಗಿ ನಿಮ್ಮ ಸಹಾಯವನ್ನು ಕೇಳ್ತಿದಿನಿ ಅಷ್ಟೆ. ಈಗ ನೀವು ಸಹಾಯ ಮಾಡದಿದ್ದರೆ ಆ ಹುಡುಗಿಯ ಬಾಳು ಬರಡಾಗುತ್ತದೆ."

"ಸರಿಯಮ್ಮಾ..... ನೀವು ಇಷ್ಟು ಕೇಳಿದ ಮೇಲೆ ಹುಂ ಎನ್ನದೇ ವಿಧಿ ಇಲ್ಲ. ಆದರೆ ಹೇಗೆ ಅಂತ ನನಗೆ ಅರ್ಥವಾಗುತ್ತಿಲ್ಲ"

"ಸಧ್ಯಕ್ಕೆ, ನೀವು ವನಜಳನ್ನು ಒಪ್ಪಿರುವುದಾಗಿ ತಿಳಿಸಿ ಬಿಡಿ....." ಸ್ವಲ್ಪ ಸಮಯ ಸಿಗುತ್ತೆ..... ನಂತರ ಮುಂದೆ ಯೋಚಿಸಿದರಾಯ್ತು.

"ಅದೆಲ್ಲಾ ಚೆನ್ನಾಗಿರಲ್ಲ. ಮೊದಲು ಒಪ್ಪಿಗೆ ಕೊಡುವುದು. ನಂತರ ಆಗುಲ್ಲ ಎನ್ನುವುದು ನನ್ನ ಮನಸ್ಸಿಗೆ ವಿರುದ್ಧವಾದ ಕೆಲಸ.... ನನ್ನನ್ನು ಎಲ್ಲರೂ ಥೂ... ಛೀ.... ಅಂತ ತೆಗಳ್ತಾರೆ."

"ಎಷ್ಟೋ ಮದುವೆಗಳು, ನೆರವೇರುವ ಮೊದಲು ಏನೋ ಕಾರಣದಿಂದ

ನಿಂತು ಹೋಗುಲ್ವೇ.... ಹಾಗೇ ಅಂತ ಅಂದುಕೊಳ್ಳಿ.... ಈಗ ನೀವೇ ಯೋಚಿಸಿ, ವನಜಳ ಬಗ್ಗೆ ನಿಮಗೆ ಯಾವ ವಿಷಯವೂ ತಿಳಿದಿರಲಿಲ್ಲ.... ಮದುವೆ ಗೊತ್ತಾದ ನಂತರ, ನಿಮ್ಮ ಪತ್ನಿಯಾಗುವವಳು ಬೇರೆ ಯಾರನ್ನೋ ಪ್ರೀತಿಸುತ್ತಿದ್ದಾಳೆ ಅಂತ ತಿಳಿದರೆ ಏನು ಮಾಡ್ತೀರಿ..... ನಿಮ್ಮ ಆದರ್ಶವನ್ನು ಸಾರುವುದಕ್ಕೆ ಅವಳನ್ನು ಮದುವೆಯಾಗಿ ನಂತರ ಗಂಡ ಹೆಂಡತಿ ಸಾಮರಸ್ಯವಿಲ್ಲದ ಜೀವನವನ್ನು ಸಾಗಿಸುತ್ತೀರಾ?"

"ನಿಮ್ಮ ಆ ಹುಡುಗಿಗೇ ಹೇಳಿ.... ಅವಳಿಗೇ ನಾನು ಒಪ್ಪಿಗೆ ಯಾಗದಿದ್ದರೆ ಮದುವೆಯ ಮಾತೆಲ್ಲಿ?"

"ಹುಡುಗಿಯರಿಗೆ ಆ ಸ್ವಾತಂತ್ರ್ಯ ಎಲ್ಲಿದೆ? ಹಾಗೇನಾದರೂ ಹೇಳಿದರೆ ಅನುಮಾನ ಹೆಚ್ಚಾಗಿ ಮನೆಯಲ್ಲಿ ರಂಪ ರಾದ್ಧಾಂತವಾಗುತ್ತವೆ."

"ಒಟ್ಟಿನಲ್ಲಿ ನಾನೀಗ, ಈ ಪ್ರೇಮಿಗಳ ಮದುವೆಗೆ ಸಹಾಯ ಮಾಡಬೇಕು ಅನ್ನಿ" ಎನ್ನುತ್ತಾ ವಾಸುಕಿ ಮುಗುಳ್ನಕ್ಕಾಗ ಮೈಥಿಲಿಗೆ ಸಮಾಧಾನವಾಗಿತ್ತು.

"ನೀವೂ ವಿದ್ಯಾವಂತರು. ತಿಳುವಳಿಕಸ್ಥರು... ನಮಗೆ ಸಹಾಯಮಾಡಲು ಒಪ್ಪಿಕೊಂಡಿದ್ದು ನಿಮ್ಮ ದೊಡ್ಡ ಗುಣ. ಇದರಿಂದ ನಿಮಗೆ ಸ್ವಲ್ಪ ನಿರಾಸೆ, ತೊಂದರೆ ಆಗಬಹುದು. ನಿಮಗೆ ಥ್ಯಾಂಕ್ಸ್....."

"ಆಗಲಿ ನಿಧಾನವಾಗಿ ಥ್ಯಾಂಕ್ಸ್ ಹೇಳೋರಂತೆ. ಮೊದಲು ನಿಮ್ಮ ಆಸೆನೆರವೇರಲಿ ಯಾರಿಗೂ ಅವಮಾನವಾಗದಿದ್ದರೆ ಅಷ್ಟೆ ಸಾಕು.... ನನಗೆ ನಿರಾಸೆಏನಿಲ್ಲ. ಆದರೆ ನಿಮ್ಮ ಪ್ಲಾನ್ ಏನು ಅದರಲಿಲ ಯಾರ್‍ಯಾರ ಪಾತ್ರ ಏನೂಂತ ನೀವೇ ತಿಳಿಸಬೇಕು. ಇಲ್ಲದಿದ್ದರೆ ತೊಂದರೆ ಆಗುತ್ತೆ"

"ಆಗಲಿ.... ಸಧ್ಯದಲ್ಲೇ ಎಲ್ಲಾ ತಿಳಿಸ್ತೀವಿ... " ನಾವಿನ್ನು ಬರ್ತೀವಿ.

"ಕಾಫಿ ಕುಡಿದು ಹೊರಡೋರಂತೆ" ಎನ್ನುತ್ತಾ ಅಕ್ಕ ಒಳಗೆ ಹೋದಾಗ, ಗೋಪಿ ಅನುಮಾನದಿಂದ ವಾಸುಕಿಯನ್ನು ಪ್ರಶ್ನಿಸಿದ್ದ.

"ನಿಮಗೆ ನಿರಾಸೆ ಏನೂ ಆಗ್ತಿಲ್ಲತಾನೇ......." ನಿಜ ಹೇಳಿ

"ನಿರಾಸೆ ಏಕೆ? ಆ ದಿನ ಆ ಹುಡುಗಿಯ ನಿರುತ್ಸಾಹ ಕಂಡು, ಆಹುಡುಗಿಗೆ ಇಷ್ಟವಿಲ್ಲದಿರಬಹುದು ಅಂತ ಅಂದುಕೊಂಡಿದ್ದೆ. ಆದರೆ, ನಾನು ಈ ರೀತಿ ಸಹಾಯ ಮಾಡಬೇಕಾಗಬಹುದು ಅಂತ ಖಂಡಿತಾ ಊಹಿಸಿರಲಿಲ್ಲ."

ಅಲ್ಲಿಂದ ವಾಪಸ್ಸು ಹೊರಟಾಗ ಗೋಪಿ ಪೆಚ್ಚಾಗಿದ್ದ. ತಾನೊಬ್ಬ

ಪೋಲಿಸ್ ಅಧಿಕಾರಿ. ತನ್ನ ಕೈ ಕೆಳಗಿನವರನ್ನು ತನ್ನ ಹದ್ದು ಬಸ್ತಿನಲ್ಲಿಟ್ಟುಕೊಂಡಿರುವವನು. ಆದರೆ ಈಗ? ತನ್ನ ಒಂದು ಸ್ವಂತ ಸಮಸ್ಯೆಯ ಪರಿಹಾರಕ್ಕೆ ಯಾರೋ ಬೇರೊಬ್ಬನ ಸಹಾಯವನ್ನು ಪಡೆಯುವ ಸ್ಥಿತಿ ಬಂದಿತಲ್ಲ. ತನಗೇಕೆ ಈ ಅಂಜಿಕೆ? ಅಪ್ಪನ ಎದುರಿಗೆ ನಿಂತು ತನ್ನ ಸ್ವಾರ್ಥಕ್ಕಾಗಿ ವಿರೋಧ ಕಟ್ಟಿಕೊಳ್ಳುವವನಲ್ಲ ನಾನು..... ಈ ವಾಸುಕಿ ತನಗೇನು ಸಹಾಯ ಮಾಡಬಲ್ಲ ಅಂತ ಅನ್ನಿಸಿದರೂ, ವನಜಳನ್ನು ಕಳೆದುಕೊಳ್ಳಲು ಸಿದ್ಧನಿರಲಿಲ್ಲ. ವನಜ ತನಗಾಗಿ, ಕೆಲವು ವಿಷಯದಲ್ಲಿ ಅವಳೇ ಅವಳೇ ತನಗಿಂತ ಧೈರ್ಯವಂತೆ. ತಂದೆ ತಾಯಿಯರ ಮನೆಯನ್ನು ಬಿಟ್ಟು ಬಂದು ತಮ್ಮ ಮನೆಯಲ್ಲಿ ಇರಲೂ ರೆಡಿ. ಆದರೆ ಆಗ ತನ್ನ ತಂದೆ ಅವಳಿಗೆ ರಕ್ಷಣೆ ಕೊಡದಿದ್ದರೆ, ತನ್ನಿಂದ ದ್ರೋಹವಾಗುವುದಿಲ್ಲವೆ? ಹಾಗಾಗಬಾರದು, ಹಾಗಾಗ ಬಾರದು. ಹಗಲು ರಾತ್ರಿ ತಲೆ ಕೆಡಿಸಿಕೊಂಡರೂ, ಅವನಿಗೆ ಉಪಾಯ ಹೊಳೆಯದಾಗಿತ್ತು. ತಾಯಿಯೊಡನೆ ಮತ್ತೆ ಮತ್ತೆ ಅದೇ ವಿಷಯವನ್ನು ಚರ್ಚಿಸಲು ಮನಸ್ಸಿಲ್ಲ. ನಾಲ್ಕುದಿನ ರಜ ಹಾಕಿ ಎಲ್ಲಾದರೂ ಹೋಗಿ ಬರುವ ಮನಸ್ಸು ಮಡಿದ.

ಅದೇ ವಿಷಯವನ್ನು ತಾಯಿಗೆ ಹೇಳಿದಾಗ ಆಕೆ ನಕ್ಕಿದ್ದಳು "ನೀನೇ ಯೋಚಿಸು.... ನಾಲ್ಕು ದಿನ ಎಲ್ಲಾದರೂ ಹೊರಟು ಹೋದ ಮಾತ್ರಕ್ಕೆ ಸಮಸ್ಯೆ ಪರಿಹಾರವಾಗುವುದಿಲ್ಲ. ಮತ್ತೆ ಬರಲೇಬೇಕು. ತಾನೇ.... ನೀನೂ ಹೊರಟು ಹೋದರೆ ವನಜ ಏನಂದು ಕೊಳ್ಳುತ್ತಾಳೆ?

"ಹಾಗಾದರೆ ಅಪ್ಪನ ಹತ್ತಿರ ಇವತ್ತೇ ಮಾತನಾಡ್ತೀನಿ. ಅದೇನು ಆಗಿ ಹೋಗುತ್ತೇ ಆಗಿ ಹೋಗಲಿ."

"ಬೇಡ ಸುಮ್ಮನಿರು. ನಿಮ್ಮಪ್ಪ ತಾನಾಗಿಯೇ ಒಪ್ಪಬೇಕು. ಅಂಥ ಒಂದು ಪ್ಲಾನ್ ನನ್ನ ಹತ್ತಿರ ಇದೆ. ಇಷ್ಟರ ಮೇಲೆ ದೇವರಿಚ್ಛೆ. ಆ ಪ್ಲಾನ್ ಏನೂಂತ ಈಗಲೇ ಹೇಳುಲ್ಲ. ಒಂದೊಂದಾಗಿ ಕಾರ್ಯಗತಕ್ಕೆ ತರ್ತೀನಿ. ನಿನಗೆ ತಾನಾಗಿಯೇ ತಿಳಿಯುತ್ತೆ."

"ಸರಿಯಮ್ಮಾ... ನಿನ್ನಂತಹ ತಾಯಿ ಇರುವಾಗ ನನಗೇನೂ ಆತಂಕವಿಲ್ಲ. ನನ್ನ ಮನಸ್ಸನ್ನು ಅರ್ಥ ಮಾಡಿಕೊಂಡಿದೀಯಲ್ಲ ಅಷ್ಟೇಸಾಕು."

"ನನಗೆ ಮಗ ಮಗಳು ಎಲ್ಲಾ ನೀನೆ.... ನಿನ್ನ ಸಂತೋಷವೇ ನನ್ನ ಸಂತೋಷ. ನೀನೇನಾದರೂ ಮನಸ್ತಾಪ ಮಾಡಿಕೊಂಡು ನನಿಂದ ದೂರ ಹೋದರೂ ನಾನು ಅದನ್ನು ಸಹಿಸಲಾರೆ ಕಣೋ.....?"

ಅಮ್ಮಾ ನನಗೆ ತಾನೇ ನಿನ್ನಿಂದ ದೂರ ಇರುಕ್ಕೆ ಆಗುತ್ತೆ ಅಂತ ಅಂದ್ಕೊಂಡ್ಯಾ? ಬೇಕಾದರೆ ವನಜಳನ್ನು ಬಿಟ್ಟಿರಬಲ್ಲೆನೋ ಏನೋ?

"ಬೇಡ, ಗೋಪಿ ಹಾಗೆ ಮಾತ್ರ ಮಾಡಬೇಡ. ನಿನ್ನನ್ನೇ ನಂಬಿರುವವಳಿಗೆ ಅನ್ಯಾಯ ಮಾಡಬೇಡ..... ಆಗಲಿ ನನ್ನ ಪ್ಲಾನ್ ಏನು ಮಾಡುತ್ತೆ ಅಂತ. ನೀವಿಬ್ಬರೂ ಸುಖವಾಗಿರುವುದೂ ನನಗೆ ಮುಖ್ಯ. ಸಧ್ಯಕ್ಕೆ ನಿನ್ನ ಪಾಡಿಗೆ ನೀನಿರು. ನಾನು ಎಲ್ಲಾ ನೋಡಿಕೊಳ್ತೀನಿ"

ಎರಡು ಮೂರು ದಿನಗಳಾದರೂ, ಗೋಪಿಯನ್ನು ಭೇಟಿಮಾಡಲಾಗಲಿಲ್ಲ. ಏನೋ ಆತಂಕ ಅಧೈರ್ಯ ವರನ ಕಡೆಯವರೂ ಮತ್ತೆ ಬಂದಿರಲಿಲ್ಲವಾದ್ದರಿಂದ ಸದಾನಂದ ಎಗರಾಡುತ್ತಿದ್ದ.

ಗಂಡಿನವರಿಗೇ ತಾನೇ ಶ್ರೇಷ್ಠ ಎನ್ನುವ ಜಂಭ. ಒಪ್ಪಿದೀವಿ ಅಥವಾ ಇಲ್ಲ ಅಂತ ತಿಳಿಸುಕ್ಕೆ ಇಷ್ಟು ಕಾಲ ತಗೋಬೇಕೆ? ಹೆಣ್ಣು ಹೊತ್ತೋರ ಹೊಟ್ಟೆ ಉರಿಸಿದರೇ ಅವರಿಗೆ ತೃಪ್ತಿ..... ನಗು ನಗುತ್ತಾ ಒಳಗೆ ಬಂದ ಗೋಪಿಯನ್ನು ನೋಡಿ ಆತ ಮಾತು ನಿಲ್ಲಿಸಿದರು. ಇವನೇಕೆ ಬಂದ ಈಗ ಎನ್ನುವಂತೆ ಅವನನ್ನೇ ದುರುಗುಟ್ಟಿ ನೋಡಿದರು. ಆದರೆ ಏನೂ ವಿಚಾರ ಎಂದು ಪ್ರಶ್ನಿಸಲಿಲ್ಲ.....

"ಇವತ್ತು ನಮ್ಮ ಮನೇಲಿ "ಮೂರು ದೋಸೆ ಹಬ್ಬ" ಆದಕ್ಕೆ ಅಮ್ಮ ನಿಮ್ಮೆಲ್ಲರನ್ನೂ ಕರೆದು ಬಾ ಅಂತಂದಳು. ಹಾಗೇ ಹೇಳಿ ಬಿಟ್ಟು ಹೋಗೋಣ ಅಂತ ಬಂದೆ. ನಿಮ್ಮ ಮೂಡ್ ಯಾಕೋ ಚೆನ್ನಾಗಿಲ್ಲ ಅಂತ ಕಾಣುತ್ತೆ. ಕೆಣಕಿದ."

"ಹಾಗೇನಿಲ್ಲ. ಏನೋ ಇದ್ದೇ ಇರುತ್ತಲ್ಲ ತಾಪತ್ರೆಯಗಳು. ಅದು ಸರಿ. ಪ್ರತಿ ಹಬ್ಬಕ್ಕೂ ನಮ್ಮಗಳನ್ನೆಲ್ಲಾ ನಿಮ್ಮ ತಾಯಿ ಕರೀತಾರಲ್ಲ. ಯಾಕೆ? ನಿಮ್ಮವರು ಯಾರೂ ಇಲ್ಲವೇ?"

"ಇದ್ದಾರೆ. ಬೇಕಾದಷ್ಟು ಜನ ಇದ್ದಾರೆ. ಆದರೆ ಅವರುಗಳೆಲ್ಲರ ಮನೇಲೂ ಹಬ್ಬ ಇರುತ್ತೆ. ಅವರುಗಳು ಯಾರಿಗೆ ಈ ಹಬ್ಬದ ಆಚರಣೆ ಇಲ್ಲವೋ ಅಂತಹವರ ಮನೆಯವರನ್ನು ಕರೀತಾರೆ....."

"ಯಾಕೆ ನಿಮ್ಮ ಅಕ್ಕ ಪಕ್ಕದಲ್ಲಿ ಯಾರೂ ಇಲ್ಲವೇ....."

"ಇರಬಹುದು. ಅವರುಗಳನ್ನು ಕರೆಯುತ್ತೀವಿ. ಹಾಗೇ ನೀವುಗಳೂ ಸ್ನೇಹಿತರೂ ನಿಮ್ಮಂತಹ ಸ್ನೇಹಿತರನ್ನು ಕರೀತೀವಿ." ಸದಾನಂದ ಸುಮ್ಮನಾದ ನಮ್ಮನ್ನು ಇವರು ಸ್ನೇಹಿತರು ಅಂತ ಭಾವಿಸ್ತಾರೆ. ನನಗೆ ಇದೆಲ್ಲಾ ಬೇಕೇ

ಇಲ್ಲ. ಆದರೆ ಹೇಳುವುದು ಹೇಗೆ? ಏಕೋ ಏನೋ ಮನಸ್ಸಿಗೆ ಮುಜುಗರವೆನಿಸಿ ಅಲ್ಲಿಂದ ಹೊರಟು ಹೋದರು. ವನಜ ಗೋಪಿಯ ಕಡೆ ನೋಡಿ ಕಿಸಕ್ಕನೇ ನಕ್ಕಳು.

"ನಿಮ್ಮಮ್ಮ ಇಲ್ವಾ ಮನೇಲಿ?"

"ಇದ್ದಾಳೆ. ಅಡಿಗೇ ಮನೇಲಿರಬಹುದು, ಕರೀಲಾ?"

"ನೀನೇ ಹೇಳಿ ಬಿಡು ವನಜಾ... ನಾನು ಬರ್ತೀನಿ ಹೊತ್ತಾಗುತ್ತೆ."

"ನನ್ನಿಂದ ತಪ್ಪಿಸ್ಕೊಂಡು ಹೋಗೋ ತರಹೋ ಆಡ್ತಿದೀಯಾ..... ಏನು ಸಮಾಚಾರ?"

"ಇನ್ನು ನನ್ನನ್ನು ಕಟ್ಟಿಕೊಂಡು ಏನ್ಮಾಡ್ತೀಯಾ? ವಾಸುಕಿ ನಿನಗೋಸ್ಕರ ತುದಿಗಾಲಿನಲ್ಲಿ ನಿಂತು ಕಾಯುತ್ತಿರಬಹುದು ಅಲ್ವಾ?"

"ಅವನ್ಯಾಕೆ ಕಾಯ್ತಾನೆ? ಅವನು ನನ್ನನ್ನು ಒಪ್ಪಿದ್ದರೆ ತಾನೇ.....?"

"ಹಾಗಂತ ತಿಳಿಸಿದ್ನಾ?" ಗೋಪಿ ಗಾಭರಿಯಿಂದ ಪ್ರಶ್ನಿಸಿದಾಗ ಅವಳು ನಕ್ಕಳು.

"ಅದಕ್ಕೆ ನೀನೇಕೆ ಹೀಗೆ ಬೆಚ್ಚಿ ಬೀಳ್ತೀಯಾ? ನನಗೋಸ್ಕರ ನೀನು ಕಾಯ್ತಾ ಇರುವಾಗ, ನನ್ನ ಕಡೆ ಕಣ್ಣೆತ್ತಿ ನೋಡಿದ್ದರಂತೂ, ಅವನು ಖಂಡಿತಾ ನನ್ನನ್ನು ಒಪ್ಪುವ ಸಾಧ್ಯತೆ ಇಲ್ಲ."

"ನೀನು ಹಾಗೆ ಅಂದುಕೊಂಡಿರುತ್ತೀಯ..... ಒಂದುವೇಳೆ ಅವನು ಒಪ್ಪಿಗೆ ಕೊಟ್ಟು ಬಿಟ್ಟರೇ....."

ಆಗ ನೀನೇನು ಮಾಡ್ತೀಯಾ ಗೋಪಿ? ನಾನು ಇಲ್ಲದೇ ನೀನು ಇರಬಲ್ಲೆಯಾ? ಕೃಶವಾಗಿ ಕೌಸ್ತುವಾಗಿ ಹೋಗ್ತೀಯಾ? ವನಜಾ ತಮಾಷೆ ಮಾಡಿ ನಕ್ಕಾಗ, ಸುನಂದ ಒಳಗಿನಿಂದಲೇ ಕೇಳಿದಳು.

"ಯಾರ ಹತ್ತಿರ ಮಾತನಾಡ್ತಿದೀಯೇ ವನಜಾ.....?"

"ಅಮ್ಮಾ ಗೋಪಿ ಬಂದಿದಾನಮ್ಮಾ.... ಅವರ ತಾಯಿ ಹೇಳಿ ಕಳಿಸಿದಾರಂತೆ. ಸ್ವಲ್ಪ ಹೊರಗೆ ಬಾ.... " ಸೆರಗಿಗೆ ಕೈಯೊರೆಸುತ್ತಾ ಸುನಂದ ಹೊರಗೆ ಬಂದಳು. ಗೋಪಿಯನ್ನು ಕಂಡು ಆಕೆಯ ಮುಖ ಅರಳಲಿಲ್ಲ. ಗೋಪಿ ಮತ್ತೆ ಆಮಂತ್ರಣ ನೀಡಿದಾಗ, ನಿರ್ಲಿಪ್ತತೆಯಿಂದ 'ಆಗಲಿ' ಎಂದಳು.

"ಆಂಟಿ ವನಜನ್ನ ಸ್ವಲ್ಪ ಮುಂಚೆ ಕಳಿಸಬೇಕಂತೆ.... ಸಹಾಯ ಮಾಡುದಕ್ಕೆ.... ನಾನು ಈಗ ಡ್ಯೂಟಿ ಮೇಲೆ ಹೊರಗೆ ಹೋಗಬೇಕಾಗಿದೆ. ಬರೋದು ಎಷ್ಟು ಹೊತ್ತಾಗುತ್ತೋ ಏನೋ. ನಾನು ಬರ್ತೀವಿ." ಎಂದು

ಹೇಳಿ ಹೊರಗೆ ನಡೆದ. ವನಜಳಿಗೆ ಹೇಳಲಾರದಷ್ಟೆ ಖುಷಿಯಾಗಿತ್ತು. ಆದರೆ ಅದನ್ನು ತಾಯಿಯ ಎದುರಿಗೆ ವ್ಯಕ್ತ ಪಡಿಸುವಂತಿರಲಿಲ್ಲ. ತಾಯಿ ಏನನ್ನು ನುಡಿಯದೇ ಇದ್ದಾಗ ಅದು ಸಮ್ಮತವೆಂದುಕೊಂಡಳು.

ಆದರೆ ಅವಳು ಮುಂಚಿತವಾಗಿ ಹೊರಟಾಗ ತಡೆದಳು. ಸುನಂದ.

"ನೀನೇನು ಹೋಗಿ ಅವರ ಮನೆ ಚಾಕರಿ ಮಾಡಬೇಕಾಗಿಲ್ಲ. ಅವರ ದೊಡ್ಡಸ್ತಿಕೆ ಇದ್ದರೆ ಅವರಿಗೆ, ನಿನ್ನಂಥೋಳು ಒಬ್ಬಳು ಬಿಟ್ಟಿ ಸಿಕ್ಕರೆ ದುಡಿಸಿಕೊಳ್ಳದೇ ಏನು ಮಾಡ್ತಾರೆ?"

"ಏನಮ್ಮಾ ಹೀಗಾಡ್ತೀಯಾ? ಅವರೇ ಎಲ್ಲಾ ಮಾಡಿರುತ್ತಾರೆ. ಸುಮ್ಮನೆ ನನ್ನನ್ನು ಜತೆಗಿರಲಿ ಅಂತ ಕರೆದಿರ್ತಾರೆ ಅಷ್ಟೇ......"

"ನಂಗೆಲ್ಲಾ ಗೊತ್ತು.... ನಾಮ್ಮ ಮನೇಲಿ ಮೂರುಕಾಸಿನ ಕೆಲಸಾನ ಮಾಡುಲ್ಲ. ಅಲ್ಲಿಗಾದರೆ, ಓಡ್ತಾಳೆ. ಜಲಜೀನ ಕಳಿಸ್ತೀನಿ"

"ಸರಿ. ಬಿಡಮ್ಮಾ.... ಯಾರೂ ಹೋಗುವುದು ಬೇಡ. ನಿನಗೆ ಅವರುಗಳನ್ನ ಕಂಡರೇ ಆಗುವುದಿಲ್ಲ."

"ನಮ್ಮನೇ ವಿಷಯಕ್ಕೆ ಬಾಯಿ ಹಾಕಿಕೊಂಡು ಬರೋರನ್ನ ಕಂಡ್ರೆ ನನಗಾಗುಲ್ಲ. ಅವತ್ತು.... ಇಬ್ಬರೂ ಯಾಕೆ ಬಂದಿದ್ದರು?"

"ಚೆನ್ನಾಗಿದೆ ನನಗೇನು ಗೊತ್ತು? ಬೇಕಾದ್ರೆ ಹೋಗಿ ಕೇಳಿಕೊಂಡು ಬಂದು ಹೇಳ್ತೀನಿ. ಜಲಜೇ ನೀನು ಅವರ ಮನೆಗೆ ಬರೂದಾದ್ರೆ ಬೇಗ ರೆಡಿಯಾಗು. ಅವರ ಮನೇಲಿ ಕರೆದಿದ್ದಾರೆ...."

ಅವರಿಬ್ಬರೂ ಸಿದ್ಧಾರಗಿ ಹೊರಟು ನಿಂತಾಗ ತಾಯಿ ಹೊರಡದೇ ಇದ್ದುದನ್ನು ಕಂಡು ಕೇಳಿದಳು. ಅಮ್ಮಾ ನೀನು ಬರುಲ್ವೇನಮ್ಮಾ......

"ನಾನು ಅಲ್ಲಿ ಬಂದು ಕಾತರೆ ಇಲ್ಲಿಯ ಚಾಕರಿ ಯಾರು ಮಾಡ್ತಾರೆ. ನಿಮ್ಮ ಅಪ್ಪನೂ ಮನೆಗೆ ಬಂದಿಲ್ಲ. ಇಬ್ಬರೂ ಬೇಗ ಬಂದು ಬಿಡಿ. ಹೊತ್ತಾದ್ರೆ ನಿಮ್ಮಪ್ಪ ಎಲ್ಲರನ್ನೂ ಬೈತಾರೆ."

"ಹೂಂ ನಮ್ಮ" ಎನ್ನುತ್ತಾ ಅಕ್ಕ ತಂಗಿಯರಿಬ್ಬರೂ ಚಿಗರೆಗಳಂತೆ ಓಡಿ ಹೋದಾಗ "ಥೂ ಹಾಳಾದೋವು ಅವರ ಮನೆ ಕುರುಕಲು ತಿಂಡಿಗೆ ಬರಗೆಟ್ಟುಕೊಂಡು ಹೋಗುತ್ತವೆ." ಎಂದು ಬೈದುಕೊಂಡಳು.

ಮೈಥಿಲಿ ಅಕ್ಕತಂಗಿಯರನ್ನು ಕಂಡು ಆಶ್ಚರ್ಯದಿಂದ ಕಣ್ಣರಳಿಸಿದಳು. ಹಬ್ಬದ ಯಾವ ಲಕ್ಷಣವೂ ಕಂಡು ಬಂದಿರಲಿಲ್ಲ. ವನಜ ಪೆಚ್ಚಾದಳು. "ಜಲಜೀ.... ಇವತ್ತು ಏಪ್ರಿಲ್ ಒಂದನೇ ತಾರೀಖಲ್ಲವೇನೆ? ಗೋಪಿ,

ನಮ್ಮಿಬ್ಬರನ್ನು ಫೂಲ್ ಮಾಡಿದ್ದಾನೆ. ಅವನನ್ನು ಸುಮ್ಮನೇ ಬಿಡಬಾರದು" ಎಂದಳು. ಇಬ್ಬರೂ ಪೆಚ್ಚಾಗಿದ್ದರು, ಮೈಥಿಲಿ ಆದರದಿಂದ ಮಾತನಾಡಿಸಿದಾಗ ವನಜ ಎಲ್ಲವನ್ನು ಮರೆತಳು. ಗೋಪಿ ಮನೆಗೆ ಬರುವ ಮುಂಚೆ ಹೊರಟು ಬಿಡಬೇಕೆಂದುಕೊಂಡಿದ್ದಳು. ಆದರೆ ಅಷ್ಟರಲಿಲ ಗೋಪಿ ಬಂದೇ ಬಿಟ್ಟ. ಅವನು ಅವಳ ಕಡೆ ನೋಡಿ ಜಲಜಿಯ ಜಡೆ ಎಳೆದ.

ಏಯ್ ಬಿಡೋ..... ನೋಯುತ್ತೆ....... ಹಾ...... ಎಂದಳು.

"ನಿಮ್ಮಕ್ಕನ ಜಡೆ ಉದ್ದವಾಗಿಲ್ಲ. ನಿನ್ನ ಜಡೆ ಚೆನ್ನಾಗಿದೆ ಕಣೇ.... ಯಾವ ಹೇರ್ ಆಯಿಲ್ ಹಾಕ್ಕೋತೀಯಾ......?"

"ಹರಳೆಣ್ಣೆ ಹಚ್ಕೋತೀನಿ......"

"ಥೂ" ಎನ್ನುತ್ತಾ ಅವನು ಜಡೆಯನ್ನು ಬಿಟ್ಟಾಗ ಇಬ್ಬರೂ ನಕ್ಕರು.

"ಜಲಜಾ ನನಗೆ ಸ್ವಲ್ಪ ಸಹಾಯ ಮಾಡ್ತೀಯ" ಎಂದು ಮೈಥಿಲಿ ಅವಳನ್ನು ಒಳಕ್ಕೆ ಕರೆದಾಗ, ವನಜಾ ಗೋಪಿಯನ್ನು ತರಾಟೆಗೆ ತೆಗೆದುಕೊಂಡಳು.

"ನಿನಗ್ಯಾಕೆ ಇಂಥಾ ಬುದ್ಧಿ? ಹಬ್ಬ ಅಂತ ಯಾಕೆ ಸುಳ್ಳು ಹೇಳಿದೆ?"

"ಇಲ್ಲದಿದ್ದರೆ ನಿಮ್ಮ ಮನೆಯಿಂದ ಹೊರಗೆ ನಿನ್ನನ್ನು ಹೊರಡಿಸುವುದಾದರೂ ಹೇಗೆ? ಕಾರಣವಿಲ್ಲದೇ ಕರಿಯೋದು ಹೇಗೆ?"

"ಒಂದು ವೇಳೆ ನಮ್ಮ ಅಪ್ಪ ಅಮ್ಮನೂ ಬಂದಿದ್ದರೆ ಏನೂ ಮಾಡ್ತಿದ್ದೆ?"

"ನನಗೆ ಗೊತ್ತು ಅವರಿಬ್ಬರೂ ಬರುಲ್ಲ ಅಂತ. ಒಂದು ವೇಳೆ ಬಂದಿದ್ದರೂ ಅಮ್ಮ ಮ್ಯಾನೇಜ್ ಮಾಡ್ತಿದ್ದಳು."

"ಸರಿ. ಏನು ಕರಿಸಿದ್ದು? ನಿಮ್ಮ ಅಪ್ಪನ ಹತ್ತಿರ ಮಾತಾಡಿ ಆಯ್ತಾ? ಅವರು ಒಪ್ಪಿದ್ರಾ?"

"ಇಲ್ಲ.... ವನಜಾ..... ಅವರು ಒಪ್ಪುಲ್ಲ. ಬಹುಶಃ ನಮ್ಮಿಬ್ಬರ ಮದುವೆ ಈ ಜನ್ಮದಲ್ಲಿ ನಡೆಯುವುದಿಲ್ಲ."

"ಇದನ್ನು ಹೇಳುಕ್ಕೆ ನನ್ನನ್ನು ಕರೆಸಿದೆಯಾ? ನಮ್ಮ ಮನೇಲೇ ಹೇಳಬಹುದಾಗಿತ್ತಲ್ಲ."

"ಕಡೇ ಸಲ ನಿನ್ನನ್ನು ನೋಡಿ, ನಿನ್ನನ್ನು ಮಾತನಾಡಿಸೋಣ ಅಂತನ್ನಿಸ್ತು." ಅದಕ್ಕೇ ನಮ್ಮ ಮನೆಗೇ ಕರೆಸಿದೆ.

"ಕಡೇ ಸಲ ಅಂದ್ರೆ..... ನೀನು ಮದುವೆಯಾಗದೇ ಇದ್ದರೆ ನಾನು ಸತ್ತು ಹೋಗಲ್ಲ. ಹಾಗೆ ಇರ್ತೀನಿ. ಆದರೆ ಒಂದ್ಮಾತು ನೀನೂ ಹೀಗೇ

ಇರಬೇಕು. ಬೇರೆ ಮದುವೆಯಾಗಬಾರದು....."

"ಚೆನ್ನಾಗಿದೆ. ನಮ್ಮಮ್ಮನಿಗೆ ನಾನೊಬ್ಬನೇ ಮಗ.... ಸೊಸೆ ಬರಲಿ, ಈ ವಂಶ ಬೆಳೀಲಿ ಅಂತ ಆಸೆ ಇರುಲ್ವೇ....."

"ಸರಿ. ಹಾಗಾದ್ರೆ ಒಂದಲ್ಲ ಅಂತ ಎರಡು ಮದುವೆ ಮಡಿಕೊ...." ಧೃತರಾಷ್ಟ್ರನ ತರಹ ನೂರು ಮಕ್ಕಳಾಗಲಿ. ಇಲ್ಲಿ ಇನ್ನು ನನಗೇನು ಕೆಲಸ? ನಾನು ಹೊರಡ್ತೀನಿ ಎನ್ನುತ್ತಾ ಎದ್ದವಳನ್ನು ಹಿಡಿದು ನಿಲ್ಲಿಸಿದ.

"ಇನ್ನು ಒಂದ್ಮಾತು ಕೇಳಿಕೊಂಡೇ ಹೋಗು. ಅವತ್ತು ನಿನ್ನನ್ನು ನೋಡೋಕೆ ಅಂತ ಬಂದಿದ್ನಲ್ಲ ವಾಸುಕಿ ಮಹಾಶಯ ಅವನು ನಿನ್ನನ್ನು ಮೆಚ್ಚಿ ಕೊಂಡಿದ್ದಾನೆ. ಅವನನ್ನು ಮದುವೆಯಾಗಿ ಸುಖವಾಗಿರು. ನನಗೋಸ್ಕರ ಕಾಯುವುದರಲ್ಲಿ ಅರ್ಥವಿಲ್ಲ"

"ಏನಂದೆ? ವಾಸುಕೀನ? ಅವನಲ್ಲೀ ಸಿಕ್ಕಿದ ನಿನಗೆ?"

"ಅವನು ನನ್ನ ಹಳೇ ಸ್ನೇಹಿತ..... ಅವನಿಗೋಸ್ಕರ ನಿನ್ನನ್ನಾ ತ್ಯಾಗಮಾಡ್ತಿದೀನಿ."

"ಸುಳ್ಳು..... ನಾನಿದನ್ನು ನಂಬುಲ್ಲ. ಕೆಟ್ಟ ತಮಾಷೆ ಮಾಡ್ತಿದೀಯ..."

"ನಾನ್ಯಾಕೆ ಸುಳ್ಳು ಹೇಳಲಿ? ಇವತ್ತು ಅವನು ನಿಮ್ಮ ಮನೆಗೆ ಬಂದು ತನ್ನ ಒಪ್ಪಿಗೇನ ತಿಳಿಸ್ತಾನೆ. ನಂತರ ಆದಷ್ಟು ಬೇಗ ಮದುವೆ... ಅಷ್ಟೆ..."

"ಸರಿ, ಗೋಪಿ ನಿನಗೆ ನಾನು ಅವನನ್ನೇ ಮದುವೆಯಾಗಲಿ ಅಂತ ಆಸೆ ಇದ್ದರೆ ಅದೂ ಆಗಿ ಹೋಗಲಿ..... ನಿನಗೇಕೆ ನಿರಾಸೆ ಮಾಡಲಿ? ಎನ್ನುತ್ತಾ ಅಲ್ಲಿಂದ ಅಡಿಗೆ ಮನೆಗೆ ಹೋದಳು. ಅಲ್ಲಿ ಜಲಜಾ ಏನೋ ತಿಂಡಿ ತಿನ್ನುತ್ತಾ ಕೂತಿದ್ದಳು." ವನಜಾ..... ಕೂತ್ಕೋ..... ಎಂದಾಗ ವನಜಾ ಸೊರ ಸೊರ ಅಳಲು ಪ್ರಾರಂಭಸಿದಳು.

"ಅರೆ ಏನಾಯ್ತು.... ಗೋಪಿ ಏನಾದ್ರೂ ಅಂದ್ನಾ" ಎಂದು ಕೇಳುತ್ತಿದ್ದಂತೆಯೇ ಗೋಪಿ ಒಳಗೆ ಬಂದಿದ್ದ. ವನಜಳ ತಲೆ ಮೇಲೆ ಮೊಟಕಿ ನಕ್ಕಾ...

"ಇವತ್ತು ಏಪ್ರಿಲ್ ಒಂದನೇ ತಾರೀಖು. ಅಷ್ಟು ತಿಳಿಯಲಿಲ್ವೇ..... ಮಂಕೇ....." ಎಂದಾಗ ವನಜ ಅಳುವನ್ನು ಮರೆತು ನಕ್ಕಳು.

"ಗೋಪಿ, ಇಷ್ಟು ದೊಡ್ಡೋನಾಗಿದೀಯ.... ಯಾವಾಗಲೂ ಹೀಗೇ ಈ ಹುಡುಗೀನ ಗೋಳು ಹುಯ್ದುಕೊಳ್ತೀಯಲ್ಲೋ....."

"ಆಂಟಿ. ಇವತ್ತು ಏನು ಮಾಡಿದ್ದಾನೆ ಗೊತ್ತಾ?" ಎಂದು ವನಜಾ ಪ್ರಾರಂಭಿಸಿದಾಗ ಗೋಪಿ ಅಲ್ಲಿಂದ ಮರೆಯಾಗಿದ್ದ.

ವನಜ ತನ್ನ ತಂಗಿಯೊಡನೆ ವಾಪಸ್ಸಾದಾಗ ಮನೆ ಬಾಗಿಲು ತೆಗೆದೇ ಇತ್ತು. ಒಳಗೆ ಇಣುಕಿದಳು ವಾಸುಕಿ ತಂದೆಯೊಡನೆ ಮಾತನಾಡುತ್ತಾ ಕೂತಿದ್ದ. ಅವಳ ಉಸಿರು ಸಿಕ್ಕಿಹಾಕಿಕೊಂಡಂತಾಗಿತ್ತು. ಗೋಪಿ ಹೇಳಿದ್ದು ನಿಜವಾಯಿತು. ಗೋಪಿ ತಿಳಿಸಿದ್ದಂತೆ ವಾಸುಕಿ ಬಂದಿದ್ದಾನೆ. ಅವನ ಒಪ್ಪಿಗೆಯನ್ನು ತಿಳಿಸ್ತಾನೆ. ನಮ್ಮಿಬ್ಬರ ಮದುವೆ ನೆರವೇರುತ್ತದೆ. ಆದರೆ ನಾನು ಗೋಪಿಯನ್ನು ಮರೆತು ಇವನೊಡನೆ ಹೇಗಪ್ಪಾ ಇರುವುದು ಎಂದುಕೊಂಡು ನಿಂತಲ್ಲೇ ನಿಂತಳು. ಇವಳನ್ನು ಕಂಡೊಡನೆ ಸಂಭ್ರಮದಿಂದ ಸುನಂದ ಬಂದಳು.

"ಬಂದ್ಯಾ ಬಾ..... ನೋಡು ಇವರು ನಿನ್ನನ್ನು ಒಪ್ಪಿದ್ದಾರೆ. ನಿನ್ನ ಹತ್ತಿರ ಮಾತನಾಡಬೇಕಂತೆ. ಅಂತೂ ಇವತ್ತಿಗೆ ನಮ್ಮ ಕಷ್ಟ ಬಗೆ ಹರೀತು."

"ಅಮ್ಮಾ ನನಗೀ ಮದುವೆ ಇಷ್ಟವಿಲ್ಲವಮ್ಮಾ... ನನಗೆ ಒಪ್ಪಿಗೆ ಇಲ್ಲ ಅಂತ ಅವರಿಗೆ ತಿಳಿಸಿ ಬಿಡು....."

"ಷ್, ಮೆಲ್ಲಗೆ ಆಡು. ಅವರಿಗೆ ಕೇಳಿಸೀತು.... ನಿನಗೆ ತಿಳುವಳಿಕೆ ಸಾಲದು. ಹಾಗೆಲ್ಲಾ ಆಡಬಾರದು. ಅವರ ಹತ್ತಿರ ಚೆನ್ನಾಗಿ ಮಾತನಾಡು" ಎನ್ನುತ್ತಾ ಜಲಜಳನ್ನು ಒಳಕ್ಕೆ ಕರೆದುಕೊಂಡು ಹೋದಳು. ವನಜಾ ಅಲ್ಲಿಯೇ ನಿಂತಿದ್ದಳು. ವಾಸುಕಿಯೇ ಎದ್ದು ಹೊರಗೆ ಬಂದ. ಅವಳ ಕಡೆ ನೋಡದೆಯೇ ಹೇಳಿದ.

"ನಾನು ನಿಮ್ಮ ಹತ್ತಿರ ಸ್ವಲ್ಪ ಮಾತನಾಡಬೇಕಾಗಿತ್ತು."

"ಏನು ಮಾತು? ನಾನು ಒಪ್ಪಿದೀನೋ ಇಲ್ಲವೋ ಅಂತ ತಾನೇ...?"

"ನೀವು ನನ್ನನ್ನು ಒಪ್ಪಿಲ್ಲ ಅಂತ ನನಗೆ ಗೊತ್ತು.. ಅದಲ್ಲ..... ಇಲ್ಲಿ ಬೇಡ ನಿಮ್ಮ ಮನೆ ಮಹಡಿಯ ಬಾಲ್ಕನಿಯಲ್ಲಿ ಕೂತು ಮಾತನಾಡೋಣ."

"ಪರವಾಗಿಲ್ಲ ಇಲ್ಲೇ ಹೇಳಿ......"

"ಪ್ಲೀಸ್ ನನ್ನ ಮಾತ್ತು ಕೇಳಿ. ಈಗ ನಾನು ಏನೇ ಮಾತನಾಡಿದರೂ, ಅದು ನಿಮ್ಮ ಹಾಗೂ ಗೋಪಿಯ ಒಳ್ಳೆಯದಕ್ಕೇ......"

"ಗೋಪಿಯ ಮಾತೇಕೆ ಈಗ?"

"ನಿಮ್ಮ ಗೋಪಿಯೇ ನನ್ನನ್ನು ಇಲ್ಲಿಗೆ ಕಳಿಸಿರುವುದು. ನೀವು ಸಹನೆಯಿಂದ ಕೇಳಿಕೊಳ್ಳುವುದಾದರೆ ನಾನು ಎಲ್ಲಾ ಹೆಳ್ತೀನಿ..."

"ಸರಿ. ಬನ್ನಿ....." ಎನ್ನುತ್ತಾ ಮಹಡಿಗೆ ಕರೆದುಕೊಂಡು ಹೋದಳು.

ಅವನು ನಿಧಾನವಾಗಿ ವಿವರವಾಗಿ ಗೋಪಿ, ಹಾಗೂ ಅವನ ತಾಯಿ ಬಂದು ತಿಳಿಸಿದುದನ್ನು ಹೇಳಿದ. ನಾನೊಬ್ಬ ಸೋಷಿಯಲ್ ವರ್ಕರ್. ಸಮಾಜ ಸೇವೆ ನನ್ನ ಉದ್ದೇಶ. ಅಕ್ಕ ಭಾವನ ಬಲವಂತಕ್ಕೆ ಮದುವೆಯಾಗುತ್ತಿದ್ದೆನೆ ಅಷ್ಟೆ. ಗೋಪಿನಾಥ್ ಬಂದು ನೀವಿಬ್ಬರೂ ಪ್ರೀತಿಸುತ್ತಿರುವ ವಿಷಯವನ್ನು ತಿಳಿಸಿದಾಗ ನನಗೆ ಖುಷಿಯೇ ಆಯ್ತು. ನಾನು ಸುಳ್ಳು ಹೇಳುವವನಲ್ಲ. ಆದರೂ, ನಿಮ್ಮಿಬ್ಬರ ಒಳ್ಳೆಯದಕ್ಕಾಗಿ ನಿಮ್ಮಿಬ್ಬರನ್ನು ಒಂದುಗೂಡಿಸುವುದಕ್ಕಾಗಿ ನಾನು ಈಗ ಸುಳ್ಳು ಹೇಳಬೇಕಾಗಿದೆ. ನಾಟಕವನ್ನಾಡ ಬೇಡಾಗಿದೆ.

"ಅಂದರೆ......?"

"ನಾನೀಗ ನನ್ನ ಒಪ್ಪಿಗೆಯನ್ನು ಕೊಟ್ಟದ್ದೇನೆ. ನಮ್ಮಿಬ್ಬರ ಮದುವೆ ನಿಶ್ಚಯವಾಗುತ್ತೆ. ಆದರೆ ಕಡೆಯಲ್ಲಿ ನಡೆಯುವುದು ನಿಮ್ಮಿಬ್ಬರ ಮದುವೆ....."

"ಅದು ಹೇಗೆ?"

"ಅದು ಹೇಗೆ ಅಂತ ನನಗೆ ಗೊತ್ತಿಲ್ಲ. ಇದನ್ನೆಲ್ಲಾ ಗೋಪಿ ಹಾಗೂ ಅವರ ತಾಯಿ ನೋಡಿಕೊಳ್ಳುತ್ತಾರೆ. ನಾನೂ, ನೀವೂ ಇಬ್ಬರೂ ಅವರು ಹೇಳಿದಂತೆ ಕೇಳಿ ಅದರಂತೆ ನಡೆದರೆ ಸಾಕು......"

"ಇದನ್ನೆಲ್ಲ ನಾನು ಹೇಗೆ ನಂಬಲಿ? ಏನಾದರೂ ತೊಂದರೆಯಾದರೆ....?"

"ನಾಳೇನೇ ಹೋಗಿ ಗೋಪಿಯನ್ನು ಕೇಳಿ. ಏನೇ ತೊಂದರೆ ಆದರೂ ಅದಕ್ಕೇ ಅವರೇ ಜವಾಬ್ದಾರರು. ಎಷ್ಟಾಗಲೀ ಪೋಲಿಸ್ನೋರು. ಅವರಿಗೆ ಹೆದರಿಕೆ ಇಲ್ಲ."

ವನಜ ಮನಸ್ಸಿನಲ್ಲೇ ನಕ್ಕಳು. ತಂದೆಯ ಎದುರಿಗೆ ನಿಂತು, ಪ್ರೀತಿಸಿದವಳನ್ನು ಮದುವೆಯಾಗ್ತೀನಿ ಎನುನವ ಧೈರ್ಯವಿಲ್ಲ. ಏನೋ ನಾಟಕ ಆಡಿ ನನ್ನನ್ನು ಮದುವೆಯಾಗ್ತಾನಂತೆ. ಮದುವೆ ಮಂಟಪದಿಂದ ನನ್ನನ್ನು ಹಾರಿಸಿಕೊಂಡು ಹೋಗ್ತಾನೋ? ಅರ್ಜುನನ ಹಾಗೇ.... ಅಂತ ಕೇಳಬೇಕೆಂದುಕೊಂಡವಳು ಸುಮ್ಮನಾದಳು.

"ಸಧ್ಯಕ್ಕೆ ಈ ವಿಷಯ ನಮ್ಮ ನಮ್ಮಲ್ಲೇ ಇರಲಿ. ನಿಮ್ಮ ತಂದೆ ತಾಯಿಗೆ ಇದರ ಸುಳಿವು ಸಿಗಬಾರದು. ನೀವೂ ಅಷ್ಟೇ ಯಾವುದೇ ಕಾರಣಕ್ಕೂ ಹೆದರಬೇಡಿ. ನಾನಂತೂ ನಿಮ್ಮನ್ನ ಮದುವೆಯಾಗುವವನಲ್ಲ" ಅಂತ ಹೇಳಿ ನಕ್ಕಾಗ ಅವಳೂ ನಕ್ಕಂತೆ ಮಾಡಿದಳು. ವಾಸುಕಿ ಮಹಡಿಯಿಂದ ಇಳಿದು ಹೊರಟು ಹೋದ. ಅವಳು ಎಷ್ಟೋ ಹೊತ್ತಿನ ತನಕ ಅಲ್ಲೇ ಕೂತಿದ್ದಳು. ತಾಯಿ ಕೆಳಗಿನಿಂದ ಕೂಗು ಹಾಕಿದಳು.

"ಒಬ್ಬಳೇ ಏನು ಮಾಡ್ತೀದೀಯ ಇಳಿದು ಬಾ...." ಕೆಳಗೆ ಬಂದವಳನ್ನೇ ಸಂದೇಹದ ದೃಷ್ಟಿಯಿಂದ ನೋಡಿದಳು. ಎಂದಿನಂತೇ ವನಜ ನಿರಾಳವಾಗಿದ್ದುದನ್ನು ಗಮನಿಸಿ, "ಏನು ಮಾತಾಡಿದ್ರೇ.... ನೀನು ಒಪ್ಪಿದೀನಿ ಅಂತ ಹೇಳಿದ್ಯಾ?"

"ಇಲ್ಲಮ್ಮಾ..... ನಾನು ಒಪ್ಪಿದೀನಿ ಅಂತ ಹೇಳಿಲ್ಲ. ಆದರೆ ನನ್ನ ಒಪ್ಪಿಗೆ ಮುಖ್ಯ ಅಲ್ಲ ಅಂತ ಗೊತ್ತಾದ್ದರಿಂದ ಸುಮ್ಮನಿದ್ದೆ."

"ಸಧ್ಯ ಹೋಗಲಿ ಬಿಡು. ಅಷ್ಟಾದರೂ ತಿಳೀತಲ್ಲ. ಇನ್ನೇನು ಕೇಳಿದ್ರು?"

"ಅಮ್ಮಾ.... ಸ್ವಲ್ಪ ಸುಮ್ಮನಿರ್ತಿಯಾ? ನನಗೆ ತಲೆ ನೋಯ್ತಿದೆ" ಎಂದು ತನ್ನ ರೂಮಿಗೆ ಓಡಿ ಹೋದಳು. ಗಂಡಹೆಂಡತಿ ಮುಖ ಮುಖ ನೋಡಿಕೊಂಡರು. ವನಜ ಬಾಗಿಲಿಗೊರಗಿ ಭಾವಣಿಯನ್ನೇ ದಿಟ್ಟಿಸಿದಳು. ಇದ್ಯಾವ ಪರೀಕ್ಷೆ? ನಾನು ಗೋಪಿಯನ್ನು ಪ್ರೀತಿಸಿದ್ದೇ ತಪ್ಪೇ.... ಒಂದುವೇಳೆ ಕಡೇ ಗಳಿಗೆಯಲ್ಲಿ ಅವನು ಕೈ ಕೊಟ್ಟು ನಾನು ಇವನ ಹೆಂಡತಿಯಾಗಿಯೇ ಉಳಿಯ ಬೇಕಾದ ಸ್ಥಿತಿ ಬಂದರೇ.... ಹಾಗಾಗಬಾರದು..... ನಾನು ನಾಳೇನೇ ಹೋಗಿ, ಗೋಪಿನ ಕೇಳಿ ಬಿಡ್ತೀನಿ. ಎಲ್ಲದಕ್ಕೂ ಒಂದು ಮಿತಿ ಇದೆ ಎಂದುಕೊಂಡಳು. ಆ ರಾತ್ರಿ ಅವಳಿಗೆ ಸರಿಯಾಗಿ ನಿದ್ದೆ ಬರಲಿಲ್ಲ. ಅರೆ ಬರೆ ವಿಚಿತ್ರ ಕನಸುಗಳು ಬೆಳಗಾಯಿತು. ಇಷ್ಟು ವರ್ಷಗಳಲ್ಲಿ ಒಂದು ರಾತ್ರಿಯೂ ತಾನು ಹೀಗೆ ತೊಳಲಾಡಿರಲಿಲ್ಲ ಎಂದು ಅರಿವಾಗಿತ್ತು ಅವಳಿಗೆ. ತಾನೀಗ ಗೋಪಿಯನ್ನು ಸತಾಯಿಸಬೇಕು. ತನ್ನನ್ನು ನಾನಾರೀತಿ ಸತಾಯಿಸಿದ್ದನಲ್ಲವೇ.... ಅವನಾಗಿಯೇ ಬರಲಿ. ತಾನು ಹೋಗಬಾರದು ಎಂದು ನಿರ್ಧರಿಸಿ, ಮತ್ತೆ ಮಲಗಿದಳು.

ಆದರೆ ಎರಡು ದಿನಗಳ ನಂತರ ಗೋಪಿ ಹಾಗೂ ವಾಸುಕಿ ಒಟ್ಟಾಗಿ ಬಂದಾಗ, ಎಲ್ಲರಿಗೂ ಆಶ್ಚರ್ಯ. ವಾಸುಕಿ ವನಜಳನ್ನು ಹೊರಗೆ ಕರೆದುಕೊಂಡು ಹೋಗಲು ಬಂದಿರುವುದಾಗಿ ತಿಳಿಸಿದಾಗ ಗಂಡ ಹೆಂಡತಿ ಅಧೀರರಾದರು. ಅವರ ಗೊಂದಲದ ಮುಖವನ್ನು ಗಮನಿಸಿದ ಗೋಪಿಗೆ ಏನೋ ಖುಷಿ. ಅವರಿಬ್ಬರ ಜತೆಯಲ್ಲಿ ಗೋಪಿಯೂ ಹೊರಟಾಗ ಏನೋ ಸಮಾಧಾನ ಅವರಿಬ್ಬರಿಗೆ. ಮೂವರು ಒಟ್ಟಾಗಿ ವಾಸುಕಿಯ ಅಕ್ಕನ ಮನೆಗೆ ಬಂದರು. ಅಕ್ಕಭಾವ ಮನೆಯಲ್ಲಿರಲಿಲ್ಲ. ವಾಸುಕಿ ಅವರಿಬ್ಬರನ್ನೇ ಮಾತನಾಡಲು ಬಿಟ್ಟು ತನ್ನ ಪಾಡಿಗೆ ತಾನು ತನ್ನ ಸಂಘದ ಕಛೇರಿಗೆ ಹೊರಟ ಹೋದ. ಎಷ್ಟು ಹೊತ್ತಾದರೂ ವನಜ ಮಾತಡದಿದ್ದಾಗ ಗೋಪಿ ಅವಳ ಬಳಿ ಸಾರಿ

ಕೇಳಿದ. "ನನ್ನ ಮೇಲೆ ಕೋಪಾನ ವನಜಾ......?"

"ಇಲ್ಲ. ನನ್ನ ಮೇಲೆ ನನಗೇ ಕೋಪ"

"ಯಾಕೇ......?"

"ನಿನ್ನನ್ನು ನಂಬ್ತಾ ಇದೀನಲ್ಲ ಅದಕ್ಕೇ....."

"ಓ......."

"ಏನು ಓ......?" ಇದೇನು ಹೊಸ ನಾಟಕ? ನನ್ನ ಕರ್ಮ. ನಿನ್ನಂಥೋನ್ನ ನಾನು ಪ್ರೀತಿಸಿದ್ನೆಲ್ಲ......

"ಈಗಲೂ ಸಮಯ ಮೀರಿಲ್ಲ. ವಾಸುಕೀನ ಒಪ್ಪಿ ಮದುವೆಯಾಗು."

"ಈ ಪ್ರಾರಬ್ಧ ಎಲ್ಲಿ ಸಿಕ್ಕಿದನೋ.....? ಎಲ್ಲಾ ಸೇರಿ ನನಗೆ ಅವಮಾನ ಮಾಡ್ತಾ ಇದೀರಾ......?"

"ವಾಸುಕಿ ಒಳ್ಳೆಯವನು, ನನಗೆ ತಮ್ಮ ಇದ್ದಹಾಗೆ.... ನಾನೇ ಅವನನ್ನು ಇದಕ್ಕೇ ಒಪ್ಪಿಸಿದ್ದು."

"ಯಾಕೆ? ಬೇರೆ ಯಾವ ಉಪಾಯವೂ ಹೊಳೆಯಲಿಲ್ಲವಾ? ನಿನಗೆ?"

"ನಿಜ ಹೇಳ್ತಿನಿ ವನಜಾ.... ನಾನು ಸ್ವಲ್ಪ ದಡ್ಡ. ನನಗೆ ಸುಲಭವಾಗಿ ಪ್ಲಾನ್ ಹೊಳೆಯುವುದಿಲ್ಲ."

"ಏನಾದರೂ ಎಡವಟ್ಟಾದರೇ.....?"

"ಹಾಗಾಗಬಾರದು ಅಂತ ನಾವುಗಳು ಪ್ರಯತ್ನ ಪಡ್ತಿದ್ದೀವಿ. ನೀನು ನಾವು ಹೇಳಿದ ಹಾಗೆ ಕೇಳಿದರೆ ಸಾಕು ಗೊತ್ತಾಯ್ತಾ......?"

"ನಿನ್ನನ್ನ ಪ್ರೀತಿಸ್ತಿದೀನಿ ಅನ್ನುವ ಒಂದೇ ಒಂದು ಕಾರಣದಿಂದ ಒಪ್ಪಿಕೊಳ್ತಿದೀನಿ. ಇಲ್ಲದಿದ್ದರೆ, ನಮ್ಮ ಅಪ್ಪನಿಗೆ ನಿಜ ಹೇಳಿ ನಿಮ್ಮ ಮನೆಗೆ ಓಡಿ ಬಂದು ಬಿಡ್ತಿದ್ದೆ. ಆಗ ಯಾರೂ ಏನೂ ಮಾಡುಕ್ಕಾಗುಲ್ಲ."

"ಹಾಗೇನಾದ್ರೂ ಮಾಡೀಯ ಮಾಹಾರಾಯಿತಿ.... ಕೆಲಸ ಕೆಟ್ಟು ಹೋಗುತ್ತೆ."

"ನಿಮ್ಮ ಮಾತು ಮುಗೀತಾ? ಮುಗಿದಿದ್ದರೆ ಹೊರಡಿ ವನಜಾ... ನಿಮ್ಮನ್ನು ನಿಮ್ಮ ಮನೆ ತಲುಪಿಸುವ ಜವಾಬ್ದಾರಿ ನನ್ನದು." ವಾಸುಕಿ ನುಡಿದ ಗೋಪಿ ಅವನನ್ನೇ ಸಂದೇಹದಿಂದ ನೋಡಿದಾಗ ವನಜಾ ನಕ್ಕಳು.

"ಪರವಾಗಿಲ್ಲ. ನಾನು ಗೋಪಿಯ ಜತೆ ಹೋಗ್ತೀನಿ" ಎಂದು ವನಜಾ ನುಡಿದಾಗ, ಅವನು 'ಸರಿ' ಎಂದು ತಲೆಯಾಡಿಸಿದ್ದ. ದಾರಿಯಲ್ಲಿ ವನಜಾ ಗೋಪಿಯನ್ನು ಕೆಣಕಲು, ವಾಸುಕಿಯನ್ನು ಹೊಗಳಲು ಪ್ರಾರಂಭಿಸಿದಳು.

"ನಾನು ಅವತ್ತು ವಾಸುಕಿಯನ್ನು ಸರಿಯಾಗಿ ನೋಡಿರಲೇ ಇಲ್ಲ. ಪರವಾಗಿಲ್ಲ ಹ್ಯಾಂಡಸಮ್ ಆಗಿದ್ದಾನೆ."

"ಹ್ಯಾಂಡಸಮ್ ಅಂದರೆ......"

"ಚೆನ್ನಾಗಿದ್ದಾನೆ ಅಂತ.... ಅವನಿಗಿರುವ ತರಹ ಗುಂಗುರು ಕೂದಲು ನಿನಗೂ ಇದ್ದಿದ್ದರೆ....."

"ಹೂಂ, ಆಮೇಲೆ...."

"ಅವನು ನಿನಗಿಂತ ಎತ್ತರವಾಗಿದ್ದಾನೆ. ಅವನೂ ಪೋಲಿಸ್ ಆಫೀಸರ್ ಆಗಿದ್ದರೆ, ಚೆನ್ನಾಗಿರ್ತಿತ್ತು."

"ಸರಿ. ಆಮೇಲೆ....."

"ಒಟ್ಟಿನಲ್ಲಿ ಅವನು ನಿನಗಿಂತ ಚೆನ್ನಾಗಿದ್ದಾನೆ. ನಾನು ದುಡುಕಿಬಿಟ್ಟೆ...." ಇದ್ದಕ್ಕಿದ್ದಂತೆ ಗೋಪಿ ನಿಂತು ಬಿಟ್ಟ. ವನಜ ನಿಂತು ಅವನ ಕಡೆ ನೋಡಿದಳು, ಅವನ ಮುಖ ಧುಮುಗುಟ್ಟುತ್ತಿತ್ತು.

"ಯಾಕೆ ಗೋಪಿ ಏನಾಯ್ತು?"

"ಏನಿಲ್ಲಾ.....?"

"ನಂಗೊತ್ತು ನಾನು ಹೇಳಲಾ? ನಾನು ವಾಸುಕೀನ ವರ್ಣಿಸಿದ್ದು ನಿನಗೆ ಕೋಪ ಬಂದಿದೆ. ನನಗೆ ಗೊತ್ತು. ನಾನೇನು ಮಾಡಲಿ ಹೇಳು. ನಾನು ಹೇಳಿದ್ದು ಸುಳ್ಳಾ?....."

ಸರಿ. ಹಾಗಾದ್ರೆ ಅವನನ್ನೇ ಮದುವೆಯಾಗು. ನಾನು ನಿನ್ನ ಮದುವೆಗೂ ಬರುವುದಿಲ್ಲ. ಎಂದು ಹೇಳಿ ಗೋಪಿ ಹಿಂತಿರುಗಿ ನೋಡದೇ ದುಡುದುಡು ಹೊರಟು ಹೋದ. ಒಂದೆರಡು ಗಳಿಗೆ ನಿಂತು, ಅವನು ಹಿಂತಿರುಗಿ ಬರುವವನೇನೋ ಎಂದು ಕಾದಳು. ಆದರೆ ಅವನು ಬರಲಿಲ್ಲ. ಒಂದು ಗಳಿಗೆ ತಾನು ಕೆಣಕಬಾರದಾಗಿತ್ತು ಅಂತೆನಿಸಿದರೂ, ಏನೋ ಒಂದು ರೀತಿಯ ಖಷಿಯಿಂದ ಮನೆಗೆ ಬಂದಳು.

'ಒಬ್ಬಳೆ ಬಂದೆಯಾ?"ತಾಯಿ ಕೇಳಿದಾಗ ಸಿಡುಕಿದಳು.

'ಇಲ್ಲ, ಅವರಿಬ್ಬರೂ ಬಂದು ಬಿಟ್ಟು ಹೋದರು......."

ಸುನಂದ, ಸದಾನಂದ, ಹೂವು ಹಣ್ಣುಗಳ ಚೀಲದೊಂದಿಗೆ ವಾಸುಕಿಯ ಮನೆಗೆ ಬಂದಾಗ ವಾಸುಕಿ, ಅವನ ಅಕ್ಕ ಲಲಿತ ಮಾತ್ರ ಇದ್ದರು. ಕುಶಲ ವಿಚಾರಿಸಿದ ನಂತರ ಸದಾನಂದ ಮಾತಿಗೆ ಪ್ರಾರಂಭಿಸಿದರು.

"ಮದುವೆಗೆ ದಿನಾ ಗೊತ್ತು ಮಾಡಬೇಕು. ನಿಮ್ಮ ಅನುಕೂಲ

ಅನಾನುಕೂಲ ಹೇಗೆ ಅಂತ ತಿಳಿಸಿದರೆ ದಿನ ನಿಶ್ಚಯ ಮಡಿ, ಲಗ್ನ ಪತ್ರಿಕೆಯ ಶಾಸ್ತ್ರವನ್ನು ಮಾಡೋಣ ಅಂತ......"

ವಾಸುಕಿ ಗಂಭೀರವಾಗಿ ನುಡಿದ.

'ಆಡಂಬರದ ಮದುವೆ ನನಗಿಷ್ಟವಿಲ್ಲ. ಖರ್ಚು ವೆಚ್ಚ, ಶ್ರಮ ವಿಲ್ಲದೆ ಸರಳವಾಗಿ ಮದುವೆಯಾಗುವ ಆಸೆ ನನ್ನದು...."

"ಹಾಗೆಂದರೆ ಹೇಗೆ? ನಾವು ನಮ್ಮ ಅನುಕೂಲಕ್ಕೆ ತಕ್ಕಂತೆ ಮದುವೆ ಮಾಡಿಕೊಡಬೇಡವೇ.....?"

"ನಿಮ್ಮ ಅನುಕೂಲದ ಬಗ್ಗೆ ನನಗೆ ಯಾವ ಆಸಕ್ತಿಯೂ ಇಲ್ಲ. ಸರಳ ಅಂದ್ರೆ ಸರಳರೀತಿಯಲ್ಲಿ ಮದುವೆಯಾಗಬೇಕೂಂತ ತೀರ್ಮಾನಿಸಿ ಬಿಟ್ಟಿದೀನಿ."

"ಇದೇನು ಹೀಗಂತಾರೆ ನಿಮ್ಮ ತಮ್ಮ? ನೀನಾದ್ರೂ ಸ್ವಲ್ಪ ಹೇಳಿ ನಿಮ್ಮ ಸಂಬಂಧಿಗಳು ಆಡಿಕೊಂಡು ನಗುಲ್ವೆ?"

"ಅದ್ಧೂರಿಯಾಗಿ ಮದುವೆ ಮಾಡಿಕೊಂಡರೂ, ಮಾಡಿಕೊಳ್ಳದಿದ್ದರೂ ಆಡಿಕೊಂಡು ನಗುವ ಸಂಬಂಧಿಗಳಿರಬಹುದು. ನಾನು ಅವರುಗಳಿಗೋಸ್ಕರ ಮದುವೆಯಾಗುತ್ತಿಲ್ಲ. ಇದು ನನ್ನ ಸ್ವಂತ ವಿಷಯ. ಇದರಲ್ಲಿ ನಮ್ಮ ಅಕ್ಕನ ಸಪೋರ್ಟ್ ಸಹ ಇದೆ."

"ಏನೋಪ್ಪ ನಿಮ್ಮ ಮಾತು ವಿಚಿತ್ರವಾಗಿದೆ. ಈ ಕಾಲದಲ್ಲಿ ವರದಕ್ಷಿಣೆ ವರೋಪಚಾರದ ಹೆಸರಿನಲ್ಲಿ ಸುಲಿಗೆ ಮಾಡ್ತಾರೆ ಅಂತ ಕೇಳಿದೀನಿ. ಆಡಂಬರದ ಮದುವೇನೇ ಬೇಡ ಅಂತ ನೀವು ಹೇಳ್ತಾಇದೀರಲ್ಲ. ಸರಿಬಿಡಿ. ಆದರೆ ಈ ಬಗ್ಗೆ ನಾನು ಸ್ವಲ್ಪ ಯೋಚಿಸಬೇಕು. ಯಾಕೇಂದ್ರೆ ನಮ್ಮ ಮನೇಲಿ ಇದು ಮೊದಲನೇ ಮದುವೆ. ನೆಂಟರಿಷ್ಟರಿಗೆ ಅಸಮಾಧಾನವಾಗುತ್ತೆ."

"ಧಾರಾಳವಾಗಿ ಯೋಚನೆ ಮಾಡಿ. ನನ್ನ ಅಭ್ಯಂತರವೇನಿಲ್ಲ. ನನ್ನ ತೀರ್ಮಾನ ಮಾತ್ರ ಬದಲಾಗುವುದಿಲ್ಲ." ಸುನಂದ ಸದಾನಂದರ ಮುಖದ ಕಳೆಯೇ ಬದಲಾಗಿಬಟ್ಟಿತ್ತು. ಇಂಥಾ ಸಂಬಂಧವನ್ನು ಬೆಳೆಸುವುದೇ ಎನ್ನುವ ಜಿಜ್ಞಾಸೆ ಅವರನ್ನು ಕಾಡುತ್ತಿತ್ತು. ದುರ್ದಾನ ತೆಗೆದುಕೊಂಡವರಂತೆ ಅಲ್ಲಿಂದ ಹೊರಟರು.

ತಂದೆ ತಾಯಿಯರ ಮಾತುಗಳನ್ನು ಅಲ್ಪಸ್ವಲ್ಪ ಕೇಳಿಸಿಕೊಂಡ ಜಲಜ ರಾತ್ರಿ ಅಕ್ಕನೊಡನೆ ಪಿಸುದನಿಯಲ್ಲಿ ಹೇಳಿದಳು.

"ಭಾವ ಅಂದ್ರಂತೆ ನಮಗೆ ಖರ್ಚು ವೆಚ್ಚವೆಂದರೆ ಇಷ್ಟವಿಲ್ಲ. ಅತಿ

ಸರಳವಾಗಿ ಮದುವೆ ಮಾಡಿಕೊಡಿ ಅಂತ. ಅಪ್ಪನಿಗೆ ತುಂಬಾ ಬೇಸರವಾಗಿದೆ. ನಮಗೇನು ದುಡ್ಡುಕಾಸಿಗೆ ದರಿದ್ರವೇ? ನಮ್ಮನ್ನು ಉದ್ಧಾರ ಮಾಡೋತರಹ ಮಾತಾಡ್ತಾನೆ. ನಮಾಗೂ ಆಸೆ ಇರುತ್ತೆ. ಈ ಸಮಯದಲ್ಲಿ ಎಷ್ಟು ಸಾಧ್ಯವೋ ಅಷ್ಟು ಖರ್ಚು ಮಾಡಿದರೆ, ಸರೀಕರಲ್ಲಿ ನಮ್ಮ ಮರ್ಯಾದೆ ಉಳಿಯುತ್ತದೆ. ಅಂತ ಅಪ್ಪ ಅಂದ್ರು."

"ಹೌದು ಅದ್ಯಾಕೆ ಹಾಗಾಡ್ತಾನೋ? ಅದಕ್ಕೆ ಅಕ್ಕನ ಸಪೋರ್ಟ್ ಬೇರೆ. ನನಗೇನೋ ಅನುಮಾನ ಹುಡುಗನಲ್ಲಿ ಏನೋ ಐಬಿರಬಹುದು" ಅಮ್ಮ ಅಂದಳು.

"ಐಬೂ ಇಲ್ಲ, ಏನಿಲ್ಲ, ಅದೆಲ್ಲ ಈಕಾಲದ ಹುಡುಗರ ಆಟ. ಅವನ ತಂದೆ ತಾಯಿ ಬದುಕಿದ್ದರೆ ಅವನ ಮಾತನ್ನೆಲ್ಲಿ ಕೇಳುತ್ತಿದ್ದರು...."

"ಆದರೂ ನನಗೇನೋ ಅನುಮಾನ. ಸ್ವಲ್ಪ ಸರಿಯಾಗಿ ವಿಚಾರಿಸಿ, ಆಮೇಲೆ ಕೊರಗುವಂತಾಗಬಾರದು." ಹಾಗಂತ ಅಮ್ಮ ಹೇಳಿದಳು

"ಸರಿ, ವಿಚಾರಿಸಿದತಾಯ್ತು. ಈಗಲೇ ಯಾವುದನ್ನು ವನಜಳ ಕಿವಿಗೆ ಹಾಕಬೇಡ. ಅವಳೂ ಐನಾತಿ ತರಹ ಆಡ್ತಾಳೆ. ನನಗೆ ಇಥೋನು ಬೇಡ ಅಂತ ಹಠ ಹಿಡಿದರೆ ಏನು ಮಾಡೋದು? ಯಾರೂ ಬಂದ್ರೂ ಅಷ್ಟೆ..." ಒಂದಲ್ಲ ಒಂದು ಕೊರತೆ. ಹೋಗಲಿ ಅಂದ್ರೆ ನಮ್ಮ ವನಜ ಏನು ತ್ರಿಪುರ ಸುಂದರೀನೇ.... ಅವನು ಇವಳನ್ನು ಒಪ್ಪಿರುವುದೇ ಹೆಚ್ಚು. ಅವತ್ತಂತೂ ಒಳ್ಳೆ ಮನೆಕೆಲಸದವಳ ತರಹ ಕಾಣ್ತಿದ್ದಳು. ನೀನಾದ್ರೂ ಹೇಳಬಾರದಾಗಿತ್ತಾ?

"ಛಿ, ಸುಮ್ಮನಿರಿ. ನಮ್ಮ ಮಕ್ಕಳನ್ನು ನಾವೇ ಹೀಗಳೆದು ಮಾತಾಡಿದರೆ ಹೊರಗಿನವರು ಸುಮ್ಮನಿರ್ತಾರಾ? ಅದಕ್ಕೆ ನಾನು ಹೇಳಿದ್ದು ಲಕ್ಷಣವಂತನಾದ ಹುಡುಗ, ನಮ್ಮ ವನಜನ್ನ ಒಪ್ಪಿರುವಾಗ ಸ್ವಲ್ಪ ಸಂಶಯ."

"ಸರಿ. ಈಗೇನು ಅವನು ಹೇಗೆ ಏನು ಅಂತ ವಿಚಾರಿಸಿ ಮುಂದುವರೆಯೋಣ." ತಂಗಿ, ತಂದೆ ತಾಯಿಯರ ಸಂಭಾಷಣೆಗಳನ್ನು ಜಲಜ ಯಥಾವತ್ತಾಗಿ ತಿಳಿಸಿದಾಗ ವನಜ ತನಗಲ್ಲವೆಂಬಂತೆ ಮೌನವಾಗಿ ಮಲಗಿದ್ದಳು. ಆದರೂ ಮಾತುಗಳು ಕಿವಿಗೆ ಬಿದ್ದಿತ್ತು. "ನಿನಗೀಗಲೇ ಜಂಭ ಬಂದುಬಿಡ್ತಾ?" ಎಂದು ತಂಗಿ ಹಂಗಿಸಿದಾಗ, "ಸುಮ್ಮನೇ ಬಿದ್ಕೊಳೇ" ಎಂದು ಜರಿದು, ಮಗ್ಗುಲು ಬದಲಾಯಿಸಿದಳು. ತಂಗಿ ಆಡಿದುದನ್ನು ಮತ್ತೆ ಯೋಚಿಸಿದಳು. "ಅಪ್ಪ ತನ್ನ ಮದುವೆಗೆ ಎಷ್ಟಾದರೂ ಹಣ ಖರ್ಚು ಮಾಡಲಿ, ಅಥವಾ ಮಾಡದಿರಲಿ, ತನಗೇನಾಗಬೇಕಾಗಿದೆ? ಗೋಪಿ, ಈಗಲೇ

ನನ್ನ ಜತೆ ಬಂದು ಬಿಡು ಅಂತ ಒಂದು ಮಾತು ಹೇಳಿದ್ದರೂ ಹೀಗೆ ಉಟ್ಟ ಸೀರೆಯಲ್ಲೇ ಅವನ ಹಿಂದೆ ಓಡಿ ಹೋಗಲು ಸಿದ್ಧಳಾಗಿದ್ದಳು. ಆದರೆ ಅವನಿಗೇ ಆತುರವಿಲ್ಲ. ಪ್ರೀತಿಯೇ ಇಲ್ಲವೇನೋ ಅಂತನ್ನಿಸುತ್ತೆ..... ಆದರೆ ಅವನೋ..... ಹಿರಿಯವರನ್ನು ಒಪ್ಪಿಸಿ ಮದುವೆಯಾಗಬೇಕು ಎನ್ನುವ ಸಿದ್ಧಾಂತದವನು. ಅದು ಹೇಗೆ ಒಪ್ಪಿಸ್ತಾನೋ.... ಯಾವಾಗ ನೋಡಿದರೂ, ಹಗುರವಾಗಿ ತಮಾಷೆಯಾಗಿ ಮಾತನ್ನಾಡಿ ಮುಖ್ಯವಾದ ವಿಷಯವನ್ನೇ ಮರೆಸಿ ಬಿಡುತ್ತಾನೆ. ಇವನು ಪೋಲಿಸ್ ಅಧಿಕಾರಿ ಎಂದರೆ ನಂಬುಕ್ಕೆ ಆಗುತ್ತಾ? ನಾನು ಹೇಗೆ ಮೆಚ್ಚಿದೆ ಅವನನ್ನ? ಒಳ್ಳೆಯವನೆಂದೇ? ರೂಪವಂತನೆಂದೇ?..... ಒಂದು ವೇಳೆ ಅವನೊಡನೆ ನನ್ನ ಮದುವೆ ಆಗದಿದ್ದರೂ ಸರಿ, ನಾನು ಮಾತ್ರ ಪ್ರೀತಿಸುವುದು ಅವನನ್ನೇ..... ಇವರೆಲ್ಲಾ ಸೇರಿ ಏನು ಮಸಲತ್ತು ನಡೆಸ್ತಿದಾರೋ.... ಅದಕ್ಕೆ ಈ ಮಾಸುಕಿಯ ಸಹಾಯವಂತೆ? ಗೋಪಿಗೆ ತಿಳಿಯದಂತೆ ನಮ್ಮಪ್ಪನಿಗೆ ಎಲ್ಲಾ ತಿಳಿಸಿ ಬಿಟ್ಟರೇ..... ಅಪ್ಪ ನನ್ನನ್ನು ತುಂಡು ತುಂಡು ಮಾಡಿ ಬಿಡ್ತಾರೆ ಅಷ್ಟೇ. ಈ ಗೋಪಿಗ್ಯಾಕೆ ಇದೆಲ್ಲಾ ಅರ್ಥವಾಗುವುದಿಲ್ಲವೋ ದೇವರೇ ಬಲ್ಲ......"

"ಏ ಜಲಜೀ...... ತಿರುಗೇ ಈ ಕಡೆ......"

"ಏನೇ......" ಗೊಣಗಿದಳು ಜಲಜಾ.....

"ಈ ಬೆರಳುಗಳಲ್ಲಿ ಒಂದನ್ನು ಮುಟ್ಟು" ಎನ್ನುತ್ತಾ ಅವಳ ಮುಂದೆ ಕೈತೋರಿ ಎರಡು ಬೆರಳನ್ನು ನೀಡಿದಳು.

"ಈಗಲೇ ಆಗ್ಬೇಕಾ ಇದೆಲ್ಲಾ..... " ಎನ್ನುತ್ತಾ ಒಂದು ಬೆರಳನ್ನು ಕಣ್ಣು ಮುಚ್ಚಿಕೊಂಡು ಮುಟ್ಟಿದಳು. ವನಜ ಸಮಾಧಾನದಿಂದ ತಂಗಿಯ ಕೆನ್ನೆ ಮುಟ್ಟಿದಳು. ಜಲಜಾ ಅಕ್ಕನನ್ನು ಏನೂಂತ ಕೇಳದೇ ಮತ್ತೆ ಆಕಡೆಗೆ ತಿರುಗಿ ಮಲಗಿದಳು. "ಈ ಜಲಜೀನೇ ವಾಸಿ..... ಎಷ್ಟು ನಿರಾತಂಕವಾಗಿದ್ದಾಳೆ. ಅಂತನ್ನಿಸಿದಾಗ ತಂಗಿಯ ಮೇಲೆ ಅಸೂಯೆಯುಂಟಾಯಿತು."

ಸ್ಕೂಲಿನಿಂದ ಬಂದ ಜಲಜಾ, ವನಜಳಿಗೆ ಹೇಳಿದಳು.

"ಅಕ್ಕಾ, ಗೋಪಿ ಸಿಕ್ಕಿದ್ದ. ನೀನು ಇವತ್ತೇ ಅವರ ಮನೆಗೆ ಸಾಯಂಕಾಲ ಹೋಗಬೇಕಂತೆ"

"ಯಾಕಂತೆ? ಅವನೇ ಏಕೆ ಬರಲಿಲ್ಲ?"

"ನಂಗೇನು ಗೊತ್ತು? ನೀನೇ ಹೋಗಿ ಕೇಳು."

"ಏಯ್ ಅತೀ ಜಂಭ ಆಡ್ತಿದೀಯ ಈಚೀಚೆಗೆ..... ಗೋಪಿನ

ಅವನು ಇವನು ಅಂತ ನೀನ್ಯಾಕೆ ಅನ್ನೋದು?"

"ನೀನೇನು ಅವರೂ ಇವರು ಅಂತ ಅಂತೀಯಾ? ನನಗೆ ಹೇಳ್ತಿಯಲ್ಲಾ" ವನಜಾ ಪೆಚ್ಚಾದಳು. ತನಗೆ ಮೊದಲಿನಿಂದಲೂ ಅವನನ್ನು ಏಕವಚನದಲ್ಲಿ ಕರದೇ ಅಭ್ಯಾಸ. ಈಗ ಬದಲಾಯಿಸಿಕೊಳ್ಳುವುದು ಹೇಗೆ? ಆದರೆ ಮುಂದೆ ಜಲಜೀ ತನ್ನ ಭಾವನನ್ನು ಏಕವಚನದಲ್ಲಿ ಕರೆದರೆ ಸರಿ ಹೋಗುತ್ತಾ?

"ಜಲಜೀ ಬಾಯಿಲ್ಲಿ. ಅದೇನು ಗುಸುಗುಸು ಪಿಸುಪಿಸು?" ತಾಯಿ ಒಳಬಾಗಿಲಿನಲ್ಲಿನಿಂತು ಕರೆದಾಗ, ವನಜಾ ತಂಗಿಯ ಮೈಮುಟ್ಟಿ.... ಏನು ಹೇಳಬೇಡ ಎನ್ನೂಂತೆ ಬಾಯಿ ಮೇಲೆ ಬೆರಳಿಟ್ಟು ಸಂಜ್ಞೆಮಾಡಿದಳು.

"ಏನಿಲ್ಲಮ್ಮಾ..... ಬಳೆ ಅಂಗಡಿಗೆ, ಜತೆಗೆ ಬಾ ಅಂತಂದಳು. ನಾನು ಬರುಲ್ಲ ಅಂದೆ. ಅದಕ್ಕೆ ಬೈತ್ತಿದ್ದಾಳೆ."

"ಗಾಜಿನ ಬಳೆಗೆ ಅದೇನು ದುಡ್ಡು ಸುರೀತೀರಿ..... ರಬ್ಬರ್ ಬಳೆ ಹಾಕ್ಕೊಂಡ್ರೆ ಏನಾಗುತ್ತೆ? ಆ ಮಾತನ್ನು ಕೇಳಿಸಿಕೊಳ್ಳಲು ವನಜ ಅಲ್ಲಿರಲಿಲ್ಲ. ಸೀರೆ ಬದಲಾಯಿಸಿ, ದಿನಕ್ಕಿಂತ ಸ್ವಲ್ಪ ಹೆಚ್ಚಿಗೆ ಸಿಂಗರಿಸಿಕೊಂಡು ಚಪ್ಪಲಿಮೆಟ್ಟಿ ಹೊರಟೇ ಬಿಟ್ಟಳು. ಬಿರಬಿರನೆ ನಡೆದು ಬಂದವಳು ಗೋಪಿಯ ಮನೆ ಹತ್ತಿರವಾಗುತ್ತಿದ್ದಂತೆ ನಡಿಗೆಯನ್ನು ನಿಧಾನಗೊಳಿಸಿದಳು.

ಮನೆಯೊಳಗಿನಿಂದ ಬೇರೆ ಯಾರದೋ ನಗುವಿನ ಧ್ವನಿ ಕೇಳಿ ಬರುತ್ತಿದ್ದಾಗ ವನಜ ಬಾಗಿಲಿನಲ್ಲೇ ನಿಂತಳು. ಒಳಗಿನಿಂದಲೇ ಮೈಥಿಲಿ "ವನಜಾ ಬಾ ಒಳಗೆ ಎಂದಾಗ, ಇವರಿಗೆ ತಾನು ಬಂದುದು ಹೇಗೆ ಗೊತ್ತಾಯಿತು ಎಂದು ಕೊಂಡು ಅನುಮಾನಿಸುತ್ತಾ ಒಳಗೆ ಬಂದಳು. ಕುರ್ಚಿಯ ಮೇಲೆ ಕುಳಿತಿದ್ದ ಒಬ್ಬ ಯುವಕ ಇವಳ ಕಡೆ ನೋಡಿ ನಕ್ಕ. "ಹಲೋ ಮಿಸ್" ಎಂದ. ಇವಳು ಕಕ್ಕಾಬಿಕ್ಕಿ. ಯಾರಿವನು? ಮೈಥಿಲಿ ತನಗೋಸ್ಕರ ಇನ್ನೊಬ್ಬ ವರನನ್ನು ಕರೆಸಿರಬಹುದೇ ಅಂತಂದುಕೊಂಡಳು."

"ಇವನು ನನ್ನ ನಾದಿನಿಯ ಮಗ, ವೇಣುಗೋಪಾಲ್..... ಇವಳು ವನಜಾ..... ಗೋಪಿಯ ಸ್ನೇಹಿತೆ" ಎಂದು ಪರಿಚಯ ಮಾಡಿಕೊಟ್ಟಾಗ ವನಜಾ ಸುಮ್ಮನೇ ಕೈ ಮುಗಿದಳು.

"ಕೂತ್ಕೊಳ್ಳಿ ಮಿಸ್" ಎನ್ನುತ್ತಾ ಅವನು ಕುರ್ಚಿ ತೋರಿಸಿದ. ವನಜಾ ಕೂತಳು.

"ನೋಡಿ ಮಿಸ್, ನಾನು ತಮಿಳ್ನಾಡಿನವನು. ನನಗೆ ಕನ್ನಡ ಚೆನ್ನಾಗಿಬರುಲ್ಲ. ನನ್ನ ಮಾತಿಗೆ ನಗಬಾರದು....." ಅವನ ತಮಿಳ ಶೈಲಿಯ ಕನ್ನಡದ

ಮಾತಿಗೆ ಅವಳಿಗೆ ನಗು ಬಂದಿತ್ತು. ಆದರೂ ತಡೆದುಕೊಂಡಳು.

"ಗೋಪಿಗೆ, ನನ್ನ ಮಾಮನಿಗೆ, ನನಗೆ ಕಂಪೆನಿ ಕೊಡಲು ಸಮಯವಿಲ್ಲ. ಮಾಮಿ ಹತ್ತಿರ ಮಾತನಾಡಲು ಏನೂ ವಿಷಯಗಳಿಲ್ಲ. ಈಗ ನೀವೇ ನನಗೆ ಕಂಪೆನಿ ಕೊಡಬೇಕು." ಎನ್ನುತ್ತಾ ಅವಳ ಕಡೆ ವಾಲಿದಾಗ ಅವಳಿಗೆ ಅಸಹ್ಯವೆನಿಸಿತು. ಆದರೂ ಅವನು ನಗು ನಗುತ್ತಾ.... ನಿಮಗೆ ಈ ಸೀರೆ ಒಂದು ಚೂರೂ ಒಪ್ಪಲ್ಲ. ಮಾಮಿ ಉಡ್ತಾರಲ್ಲ ಹಾಗೆ ಕಾಫಿ ಕಲರಿನ ಸೀರೆಗಳನ್ನು ಉಟ್ಕೊಳ್ಳಿ. ನಿಮ್ಮ ಸೌಂದರ್ಯ ಹೆಚ್ಚುತ್ತೆ ಅಂತಂದ.

ಇವಳು ಹೆದರಿದರೂ, ನಗು ಬಂದಿತ್ತು. ಇವನು ಯಾವುದೋ ಕಂಪೆನಿಯ ಸೇಲ್ಸ್ ರೆಪ್ರೆಸೆಂಟಟಿವ್ ಇರಬೇಕು. ಇದಕ್ಕೆ ಹೀಗೆ ಮಾತಾಡ್ತಾನೆ ಅಂತಂದುಕೊಂಡು,

"ನನಗೆ ಲೈಟ್ ಕಲರಿನ ಸೀರೆಗಳು ಇಷ್ಟ. ಅದು ನನ್ನಿಷ್ಟ. ನೀವು ಹೇಳಬೇಕಾಗಿಲ್ಲ" ಅಂತಂದಳು.

"ನೋಡಿದ್ರಾ ಮಿಸ್. ನನ್ನ ಮಾತಿನಿಂದ ನಿಮಗೆ ಕೋಪ ಬಂತು. ಗೋಪಿ ಏನು ಹೇಳಿದ್ದ ಗೊತ್ತೇ..... ಅವಳು ವಿಚಿತ್ರವಾಗಿ ಡ್ರೆಸ್ ಮಾಡಿಕೊಳ್ತಾಳೆ. ನಾನು ಹೇಳುಕ್ಕಾಗುಲ್ಲ. ನೀನು ಹೇಳು ಅಂತಂದ ಅದಕ್ಕೆ ಹೇಳಿದೆ."

"ನೋಡಿ ಮಿಸ್ಟರ್...... ಇದು ನನ್ನ ಸ್ವಂತ ವಿಷಯ..... ಇದನ್ನೆಲ್ಲ ಟೀಕಿಸುವ ಅಧಿಕಾರ ಯಾರಿಗೂ ಇಲ್ಲ."

"ಗೋಪಿಗೂ ಇಲ್ಲವಾ?"

"ಇಲ್ಲ," ಎನ್ನುತ್ತಾ ಅವಳು ಎದ್ದು ನಿಂತಾಗ, ಆ ಯುವಕ ಏನೋ ಹೇಳುವವನಂತೆ ಅವಳ ಮೇಲೆ ವಾಲಿದ ಅವಳು ಛಿ ದೂರ ಸರಿ ಎಂದು ಅವನನ್ನು ತಳ್ಳಿ ಅಲ್ಲಿಂದ ತಿರುಗಿ ನೋಡದೇ ಹೊರಟು ಹೋದಳು. ಯಾರೋ ಅಟ್ಟಿಸಿಕೊಂಡು ಬರುತ್ತಿರುವಂತೆ, ಗಾಭರಿಯಿಂದ ಓಡಿ ಬರುತ್ತಿರುವವಳನ್ನು ಹಿಂದಿನಿಂದ ಬಂದ ಗೋಪಿ ಕೈ ಹಿಡಿದು ನಿಲ್ಲಿಸಿದ. ರಸ್ತೆ ಎನ್ನುವುದನ್ನು ಮರೆತು "ಬಿಡು, ನನ್ನನ್ನು" ಅಂತ ಕಿರುಚಿದರಿದಳು.

"ಏನಾಗಿದೆ ನಿನಗೆ? ಯಾಕೆ ಹೀಗೆ ಎಕ್ಸೈಟ್ ಆಗಿದೀಯಾ?" ಪ್ರಶ್ನಿಸಿದ.

"ನನ್ನನ್ನೇನು ಕೇಳ್ತೀಯಾ? ನಿಮ್ಮ ಮನೇಲಿ ಕೂತಿದೆಯಲ್ಲ ಕಮಂಗಿ ಅದನ್ನಾ ಕೇಳು..... ಎಂದಳು."

"ಯಾರು? ವೇಣೂನಾ? ಅವನೇನು ಮಾಡಿದಾ?"

"ನಾನು ಸುಮ್ಮನೇ ಇದ್ದಿದ್ದರೆ, ಇನ್ನು ಏನೇನೋ ಮಾಡ್ತಿದ್ದ. ಕಸಿನ್ ಅಂತೆ ಕಸಿನ್. ಮ್ಯಾನಸ್ ಬೇಡವಾ ಅವನಿಗೆ........?"

"ಏನು ಮಾಡಿದಾ ಹೇಳು......"

"ಹೆಂಗಸರನ್ನೇ ಕಾಣದವನ ತರಹ ಮೈಮೇಲೆ ಬೀಳ್ತಾನೆ. ಅಸಹ್ಯ"

"ಅವನು ಸ್ವಲ್ಪ ಹಾಗೆಯೇ..... ಹೆಂಗಸರ ಖಯಾಲಿ. ಸಿನಿಮಾದಲ್ಲಿ ಆಕ್ಟ್‌ಮಾಡ್ತೀನಿ ಅಂತ ಅಲ್ಲಿ ಇಲ್ಲಿ ತಿರುಗಾಡಿದ. ಯಾವ ಹುಡುಗಿಯೂ ಅವನನ್ನು ಮದುವೆಯಾಗಲು ಒಪ್ಪಿಲ್ಲ. ಅದಕ್ಕೇ ಹೀಗಾಡ್ತಾನೆ."

"ಥೂ ಹಲ್ಕಾ..... ಅಂತ ಅವಳು ಬೈದಾಗ, ಅವನು ಅವಳ ಬೆನ್ನು ತಟ್ಟಿದ. ಶಾಂತ..... ಶಾಂತ...... ಅವನು ನನ್ನ ಕಸಿನ್ ಹಾಗೆಲ್ಲಾ ಬೈಯಬೇಡ"

"ಅವನ ಕೆನ್ನೆಗೆ ಹೊಡೀಬೇಕಾಗಿತ್ತು...... ನಾನು"

"ಬಾ..... ಮತ್ತೆ ಆ ಆಸೆಯನ್ನು ತೀರಿಸಿಕೊಂಡು ಬಿಡೂವಂತೆ" ಎನ್ನುತ್ತಾ ಬಲವಂತದಿಂದ ಅವಳನ್ನು ಮತ್ತೆ ತನ್ನ ಮನೆಗೆ ಕರೆತಂದ. ಆದರೆ ವೇಣು ಇರಲಿಲ್ಲ. ಮೈಥಿಲಿ ವನಜಳನ್ನು ಕಂಡು ಆತಂಕ ವ್ಯಕ್ತಪಡಿಸಿ,

"ಏನಮ್ಮಾ ವನಜಾ...... ಹೇಳದೇ ಹೊರಟು ಹೋಗೋದೆ.....?" ನಾನೇನೂ ಅಂದ್ಕೋಬೇಕು? ಏನಾಯ್ತು ಅಂತ ವೇಣೂನ ಕೇಳಿದರೆ ನಂಗೊತ್ತಿಲ್ಲ ಅಂತಂದ....... ಗೋಪಿ ಅವನೆಲ್ಲಿ ಕಾಣ್ತಾ ಇಲ್ಲವಲ್ಲ?

"ನಂಗೇನು ಗೊತ್ತಮ್ಮ.... ನಾನು ಬರ್ತಾಇರುವುದೇ ಈಗ"

"ಏನು ವಿಚಿತ್ರ ಹುಡುಗನೊ....." ಒಂದು ಗಳಿಗೆ ಇದ್ದ ಹಾಗೇ ಇನ್ನೊಂದು ಗಳಿಗೆ ಇರುಲ್ಲ. ಸರಿಯಾಗಿ ಓದಲಿಲ್ಲ. ಕೆಲಸ ಇಲ್ಲ, ಕಾರ್ಯ ಇಲ್ಲ. ಉಂಡಾಡಿಯಾಗಿ ತಿರುಗಾಡಿಕೊಂಡು ಕಾಲ ಕಳೀತಾನೆ... ನೀನೇನಾದರೂ ಹೀಗಾಡಿದ್ದರೆ, ನಿನ್ನ ಕಾಲು ಮುರಿದು ಬಿಡುತ್ತಿದ್ದೆ. ವನಜಳಿಗೆ ಬೇಸರವಾಗತೊಡಗಿತ್ತು. ತಾಯಿ ಮಗ ಸೇರಿ ಹೊಸಾ ನಾಟಕ ಆಡುತ್ತಿದ್ದಾರೆನೋ ಅಂತನ್ನಿಸಿದಾಗ ಅವಳ ನಂಬಿಕೆ ಕುಸಿಯತೊಡಗಿತ್ತು. ಈ ಪ್ರೀತಿ ಪ್ರೇಮ ಎಲ್ಲಾ ಗೋಪಿಯಂತಹವರಿಗಲ್ಲ ಎಂದುಕೊಂಡಳು.

"ವನಜಾ ನೀನೇನೂ ಗಾಭರಿಯಾಗಬೇಡ."

"ಹೋಗಲಿ, ನಿನ್ನ ಪ್ಲಾನ್ ಆದರೂ ಹೇಳು, ಏನೂಂತ ನನಗೂ ತಿಳಿಯಲಿ," ಎಂದು ಕೋಪದಿಂದ ನುಡಿದಾಗ, ಮತ್ತೆ ನಕ್ಕ.

"ತಾಳಿದವನು ಬಾಳಿಯಾನು ಅಂತ...... ತಾಳ್ಮೆ ಇರಲಿ"

"ತಾಳ್ಮೆ ತಾಳ್ಮೆ..... ನೀನು ಅದೇನು ಮಾಡ್ತಿದೀಯೋ ನನಗಂತು ತೀಳೀದು"

"ನಿಜ ಹೇಳ್ತೀನಿ ವನಜಾ..... ಅದೇನು ಪ್ಲಾನ್ ಅಂತ ನನಗೂ ತಿಳೀದು ಅಮ್ಮನ್ನ ಕೇಳುವ ಧೈರ್ಯವಿಲ್ಲ. ಪುರಸೊತ್ತಿಲ್ಲ"

"ನಿನ್ನಂಥೋನು, ಈ ಪೋಲಿಸ್ ಕೆಲಸಾನ ಹೇಗೆ ನಿಭಾಯಿಸ್ತೀಯೋ ನಿನ್ನಂಥೋನ್ನ ನಾನು ಪ್ರೀತಿಸಲೇ ಬಾರದಾಗಿತ್ತು."

"ಈಗಲೂ ಸಮಯ ಮೀರಿಲ್ಲ. ಯೋಚಿಸು"

"ಇದೇ ತರಹದ ಮಾತುಗಳನ್ನು ಕೇಳಿ ಕೇಳಿ ಬೆಸತ್ತಿದ್ದೇನೆ. ನನಗೆ ಇಷ್ಟವಿರಲಿ ಬಿಡಲಿ, ವಾಸುಕಿ ಜತೆ ನನ್ನ ಮದುವೇ, ಅಂತ ತಯಾರಿ ನಡೀತಿದೆ. ಧೈರ್ಯವಿದ್ದರೆ, ಮದುವೆ ಮಂಟಪದಿಂದ ನನ್ನನ್ನು ಕಿಡ್ನಾಪ್ ಮಾಡಿಕೊಂಡು ಹೋಗು..... ಅರ್ಜುನನ ಹಾಗೆ..... ಶ್ರೀ ಕೃಷ್ಣನ ಹಾಗೇ.... ಅಲ್ಲಿವರೆಗೂ ನಾನು ನಿನ್ನನ್ನು ಮತ್ತೆಂದೂ ಭೇಟಿಯಾಗುಲ್ಲ"

"ಏಯ್ ವನಜಾ.... ಅಮ್ಮ ಮನೇಲೇ ಇದ್ದಾಳೆ. ಅವಳಿಗೆ ಕೇಳಿಸಿದರೆ ಏನಂದುಕೊಳ್ತಾಳೆ? ಹೀಗೆಲ್ಲಾ ಮಾತಾಡ್ತೀಯಲ್ಲ....."

"ಆಂಟೀನೂ ನನಗೆ ಕೈ ಕೊಟ್ಟಿದ್ದಾರೆ ಅಂತನ್ನಿಸ್ತಿದೆ....."

"ಸರಿ. ನಿನಗೆ ನಮ್ಮಗಳ ಮೇಲಿನ ನಂಬಿಕೆ ಹೊರಟು ಹೋಗಿದೆ. ಇನ್ನು ನಿನ್ನಿಷ್ಟ. ನೀನು ಹೇಳಿದಂತೆ ಮದುವೆ ಮಂಟಪದಲ್ಲಿ ನನ್ನ ನಿನ್ನ ಭೇಟಿ. ಅಲ್ಲಿಯವರೆಗೂ ನಾನೂ ನಿನ್ನನ್ನು ಭೇಟಿಯಾಗುಲ್ಲ" ಎಂದು ಸಿಡುಕಿ ಹೇಳಿ ನಡೀ ನಿನ್ನನ್ನು ಮನೆ ತಲುಪಿಸ್ತೀನಿ" ಅಂತಂದ.

"ಬೇಡ. ನನಗೆ ರಸ್ತೆ ಗೊತ್ತು ಎನ್ನುತ್ತಾ ದುಡುದುಡು ಹೊರಡುವಳ ಕೈ ಹಿಡಿದೆಳೆದ."

"ನಂಗೊತ್ತು. ನಿನಗೆ ರಸ್ತೆ ಗೊತ್ತು ಅಂತ. ಆದರೆ ನೀನು ಮನೇನ ಸರಿಯಾಗಿ ತಲುಪ್ತೀಯಾ ಅನ್ನುವ ನಂಬಿಕೆ ನನಗಿಲ್ಲ." ಎನ್ನುತ್ತಾ ಅವಳ ಜತೆ ಹೊರಟ. ಒಳಗಿನಿಂದ ತಿಂಡಿ ಕಾಫಿಯನ್ನು ತಂದಿಟ್ಟ ಮೈಥಿಲಿ ಅವರಿಬ್ಬರೂ ಹೊಸಿಲು ದಾಟಿ ಹೊರಟಿದ್ದನ್ನು ನೋಡಿಯೂ ಕರೆಯಲಿಲ್ಲ. ಇಬ್ಬರೂ ಮುನಿಸಿಕೊಂಡಿದ್ದಾರೆ ನಾನೀಗ ಕರೆದರೆ ವಾಪಸ್ಸು ಬರುವುದಿಲ್ಲ ಎಂದುಕೊಂಡು ಹಾಗೇ ನಿಂತಳು. ಪೋಲಿಸ್ ಜೀಪು ಬಂದು ನಿಂತಿತು. ಅದರಿಂದ ಇಳಿದ ಗಂಡ "ಈಗ್ತಾನೇ ಇಲ್ಲಿಂದ ಹೋದ್ರಲ್ಲಾ ಅವರ್‍ಯಾರು?" ಅಂತ ಕೇಳಿದಾಗ, "ಅಷ್ಟು ಗೊತ್ತಾಗಲಿಲ್ವೆ? ವನಜಾ..... ಗೋಪಿ..... "

ಎಂದು ನುಡಿದಳು.

"ಆ ಹುಡುಗಿ ಇಷ್ಟು ಹೊತ್ನಲ್ಲಿ ಏಕೆ ಬಂದಿದ್ದಳು?"

"ಅವಳಿಗೆ ಮದುವೆ ಗೊತ್ತಾಗಿದೆ. ನನಗೆ ಹೇಳುಕ್ಕೆ ಅಂತ ಬಂದಿದ್ದಳು. ನಾನೇ ಒಬ್ಬಳೇ ಹೋಗ್ತಾಳಲ್ಲ ಅಂತ ಗೋಪಿನ ಜತೇಲಿ ಕಳಿಸ್ದೆ"

ಆತ ಏನೂ ನುಡಿಯಲಿಲ್ಲ.

"ಆ ಹುಡುಗೀನೂ ಗಂಡನ ಮನೆಗೆ ಹೊರಟು ಹೋದರೆ, ನಮ್ಮ ಮನೆಗೆ ಬರೋದು ನಿಂತೇ ಹೋಗುತ್ತೆ."

"ಸರಿ. ಕಂಡೋರ ಮನೇ ಹುಡುಗೀನ ಅಷ್ಟೆಲ್ಲಾ ಹಚ್ಚಿಕೋ ಬಾರದು" ಅಂತ ಗಂಡ ನುಡಿದಾಗ, ಮಗನ ಮದುವೆಯ ಮಾತನ್ನು ಎತ್ತುವ ತವಕವಾದರೂ ತಡೆದುಕೊಂಡಳು. ಈಗ ಏನಾದರೂ ಹೆಚ್ಚು ಕಡಿಮೆ ಮಾತನಾಡಿ ತಾನು ಮಾಡಿರುವ ಪ್ಲಾನ್ ಫಲಿಸದೇ ಹೋದರೇ? ಎಂದುಕೊಂಡು ಸುಮ್ಮನಾದಳು. ಇದರ ಅರಿವಿಲ್ಲದ ಗಂಡ,

"ಜಾನಕಿ ಕಾಗದ ಬರೆದಿದ್ದಾಳೆ ವೇಣುಗೆ ಮದುವೆ ಗೊತ್ತಾಗಿದೆಯಂತೆ ಎಲ್ಲಾ ಖಂಡಿತಾ ಬರಬೇಕು ಅಂತ ಬರೆದಿದ್ದಾಳೆ."

"ಹೌದಾ? ವೇಣು ನಮ್ಮ ಗೋಪಿ ಒಂದೇ ವಯಸ್ಸಿನವರು....."

"ಅದಕ್ಕೇ..... ಎನ್ನುತ್ತಾ ಗಂಡ ಅವಳ ಕಡೆ ವಿಚಿತ್ರವಾಗಿ ನೋಡಿದಾಗ ಮೈಥಿಲಿ ಸುಮ್ಮನಾದಳು. ಹೆಂಡತಿ ಏನು ಆಡಿಬಿಡುವಳೋ ಎನ್ನುವಂತೆ ಆತ ಅಲ್ಲಿಂದ ಕದಲಿದ್ದರು, ರಸ್ತೆಯಲ್ಲಿ ನಡೆಯುತ್ತಿದ್ದವನು."

"ಯಾಕೆ ವನಜಾ ಒಂಥರಾ ಇದೀಯಲ್ಲ..... ಇನ್ನು ಕೋಪನಾ?" ಎಂದು ಅವಳನ್ನೇ ಗಮನಿಸಿ ಕೇಳಿದ ಗೋಪಿ ಏನಿಲ್ಲ, ನಾನು ಯಾವಾಗ್ಲೂ ಇರೋದೆ ಹೀಗೆ.....

""ಇಲ್ಲ ಇವತ್ತು ಸ್ವಲ್ಪ ಬೇರೆ ತರಹ ಕಾಣ್ತೇದೀಯ.... ಅವತ್ತು ವಾಸುಕಿ ಎದುರಿಗೆ ನೀನು ಕೂತಿದ್ದೆಯೆಲ್ಲಾ ಹಾಗೇನಾದ್ರೂ ಸದಾ ಇದ್ದರೇ ನಾನು ಸದಾ ಪೋಲಿಸ್ ಸ್ಟೇಷನ್‌ನಲ್ಲೇ ಇದ್ದು ಬಿಡ್ತೀನಿ ಮತ್ತೆ ಹೇಳಿದ.

"ಈಗಲೂ ನಿನ್ನ ಕೆಲಸ ಅದೇ ತಾನೇ..... ನನ್ನ ಜತೆ ಕೆಲವು ಗಂಟೆ ಕಳೆಯೋಕ್ಕೆ ನಿನಗೆ ಸಮಯವಿಲ್ಲ."

"ನನಗೆ ನಿನ್ನನ್ನು ಕಂಡರೆ ಹೆದರಿಕೆ.... ಸಿಕ್ಕಾಗೆಲ್ಲಾ ಮದುವೆ ಬಗ್ಗೆ ಮಾತಾಡ್ತೀಯ..... ಅದಕ್ಕೇ..."

"ಹೋಗಲಿ ಬಡಪ್ಪಾ..... ನಾನು ಅವನನ್ನೇ ಮದುವೆಯಾಗೋದು

ಅಂತ ತೀರ್ಮಾನಿಸಿ ಬಿಟ್ಟೆ......"

"ಆಂ..... ಯಾಕೆ? ದಿಢೀರನೆ ಹೀಗೆ ನಿರ್ಧರಿಸಿದೆ?"

"ನಿನ್ನ ಕಸಿನ್ ಇನ್ನೂ ಎಷ್ಟು ದಿನ ನಿಮ್ಮ ಮನೇಲಿ ಇರ್ತಾನೆ?"

"ಯಾಕೆ? ಅವನಿಂದ ನಿನಗೇನು ತೊಂದರೆ?"

"ಅವನಿಂದ ತೊಂದರೆ ಅಲ್ಲ. ನನ್ನಿಂದ ಎಲ್ಲರಿಗೂ ತೊಂದರೆ. ಆದಕ್ಕೇ ನಾನು ಅಪ್ಪ ಗೊತ್ತು ಮಾಡಿರುವ ಗಂಡನ್ನೇ ಮದುವೆಯಾಗಿ ಬಿಡೋದು ಅಂತ ಅಂದ್ಕೊಂಡಿದೀನಿ."

"ಕಾರಣ?"

"ಅವನು ಚೆನ್ನಾಗಿದ್ದಾನೆ. ಒಳ್ಳೆಯವನು ಅಂತ ಅನ್ನಿಸುತ್ತೆ. ಇನ್ನೇನು ಬೇಕು? ನನಗೆ?"

"ನನಗಿಂತ.....?"

"ನಿನಗೆ ನನ್ನ ಬಗ್ಗೆ ಯೋಚಿಸುಕ್ಕೆ ಸಮಯವಿಲ್ಲ. ಭೇಟಿಯಾದಾಗಲ್ಲೆಲ್ಲಾ ಜಗಳ.... ಏನೂ ಒಂದೂ ತೀರ್ಮಾನ ತಗೊಳ್ಳಲ್ಲ.... ನೀನೇ ಅವನನ್ನು ಮದುವೆಯಾಗು ಅಂತ ಸಜೆಸ್ಟ್ ಮಾಡಿದ್ದೆಯಲ್ಲ."

"ಓ ಹಾಗೋ.... ಹಾಗಾದರೆ ಬೇರೆ ಸಜೆಸ್ಟ್ ಮಾಡ್ತೀನಿ. ನನ್ನ ಮಾತನ್ನು ಒಪ್ಕೋತೀಯಾ?"

"ಬರೀ ಉಪಯೋಗವಿಲ್ಲದ ಮಾತು. ನಿನ್ನದು."

"ಖಂಡಿತಾ ಇಲ್ಲ. ನೀನ್ಯಾಕೆ ನನ್ನ ಕಸಿನ್‌ನೇ ಮದುವೆಯಾಗಬಾರದು ಅಂತ....."

"ಯಾರನ್ನಾ ಆ ಕಮಂಗೀನ? ಖಂಡಿತಾ ಇಲ್ಲ. ಆ ಹೇರ್‌ಸ್ಟೈಲ್, ಆ ಗಡ್ಡ ಮೀಸೆ, ಮೈಮೇಲೆ ಬೀಳುವ ರೀತಿ..... ಹೆದರಬೇಕೋ ನಗಬೇಕೋ ತಿಳಿಯಲ್ಲ.....ಥೂ"

"ನಾನು ಅವನೂ ಚಿಕ್ಕವಯಸ್ನಲ್ಲಿ ಒಂದೇ ತರಹ ಇದ್ದೆವು. ಈಗ ದೊಡ್ಡೋರದ ಮೇಲೆ, ಅವನು ಹಾಗೆ, ನಾನು ಹೀಗೆ.... ಅದ್ಸರಿ ನೀನು ಅವನನ್ನು ಅಷ್ಟು ಹತ್ತಿರದಿಂದ ನೋಡಿದೆಯಾ?"

"ಹೂಂ. ನೋಡಿದೆ. ಆ ಸುರಸುಂದರಾಂಗನ್ನ. ನಾನು ಅವನ ಹಿಂದೇನೂ ಓಡಿ ಹೋಗುವುದಿಲ್ಲ. ನೀನು ಹೆದರಬೇಡ."

"ಅವನಿಗೆ ಮದುವೆ ಗೊತ್ತಾಗಿದೆ. ಸಧ್ಯದಲ್ಲೇ ಮದುವೆ ಅಂತೆ....."

"ಪುಣ್ಯ ಮಾಡಿದ್ದಳು ಆ ಪುಣ್ಯಾತ್ಗಿತ್ತಿ." ಎಂದು ವನಜ ರಾಗವಾಗಿ

ನಕ್ಕಾಗ ಗೋಪಿ ಅವಳ ಬೆನ್ನಿಗೊಂದು ಏಟನ್ನು ಕೊಟ್ಟ.

"ಏಯ್ ಹೊಡೀ ಬೇಡ ಮತ್ತೆ..... ನೋಡು"

"ಹೇಳಿ ಕೇಳಿ ನಾನು ಪೋಲಿಸ್ನೋನು ಕೈ ಕಡೀತೀರುತ್ತೆ.... ಸಾರಿ ವನಜಾ ಪೆಟ್ಟಾಯ್ತಾ?" ಎನ್ನುತ್ತಾ ಅವಳ ಅತಿ ಸನ್ನಿಹಕ್ಕೆ ಬಂದಾಗ ಅವಳು ಎಚ್ಚೆತ್ತಳು.

"ಇದು ರಾಜಬೀದಿ, ಅಂತಃಪುರವಲ್ಲ." ಎನ್ನುತ್ತಾ ಹಿಂದೆ ಸರಿದಳು.

"ಸಾರಿ ಮೇಡಂ" ಎನ್ನುತ್ತಾ ಗೋಪಿ ಹಿಂದಕ್ಕೆ ಸರಿದ.

"ಗೋಪಿ, ನಾನೊಂದು ಮಾತು ಕೇಳಲಾ ನಿನ್ನನ್ನು?"

"ಹೂಂ. ಕೇಳು."

"ನೀನು ಇದುವರೆಗೂ, ನನ್ನನ್ನು ಬಿಟ್ಟು ಬೇರೆ ಯಾವ ಹುಡುಗೀರನ್ನ ಕಣ್ಣೆತ್ತಿ ನೋಡಿಲ್ವಾ?"

"ಇಲ್ಲ......"

"ನಿಜವಾಗಿಯೂ......?"

"ಹೂಂ.... ನಾನು ಕಣ್ಣೆತ್ತಿ ನೋಡಿದರೆ ಕಾಣೋದು ಬರೀ ಆಕಾಶಾನೇ.... ಕತ್ತು ಬಗ್ಗಿಸಿ ನೋಡಿದರೆ ಹುಡುಗೀರು ಕಾಣ್ತಾರೆ."

"ಹಾಗಾದರೆ ಕತ್ತು ಬಗ್ಗಿಸಿ ನನಗಿಂತ ಚೆನ್ನಾಗಿರುವ ಹುಡುಗೀರನ್ನ ನೋಡೇ ಇಲ್ವಾ?"

"ಹೂಂ. ನೋಡಿದೀನಿ. ಜಲಜನ್ನ....."

"ಜಲಜ ನನ್ನ ತಂಗಿ......"

"ಇರಬಹುದು ಆದರೆ ಅವಳು ಹುಡುಗೀನೇ. ಮುಂದೆ ನನ್ನ ನಾದಿನಿಯಾಗುವವಳು."

"ಆ ಕಾಲ ಬರುತ್ತಾ ಅಂತ ನನಗೆ ಅದೇ ಚಿಂತೆ......"

"ಚಿಂತಿಸಿದರೂ ಅಷ್ಟೇ. ಚಿಂತಿಸದಿದ್ದರೂ ಅಷ್ಟೇ. ದಿನಗಳು ಮಾತ್ರ ಸರಿಯುತ್ತಿವೆ. ನಿನ್ನ ಮದುವೆ ದಿನವನ್ನು ಗೊತ್ತು ಮಾಡಿದಾರಾ?"

"ಯಾಕೆ? ಮದುವೆಗೆ ಬಂದು ನನಗೆ ಆಶೀರ್ವಾದ ಮಾಡ್ತೀಯಾ?"

"ಆಶೀರ್ವಾದ ಮಾಡ್ತೀನೋ? ಅರಿಶಿನದ ದಾರವನ್ನು ಕೊರಳಿಗೆ ಕಟ್ತೀನೋ ನಿನಗೆ ಗೊತ್ತಾಗುತ್ತೆ. ನಿನ್ನ ಮನೆ ಬಂತು, ಈಗ ಸುಮ್ಮನೇ ಒಳಕ್ಕೆ ಹೋಗು. ನಿನ್ನ ಅಪ್ಪನೋ, ಅಮ್ಮನೋ ನೋಡಿದರೆ ಹಗರಣವಾಗುತ್ತೆ."

"ಗೋಪಿ, ನೀನು ದಿನದಿನಕ್ಕೆ ನನಗೆ ಕಗ್ಗಂಟಾಗ್ತಿದೀಯ.... ನಿನ್ನ

ಮಾತು, ನಿನ್ನ ಪ್ಲಾನ್ ಒಂದು ಅರ್ಥವಾಗ್ತಿಲ್ಲ. ನೀನೂ ಹೆಣ್ಣಾಗಿ ಹುಟ್ಟಿದ್ದರೇ.... ನನ್ನ ಆತಂಕ ಏನೂಂತ ಅರ್ಥವಾಗಿತ್ತು....."

"ಬೇಡ ಬೇಡ..... ಈಗ ನಾವು ಇರೋ ತರಹಾನೇ ಸರಿಯಾಗಿದೆ. ಬೈ ನಾನು ಹೊರಟೆ" ಎಂದು ಹಾಗೇ ಹಿಂತಿರುಗಿದ.

"ಎಲ್ಲಿಗೆ ಹೋಗಿದ್ದೇ ಇಷ್ಟು ಹೊತ್ತು?" ತಾಯಿ ಗದರಿದಾಗ, ಫ್ರೆಂಡ್ ಮನೆಗೆ ಅಂತ ಉತ್ತರಿಸಿ, ತನ್ನ ಪಾಡಿಗೆ ತಾನು ನಡೆದಳು.

"ಜಲಜಾ ತಟ್ಟೆ ಹಾಕೇ..... ಹಾಗೇ ಎಲ್ಲರನ್ನೂ ಊಟಕ್ಕೆ ಕರಿ" ಎಂದು ಸಿಡುಕಿ ನುಡಿದಾಗ, ಅಮ್ಮನಿಗೆ ಸಿಟ್ಟು ಬಂದಿದೆ ಎಂದು ಗೊತ್ತಾಗಿತ್ತು. ಈ ಅಮ್ಮನಿಗೆ ನನ್ನ ಮೇಲೆ ಸದಾ ಕೋಪ. ಈ ಮನೇಲಿ ಇನ್ನೆಷ್ಟು ದಿನ ತಾನೇ ಇರ್ತೀನಿ ಅಷ್ಟಾದರೂ ತಿಳೀಬೇಡವಾ ಎಂದು ಕೊಂಡು ಸೀರೆ ಬದಲಾಯಿಸಿ ತಾನೇ ಅಡಿಗೆ ಮನೆಗೆ ಬಂದಳು ತಟ್ಟೆ ಮುಂದೆ ಕೂತಳು.

"ನಾನು ಗೋಪಿಯ ಮನೆಗೆ ಹೋಗಿದ್ದೆ ಅಲ್ಲಿ ಗಡದ್ದಾಗಿ ತಿಂಡಿ ತಿಂದೆ. ನನಗೆ ಬರೀ ಮೊಸರನ್ನ ಸಾಕು." ಎಂದಳು.

"ಗೋಪಿಯ ಮನೆಗೆ ಹೋಗುವುದನ್ನು ಇನ್ನಾದರೂ ಬಿಡು. ಅವರಿಗೆ ತಿಳಿದರೆ ಏನಂದುಕೊಳ್ತಾರೆ? ಎಷ್ಟಾಗಲೀ ಪೋಲಿಸ್ನೋರ ಮನೆ. ರೀತಿ ನೀತಿ ಆಚಾರ ವಿಚಾರ ಎಲ್ಲಾ ಬೇರೆ. ನೀನು ಅದೃಷ್ಟವಂತೆ, ವಾಸುಕಿ ನೋಡೋಕು ಚೆನ್ನಾಗಿದ್ದಾನೆ. ಒಳ್ಳೆ ಕೆಲಸದಲ್ಲಿದ್ದಾನೆ. ಇರೋ ಒಬ್ಬ ಅಕ್ಕನಿಗೆ ಮದುವೆಯಾಗಿದೆ. ಹೀಗೆ ಮಾಡು ಹಾಗೆ ಮಾಡಬೇಡ ಎಂದು ಹೇಳಿಕಾಡುವ ಅತ್ತೆ ಮಾವಂದಿರ ಕಾಟವಿಲ್ಲ."

ವನಜ ಕಿಸಕ್ಕನೆ ನಕ್ಕಳು.

"ಅತ್ತೆ ಮಾವಂದಿರು ಕಾಟ ಕೊಡ್ತಾರೆ ಅಂತ ಯಾಕೆ ಯೋಚಿಸಬೇಕು? ಒಳ್ಳೆಯವರು, ಆಗಿರುಕ್ಕೆ ಸಾಧ್ಯವಿಲ್ಲವಾ ಆ ಅತ್ತೆಮಾವಂದಿರು?"

"ನಿಂಗೊತ್ತಿಲ್ಲ..... ಅತ್ತೆಗೆ ಸೊಸೆ ಸೋಸೇನೇ...... ಮಗಳು ಅಂತ ಅನ್ನಿಸೋದಾದ್ರೆ ಹೇಗೆ?"

"ಏನೋಮ್ಮ ನಂಗೊತ್ತಿಲ್ಲ. ಗೋಪಿ ತಾಯಿ ಎಷ್ಟು ಒಳ್ಳೆಯವರು ಗೊತ್ತಾ.....?"

"ಅವರು ಒಳ್ಳೆಯವರೋ ಅಲ್ಲವೋ, ಆ ಮಾತೇಕೆ ಈಗ? ಸುಮ್ಮನೆ ಊಟ ಮಾಡು."

"ಅಪ್ಪಾ ಬಂದೇ ಇಲ್ವಲ್ಲಮ್ಮ......"

"ಅವರು ಗಂಡಿನವರ ಮನೆಗೆ ಹೋಗಿದ್ದಾರೆ. ಮಾತುಕತೆ ಇರುತ್ತಲ್ಲ." ವನಜ ತನ್ನ ಪಾಡಿಗೆ ತಾನು ತುತ್ತು ಕಲಸಿ ತಿನ್ನುತ್ತಿದ್ದುದನ್ನು ಕಂಡು ತಾಯಿಯೇ ನುಡಿದಳು. "ಸಧ್ಯ..... ವರದಕ್ಷಿಣೆ ಅದೂ ಇದು ಅಂತ ಕೇಳಿಲ್ಲ. ಆಸೆ ಬುರುಕರಲ್ಲ. ನೆಮ್ಮದಿಯಿಂದಿರಬಹುದು" ವನಜ ತನ್ನಲ್ಲೇ ನಕ್ಕಳು.

ತಂದೆ ಬಂದು, ಉಸ್ ಎಂದು ಕುಳಿತು "ಫ್ಯಾನ್ ಹಾಕು. ಒಂದು ಲೋಟ ನೀರು ಕೊಡು" ಎಂದು ಆಜ್ಞೆ ಮಾಡಿದಾಗ ಸುನಂದ ಗಾಭರಿಯಾದಳು.

"ಯಾಕೆ ಏನಾಯ್ತು? ಅವರುಗಳು ಏನಂದ್ರು?"

"ಏನಂತಾರೆ? ತೀರಾ ವಿಚಿತ್ರವಾದ ಜನ ಇಂಥಾ ಜನರನ್ನು ನಾನೆಲ್ಲೂ ಕೇಳಿರಲಿಲ್ಲ. ಕಂಡಿರಲಿಲ್ಲ."

"ಏನಂತೆ? ವರದಕ್ಷಿಣೆ ಕೇಳಿದ್ನಾ?"

"ವರದಕ್ಷಿಣೆ ಕೇಳಿದ್ದರೆ ಸಾಲ ಸೋಲ ಮಾಡಿ ಕೊಡುತ್ತಿದ್ದೆ. ಅದಲ್ಲ. ಯಾರಾದ್ರೂ ಕೇಳಿದ್ರೆ ನಗ್ತಾರೆ ಅಷ್ಟೇ. ನನಗ್ಯಾಕೋ ಈ ಸಂಬಂಧವೇ ಬೇಡ ಅಂತನ್ನಿಸಿದೆ."

"ಏನು ಹೇಳಿದ ಸರಿಯಾಗಿ ಹೇಳಿ?"

"ಹುಡುಗ ಸಂಭಾವಿತ ಅಂತ ತಿಳುಕೊಂಡಿದ್ದೆ. ಆದರೆ ಈತರಹದ ವಿಚಿತ್ರ ಬೇಡಿಕೆ ನನಗೆ ಅರ್ಥವಾಗುತ್ತಿಲ್ಲ. ಅಲ್ಲಾ ನಮ್ಮನ್ನ ಏನೂಂತ ತಿಳಿದುಕೊಂಡಿದ್ದಾನೆ?" ಕೂಳಿಗೆ ಗತಿಯಿಲ್ಲದವರು ಅಂತ ಅಂದುಕೊಂಡಿದ್ದಾನಾ?

"ಹಾಗೆಲ್ಲ ಯಾಕೆ ಅಂದ್ಕೊತಾನೆ? ಹಾಗಿದಿದ್ದರೆ ನಮ್ಮ ವನಜನ್ನ ಒಪ್ಕೋತಿದ್ನಾ?"

"ಏನೋ ನಮಗೆ ಉಪಕಾರ ಮಾಡೋ ತರಹ ಮಾತಾಡ್ತಾನೆ. ವರದಕ್ಷಿಣೆ ಬೇಡ ಸರಿ, ವರೋಪಚಾರ ಬೇಡ, ಅದೂ ಸರಿ, ಸರಳವಾದ ಮದುವೆ ಅಂದ..... ಅದೇ ನನಗಿಷ್ಟವಿರಲಿಲ್ಲ. ಅಂಥದ್ದರಲ್ಲಿ ಈಗ.... ನನಗೆ ಹೇಳೂಕ್ಕೆ ಹೀನಾಯವಾಗತ್ತೆ....."

"ಏನಂತೆ? ದೇವಸ್ಥಾನದಲ್ಲಿ ಮದುವೆ ಮಾಡಿಕೊಡಬೇಕಂತಾ? ಅಂಥಾದರಿದ್ರ ನಮಗೇನಿದೆ?"

"ಮತ್ತೇ...... ಕೇಳಿಲ್ಲ. ಅವನು ಅವನ ಫ್ರೆಂಡ್ಸ್ ಸೇರಿ ಒಂದು ಸಂಘ ನಡೆಸ್ತಿದ್ದಾರಂತೆ..... ಅಲ್ಲಿ ಪ್ರತೀ ವರ್ಷವೂ 'ಸಾಮೂಹಿಕ ವಿವಾಹ'ದ ಕಾರ್ಯಕ್ರಮ ಏರ್ಪಡಿಸುತ್ತಾರಂತೆ. ಹತ್ತಾರು ವಧೂವರರಿಗೆ ಒಟ್ಟಿಗೇ ಮದುವೆಯಂತೆ

ಅದನ್ನು ಒಪ್ಪಿಕೊಳ್ಳಾಕ್ಕೆ ನಾನೇನು ಗತಿಯಿಲ್ಲದವರೇ.....?"

"ಅವನು ಆ ಹುಡುಗ ಹಾಗೆ ಹೇಳಿದನೆ?"

"ಹೂಂ..... ಅವನೂ ಅವನ ಸ್ನೇಹಿತರೆಲ್ಲಾ ಸಂಘದ ಚಪ್ಪರದಲ್ಲಿ ನೆರವೇರುವ ಸಾಮೂಹಿಕ ವಿವಾಹದಲ್ಲಿ ಮದುವೆ ಮಾಡಿಕೊಳ್ಳುವುದು ಅಂತ ನಿರ್ಧರಿಸಿದಾರಂತೆ. ನನಗಂತೂ ಅವಮಾನವಾದ ಹಾಗಾಯ್ತು. ಅಂಥೊನ್ನ ನಮ್ಮ ಅಳಿಯ ಅಂತ ಹೇಗೆ ಹೇಳಿಕೊಳ್ಳೋದು? ನಮಗೊಂದು ಘನತೆ, ಅಂತಸ್ತು ಬೇಡವೆ?"

"ಮತ್ತೇನು ಮಾಡೋಣ ಈಗ? ನೀವು ಏನು ಹೇಳಿದ್ರಿ?"

"ಇವತ್ತೆ ಏನೂ ಹೇಳಿಲ್ಲ. ನಾವು ಇದಕ್ಕೆ ಒಪ್ಪುವುದು ಬೇಡ ಆಗುಲ್ಲ ಅಂತ ಹೇಳಿ ಬಿಡೋಣ, ಏನಂತೀಯಾ?"

"ಕೈಗೆ ಬಂದ ತುತ್ತು ಬಾಯಿಗೆ ಇಲ್ಲದ ಹಾಗಾಗುತ್ತೆ."

"ಹಾಗಂತ? ಮರ್ಯಾದೆ ಕಳೆದುಕೊಳ್ಳೋಕೆ ಆಗುತ್ತಾ? ಬೇರೆ ಗಂಡನ್ನು ಹುಡುಕಿ ನಮ್ಮ ಕೈಲಾದಷ್ಟು ಖರ್ಚುಮಾಡಿ ಮದುವೆ ಮಾಡೋಣ. ನಮಗೂ ಇಬ್ಬರೇ ಮಕ್ಕಳು ಹತ್ತಾರಿಲ್ಲ. ಹಾಗಂತ ಹೇಳಿಬಿಡ್ತೀನಿ"

"ಅದ್ಸರಿ..... ಅವನನ್ನು ಒಪ್ಪಿಸಲು ಸಾಧ್ಯವಿಲ್ಲವೇ......."

"ಇಂಥೊರೆಲ್ಲಾ, ಸಮಾಜ, ಸಂಘ ಅಂತ ಓಡಾಡುಕ್ಕೆ ಶುರುಮಾಡಿದ ಮೇಲೆ, ಏನೋ ಪೊಳ್ಳು ಆದರ್ಶ, ಉತ್ಸಾಹ. ಏನಾದರೂ ಎಡವಟ್ಟಾದ ಮೇಲೆ ಸರಿಹೋಗ್ತಾರೆ. ನಮಗ್ಯಾಕೆ ಬಿಡು.... ಬೇಡ ಅಂದ್ರಾಯ್ತು."

"ನಾನು ಅವನ ಅಕ್ಕನ ಹತ್ತಿರ ಮಾತನಾಡ್ತೀನಿ. ಆಕೆ ತಮ್ಮನಿಗೆ ತಿಳುವಳಿಕೆ ಹೇಳಬಹುದು."

"ನಿನಗೆ ಏನೋ ಭ್ರಾಂತು? ಅವನು ಅಕ್ಕನ ಮಾತನ್ನು ಕೇಳ್ತಾನೇ ಅಂತೀಯಾ?"

"ನಮ್ಮ ವನಜನ್ನ ಕೈಲೇ ಹೇಳಿಸಿದರೇ..... ನನಗೆ ಅಚ್ಚುಕಟ್ಟಾಗಿ ಶಾಸ್ತ್ರೋಕ್ತವಾಗಿ ಮದುವೆಯಾಗಬೇಕೂಂತ ಆಸೆ.... ಸರಳವಾದ ಸಾಮೂಹಿಕ ಮದುವೆಗೆ ನಾನು ಒಪ್ಪುವುದಿಲ್ಲ ಅಂತ ಹೇಳಿದರೇ.... ಅವಳ ಮಾತನ್ನು ಒಪ್ಪಬಹುದೇನೋ........?"

"ನನಗೇನೋ ನಂಬಿಕೆ ಇಲ್ಲ."

"ನೋಡೋಣ. ನಾವು ದುಡುಕಿ, ನಾವೇ ಕೈ ಬಿಡುವುದು ಸರಿಯಲ್ಲ. ಹೆಂಡತಿಯಾಗುವವಳ ಇಷ್ಟಕ್ಕೆ ಒಪ್ಪಿದರೂ ಒಪ್ಪಬಹುದು. ನಾನು ವನಜಳ

ಹತ್ತಿರ ಮಾತನಾಡ್ತೀನಿ. ಸದಾನಂದ ಹೂಂ ಎನ್ನಲಿಲ್ಲ; ಬೇಡವೆನ್ನಲೂ ಇಲ್ಲ."

"ಮಲಗಿ ಬಿಟ್ಟೆಯೇನೇ ವನಜಾ..... ಎನ್ನುತ್ತಾ ತಾಯಿ ಹಾಸಿಗೆಯ ಬಳಿ ಬಂದು ಕುಳಿತಾಗ, ಏನೋ ಗಹನವಿಚಾರವಿದೆ ಎಂದು ಅರಿತಳು."
"ಏನು ಬೇಕು?" ನಿರಾಸಕ್ತಿಯಿಂದ ಕೇಳಿದಳು.

"ನೀನು ವಾಸುಕಿ ಹತ್ತಿರ ಮಾತಾಡಿದೀಯಲ್ಲ. ಅವನು ಹೇಗೆ ಅಂತ ಅನ್ನಿಸುತ್ತೆ?"

"ಹೇಗೆ ಅಂದರೆ? ಈಗ್ಯಾಕೆ ಕೇಳ್ತಾ ಇದನ್ನೆಲ್ಲಾ?"

"ಸರಳವಾಗಿ ಮದುವೆಯಾಗ್ತೀನಿ ಅಂತ ಅಂದ್ನಂತೆ. ಅದಕ್ಕೇ......"

"ಅದರಲ್ಲೇನು ತಪ್ಪು? ಖರ್ಚು ಶ್ರಮ ಎಲ್ಲಾ ಉಳಿಯುಲ್ವಾ?"

"ಬರೀ ಅಷ್ಟೇ ಅಲ್ಲ. ಇನ್ನೇನಾದ್ರೂ ಹೇಳಿದ್ನಾ ಅಂತ?"

"ಯಾಕೆ? ಈಗ ವರದಕ್ಷಿಣೆ ಬೇಕಾಂತಾ?..... ಅವನಿಗೆ?"

"ವರದಕ್ಷಿಣೆ ಕೇಳಿದ್ರೆ ಕೊಡೋಕೆ ನಿಮ್ಮಪ್ಪ ಸಿದ್ಧ.... ಆದರೆ ವಿಷಯ ಅದಲ್ಲ..... ಯಾವುದೋ ಸಂಘ ಅಂತೆ..... ಅದರ ವಿಚಾರ ತಿಳಿಸಿದ್ನಾಂತಾ?"

"ಇಲ್ಲಮ್ಮ ನಂಗೆ ಹೇಳಿಲ್ಲ.... ಅದೇನಂತೆ?"

"ಸ್ನೇಹಿತರೆಲ್ಲಾ ಸೇರಿ ಸಂಘ ಮಾಡಿಕೊಂಡಿದ್ದಾರಂತೆ..... ವರ್ಷಕ್ಕೊಂದು ಸಲ ವಾರ್ಷಿಕೋತ್ಸವದ ಸಮಯದಲ್ಲಿ 'ಸಮೂಹಿಕ ವಿವಾಹ'ವನ್ನು ಏರ್ಪಡಿಸುತ್ತಾರಂತೆ. ಹತ್ತಾರು ಜೋಡಿಗಳು ದಂಪತಿಗಳಾಗುತ್ತಾರಂತೆ. ಹಾಗೇ ಅವನೂ ಮದುವೆಯಾಗಬೇಕು ಅಂತ ತೀರ್ಮಾನಿಸಿದ್ದಾನಂತೆ......"

"ಏನಮ್ಮಾ ನೀನು ಹೇಳ್ತಾ ಇರೋದು? ಸಮೂಹಿಕ ಮದುವೇನಾ?"

"ಹೂಂ.... ಅವನು ಹಾಗೆ ಹೇಳಿದ್ದಾನಂತೆ. ನೀನು ನನಗೆ ಹಾಗೇ ಮದುವೆಯಾಗೋಕೆ ಮನಸ್ಸಿಲ್ಲ ಅಂತ ಹೇಳಬೇಕು. ಅವನಿಗೆ "

"ಹೋಗಮ್ಮಾ ನಾನ್ಯಕೆ ಹೇಳಲಿ? ಅದು ಅವನ ಇಷ್ಟ....."

"ಅವನ ಇಷ್ಟ ಅಂದರೆ.... ನಿನ್ನನ್ನ ಧಾರೆ ಎರೆದು ಕೊಡುವವರು ನಾವು..... ಲಕ್ಷಣವಾಗಿ ಮದುವೆ ನೆರವೇರಬೇಡವೇ..... ಛತ್ರನೋಡಿ, ವರೋಪಚಾರದೊಂದಿಗೆ ಶಾಸ್ತ್ರೋಕ್ತವಾಗಿ ಮದುವೆ ಮಾಡಿಕೊಡುವ ಆಸೆ ನಮಗಿಲ್ಲವೆ?....."

"ನಂಗೊತ್ತಿಲ್ಲ ಅದನ್ನೆಲ್ಲ ಅಪ್ಪನೇ ಹೇಳಲಿ......"

"ಅವರಿಗಿಂತ ನೀನು ಹೇಳೋದೇ ವಾಸಿ ಅಂತ ಅನ್ನಿಸುತ್ತೆ. ನನಗೆ"

"ನನಗೆ ಅವನನ್ನು ಮದುವೆಯಾಗೋಕೆ ಇಷ್ಟವಿಲ್ಲ. ಅಂಥಾದ್ದರಲ್ಲಿ ಇದು ಬೇರೆ..... ಗೋಪಿ ಕೈಲಿ ಹೇಳಿಸಿದರೇ.......?"

"ನಮ್ಮ ಮನೆ ವಿಷಯ ಅವನಿಗೇಕೆ ತಿಳಿಯಬೇಕು?"

"ಅವನು ಹಾಗೇ ಮದುವೆಯಾಗ್ತೀನಿ ಅಂತ ಹಠ ಹಿಡಿದರೆ ಅದು ಊರಿಗೆಲ್ಲಾ ತಿಳಿಯುತ್ತೆ ಪರವಾಗಿಲ್ವಾ?"

"ಗೋಪಿ ತಾಯಿ ಜಾಣೆ. ಅವರೂ ಸಮಾಜ, ಅದೂ ಇದು ಅಂತ ಹೊರಗೆ ತಿರುಗಾಡಿರೋರು. ಅವರಿಗೆ ಹೇಳೋಣ ಅವರು ಅವನಿಗೆ ತಿಳುವಳಿಕೆ ಹೇಳಲಿ?"

"ನಿನ್ನಿಷ್ಟ ಏನು ಬೇಕಾದ್ರೂ ಮಾಡ್ಕೋ....." ಎನ್ನುತ್ತಾ ಮುಸುಕು ಏರಿ ಮಲಗಿದಾಗ, ಎಬ್ಬಿಸಿ ನಾಲ್ಕು ಬಾರಿಸುವಷ್ಟು ಕೋಪ ಬಂದಿತ್ತು. "ನಮ್ಮ ಮರ್ಯಾದೆ ಹೋಗುವಂತಹ ಸ್ಥಿತಿ ಬಂದಿದೆ. ನಿನಗೆ ಅದರ ಚಿಂತೆಯೇ ಇಲ್ಲವಲ್ಲ."

"ನಾವೇನು ಕಳ್ಳತನ ಮಾಡಿದೀವಾ? ಸುಳ್ಳು ಹೇಳಿದೀವಾ? ಮರ್ಯಾದೆ ಏಕೆ ಹೋಗುತ್ತೆ? ಸುಮ್ಮನೆ ಅವನು ಹೇಳಿದ ಹಾಗೆ ಕೇಳಿ.... ಎಲ್ಲರ ಮರ್ಯಾದೇನೂ ಉಳಿಯುತ್ತೆ." ಮುಸುಕಿನೊಳಗಿನಿಂದಲೇ ನುಡಿದಳು.

"ನಂಗೆಲ್ಲಾ ಗೊತ್ತು.... ನಿನಗೆ ಇವನನ್ನು ಮದುವೆಯಾಗುಕ್ಕೆ ಇಷ್ಟವಿಲ್ಲ. ನಮ್ಮ ಮರ್ಯಾದೆ ಹೋದರೆ ಹೋಗಲಿ ಅನ್ನೋ ಧಿಮಾಕು! ನಮಗೀ ಹುಡುಗ ಬೇಡವೇ ಬೇಡ......"

"ಏನಾದ್ರೂ ಮಾಡ್ಕೋ" ಎಂದಳು. ತಾಯಿಯ ಕಡೆ ತಿರುಗಿ ನೋಡಲಿಲ್ಲ.

ಗಂಡನಿಗೆ ತಿಳಿಯದಂತೆ ಸುನಂದ ಜಲಜಳೊಂದಿಗೆ ಮೈಥಿಲಿಯ ಮನೆಗೆ ಬಂದಳು. ನಗೆ ಮುಖದಿಂದ ಮೈಥಿಲಿ ಆಹ್ವಾನಿಸಿದಾಗ ಹಿತವೆನಿಸಿತ್ತು. "ನಿಮ್ಮಿಂದ ಒಂದು ಉಪಕಾರವಾಗ ಬೇಕಾಗಿತ್ತು" ಎಂದಳು.

"ನಮ್ಮ ವನಜನ್ನ ವಾಸುಕಿ, ಒಪ್ಪಿ ಮದುವೆ ನಿಶ್ಚಯವಾಗಿರುವ ವಿಷಯ ತಿಳಿದಿರಬಹುದು. ಆದರೆ ಅವನು ಯಾಕೋ ವಿಚಿತ್ರವಾಗಿ ಮಾತಾಡ್ತಾನೆ."

"ಯಾಕೆ? ಸರಿಯಾಗಿಯೇ ಇದಾನಲ್ಲ. ಹಾಗೇನೂ ಅನ್ನಿಸುಲ್ಲ. ಒಳ್ಳೆಯ ಕಂಪೆನಿಯಲ್ಲಿ ಕೆಲಸದಲ್ಲಿದ್ದಾನೆ. ಏನು ತೊಂದರೆ ಇದ್ದ ಹಾಗೆ ಅನ್ನಿಸುಲ್ಲ."

"ಅದೆಲ್ಲಾ ಸರಿ, ಆದರೆ ಅದೇನೋ ಆದರ್ಶದ ಭೂತ....."

"ಏನಂತೇ? ಏನು ಅವನ ಆದರ್ಶ?"

"ಈಗಿನ ಕಾಲದೋವು ಹೇಳಿದ ಹಾಗೆ ಕೇಳಬಾರದು ಅನ್ನೋ
ಪ್ರತಿಷ್ಠೆ ಅಲ್ಲದೇ ಅವರ ಮನೇಲಿ ಹೀಗೆಲ್ಲಾ ಮಾಡಬೇಡ ಅಂ
ಹೇಳೋದಿಲ್ಲ...."

"ಹುಡುಗ ಸಭ್ಯನ ಹಾಗೆ ಕಾಣ್ತಾನೆ. ಸ್ಕೂಟರ್ ಬೇಕೂಂತ ಕೇಳಿದ್ನಾ?"

"ಏನನ್ನೂ ಕೇಳಲಿಲ್ಲ. ಅದೇ ಬಂದದ್ದು. ಹೋಗಲಿ ಅಂದರೆ, ಈ
ಯಾವುದೋ ಸಂಘದಲ್ಲಿ ನಡೆಯುವ ಸಾಮೂಹಿಕ ವಿವಾಹದಲ್ಲೇ ತನ
ಮದುವೆಯಾಗಬೇಕು ಅಂತ ಹಠ ಹಿಡಿದಿದ್ದಾನಂತೆ......"

"ಓ...... " ಮೈಥಿಲಿಗೆ ನಗು ಬಂದರೂ ತಡೆದುಕೊಂಡಳು.

"ನೀವಾದ್ರೂ ಆ ಹುಡುಗನಿಗೆ ಸ್ವಲ್ಪ ತಿಳುವಳಿಕೆ ಹೇಳ್ತೀರಾ? ನೀವು
ಸಮಾಜ ಅದೂ ಇದೂ ಅಂತ ಹೊರಗೆ ತಿರುಗಿರೋರು. ನನಗಂತು
ಏನೂ ತಿಳೀದು."

"ನಿಮ್ಮ ಮನಸ್ಸಮಾಧಾನಕ್ಕೆ ನಾನು ವಾಸುಕಿ ಹತ್ತಿರ ಮಾತನಾಡ್ತೀನಿ
ಆದರೆ.... ಅವನು ಒಪ್ಪದೇ ಇದ್ದರೇ......?"

"ನಿಮ್ಮ ಮಗನೇ ಈ ರೀತಿ ಆಡಿದ್ದರೆ ನೀವು ಏನು ಮಾಡ್ತಿದ್ರಿ?"

"ನಾನು ಏನೂ ಹೇಳುತ್ತಿರಲಿಲ್ಲ. ಖುಷಿಯಾಗಿ ಒಪ್ಪಿಕೊಳ್ಳುತ್ತಿದ್ದೆ."

"ಸುನಂದಳಿಗೆ ಮುಖಭಂಗವಾದಂತಾಗಿತ್ತು. ಈಕೆಯೊಡನೆ ಹೇಳಿದ್ದೆ
ತಪ್ಪಾಯಿತೇನೋ ಎನ್ನುವಂತೆ ಮೌನವಾದಳು."

"ನೋಡಿ ಸುನಂದಾರವರೇ...... ನಾವು, ಮಕ್ಕಳು ಮಾಡೋದು
ಮಾತ್ರ ತಪ್ಪು ಅಂತ ಯೋಚಿಸಬಾರದು. ದೊಡ್ಡೋರು ಸಹ ತಿಳಿದೂ
ತಿಳಿದೂ ತಪ್ಪು ಮಾಡ್ತಾರೆ. ಆದರೆ ಇಂಥ ಸಮಯದಲ್ಲಿ ನಮ್ಮಂತಹ
ಹೆಂಗಸರೇ ಇಕ್ಕಟ್ಟಿಗೆ ಸಿಕ್ಕಿ ಬೀಳುವುದು. ಹುಡುಗ ಹುಡುಗಿ ಒಪ್ಪಿರುವಾಗ
ಸುಲಭದಲ್ಲಿ ಮದುವೆ ಕಾರ್ಯ ಮುಗಿಸಿದರೆ ಒಂದು ಹೊರೆ ಇಳಿಸಿದಂತೆ
ವಾಸುಕಿಯ ಬೇಡಿಕೆಯಿಂದ ನಿಮಗೆ ನಷ್ಟವೇನೂ ಇಲ್ಲವಲ್ಲ. ಸಾಲ ಸೋಲ
ಮಾಡಿ, ವರ ಕೇಳಿದ್ದನ್ನೆಲ್ಲಾ ಕೊಟ್ಟು, ನಂತರವೂ ಅವರುಗಳ ಬೇಡಿ
ಮುಗಿಯದಂತೆ ಇದ್ದಾಗ ಪರಿತಾಪ ಪಡುವ ಎಷ್ಟೋ ತಂದೆ ತಾಯಿಗಳ
ಕಷ್ಟವನ್ನು ನೋಡಿಲ್ಲವೇ? ಈಗ ಇಲ್ಲಿ ಪ್ರತಿಷ್ಠೆ ಮುಖ್ಯವಲ್ಲ. ಇದರಿಂದ
ನಿಮಗೆ ಅವಮಾನವಾಗುತ್ತೆ ಅಂತ ಯಾಕೆ ಚಿಂತಿಸ್ತೀರಿ? ಸಮಾಜ ಸುಧಾರಣೆಯ
ಕಾರ್ಯದಲ್ಲಿ ಭಾಗವಹಿಸುವ ಅವಕಾಶ ಸಿಕ್ಕಿರುವಾಗ ಹೆಮ್ಮೆ ಪಡಿ..... ನಿಮಗೂ
ಒಳ್ಳೆಯದೇ."

"ಬೇಡ, ಬೇಡ. ಈ ಸಮಾಜ ಸುಧಾರಣೆಯಂತಹ ಕೆಲಸವೆಲ್ಲಾ ನಮ್ಮಂತಹವರಿಗಲ್ಲ. ನಮ್ಮ ನೆಂಟರಿಷ್ಟರು ಆಡಿಕೊಂಡು ನಕ್ಕರೆ, ನಾವು ತಲೆ ತಗ್ಗಿಸುವಂತಾಗುತ್ತದೆ. ಆಮೇಲೆ ಹೇಗೆ ಇರೋದು?"

"ನೀವು ಹಾಗೆ ಯೋಚಿಸುವುದು ತಪ್ಪು. ಇದು ಅಪರಾಧವಲ್ಲ. ಹೋಗಲಿ ಬಿಡಿ..... ನಿಮ್ಮ ನೆಂಟರಷ್ಟರು ನೀವು ಅಚ್ಚುಕಟ್ಟಾಗಿ ಖರ್ಚುಮಾಡಿಮದುವೆ ಮಾಡಿದರೂ, ಏನಾದರೂ ಕುಂದು ಕೊರತೆಯನ್ನು ಹುಡುಕಿ ಆಡಿಕೊಳ್ಳುತ್ತಾರೆ ಅಂತ ನಿಮಗೆ ಅನ್ನಿಸುವುದಿಲ್ಲವೇ,.... ಆಗ ಹೇಗಿರ್ತೀರಿ?"

"ಅದು ವಾಡಿಕೆಯಾಗಿ ಬಿಟ್ಟಿದೆ. ಒಂಥರಾ ಪದ್ಧತಿ ತರಹ" ನಿಮಗೆ ಅದೇ ಸರಿ ಅಂತ ಅನ್ನಿಸುತ್ತಲ್ಲ, ಆಡಿಕೊಳ್ಳು ನೆಂಟರಾಗಲೀ, ಸ್ನೇಹಿತರಾಗಲೀ, ನಿಮಗೆ ಯಾವ ಸಹಾಯವನ್ನು ಮಾಡುವುದಿಲ್ಲ. ವಾಸುಕಿಯಂತಹವನು ನಿಮ್ಮ ಅಳಿಯನಾದರೆ, ನಿಮ್ಮ ಸ್ಥಾನ ಮಾನ ಹೆಚ್ಚುತ್ತೆ. ನಿಮ್ಮ ಸ್ವಂತ ಮಗನಂತೆ ನಿಮ್ಮನ್ನ ನೋಡಿಕೊಳ್ಳುತ್ತಾನೆ. ಅಲ್ಲವೆ?"

"ಸರಿ ಬಿಡಿ. ಅವಳ ಹಣೇಲಿ ಏನು ಬರೆದಿದೆಯೋ ಹಾಗೇ ಆಗಲಿ."

"ದೇವರು ಎಲ್ಲಾವನ್ನು ನಡೆಸುವವನು ಅವನನ್ನು ನಂಬಿ. ನಿಮ್ಮ ಯಜಮಾನರಿಗೂ ಹಾಗೇ ಹೇಳಿ...,.." ತನ್ನ ಮಾತುಗಳು ಸುನಂದಳಿಗೆ ಹಿತವಾಗಲಿಲ್ಲವೆನ್ನುವುದು ಮೈಥಿಲಿಗೆ ತಿಳಿಯಿತು. ಸುನಂದ ಹೊರಟಾಗ ಕುಂಕುಮ ಕೊಟ್ಟು ನಗು ನಗುತ್ತಾ ಬೀಳ್ಗೊಟ್ಟಳು.

"ಅಮ್ಮಾ ಎಲ್ಲಿಗೆ ಹೋಗಿದ್ಯೆಮ್ಮಾ......?" ವನಜ ಕೇಳಿದಾಗ ಉತ್ತರಿಸದೇ ಒಳಗೇ ನಡೆದಳು. ಸದಾನಂದ ಹೆಂಡತಿಯನ್ನೇ ದುರುಗುಟ್ಟಿಕೊಂಡು ನೋಡಿದ.

"ಮನೆ ಕೆಲಸವನ್ನೆಲ್ಲಾ ಬಿಟ್ಟು ಎಲ್ಲಿ ಅಲೆಯುಕ್ಕೆ ಹೋಗಿದ್ದೆ."

"ನೋಡಿ ಹೀಗೆಲ್ಲಾ ಮಾತಾಡಬೇಡಿ. ಮನೆ ಕೆಲಸದ ಮೇಲೇ ನಾನು ಹೋಗಿದ್ದು. ನನಗೇನು ಜವಾಬ್ದಾರಿ ಇಲ್ಲವೇ......?"

"ಸರಿ. ಅಡಿಗೆ ಆಗಿದ್ದರೆ, ಬೇಗ ಬಡಿಸು..... ನಾಳೆದಿನ ನಾನು ಒಂದೂರಿಗೆ ಹೋಗಬೇಕಾಗಿದೆ. ಯಾರೂ ಒಂದು ವರನ ಅಡ್ರೆಸ್ ಕೊಟ್ಟಿದ್ದಾರೆ."

"ಯಾರಿಗೆ ವರ?......"

"ಇನ್ಯಾರಿಗೆ? ವನಜಂಗೇನೇ......."

"ಹಾಗಾದರೆ ಇದನ್ನು ಬಿಟ್ಟಹಾಗೇ ಅಂತೀರಾ?"

"ಮತ್ತೀನ್ನೇನು? ಸಮಾಜದಂತೆ! ಆದರ್ಶವಂತೆ!..... ಮನೇನೇ

ಸೇರುತ್ತಾನೋ ಇಲ್ಲವೋ...... ಅಂಥೋನ ಮನೇಲಿ ವನಜಾ ಹೇಗಿರ್ತಾಳೆ?"

"ಎಲ್ಲಾ ರೀತಿಯಿಂದಲೂ ಈ ಸಂಬಂಧ ಸರಿಯಾಗಿತ್ತು. ಈ ಕಾರಣಕ್ಕೆ ಬಿಟ್ಟು ಬಿಡೋದು ಅಂದ್ರೆ.... ವ್ಯಥೆಯಾಗತ್ತೆ."

"ಇವನೊಬ್ಬನೇನಾ ಗಂಡು......? ಒಬ್ಬರಲ್ಲಿ ಒಬ್ಬರು ಸಿಕ್ಕೇ ಸಿಗುತ್ತಾರೆ ಬಿಡು."

"ಅಲ್ಲಿಯೇ ಕೂತಿದ್ದ ವನಜ ತಾಟಕ್ಕನೇ ನುಡಿದಳು." ನಾನು ಮತ್ತೆ ಮತ್ತೆ ಯಾವ ಗಂಡಿನೆದುರಿಗೂ ಸಿಂಗರಿಸಿಕೊಂಡು ಬಂದು ಕೂತ್ಕೊಳಲ್ಲ. ನನಗಷ್ಟವಿಲ್ಲ. ನಾನು ವಾಸುಕಿನೇ ಮದುವೆಯಾಗ್ತೀನಿ.....

"ಇವನು ಒಪ್ಪದೇ ಇದ್ದಿದ್ದರೆ ಇನ್ನೊಬ್ಬನ್ನ ನೋಡುತ್ತಿರಲಿಲ್ಲವೇ..... ಹಾಗೇಂತ ತಿಳಕೋ..... ಹೆಣ್ಣು ಮಕ್ಕಳು, ಅಪ್ಪ ಅಮ್ಮ ಹೇಳಿದ ಹಾಗೆ ಕೇಳಬೇಕು."

"ಇಲ್ಲಪ್ಪಾ ಸಾಧ್ಯವಿಲ್ಲ. ಬೇಕಾದರೆ ನಾನು ಮದುವೆ ಇಲ್ಲದೇ ಹಾಗೇ ಇರ್ತೀನಿ."

"ನೋಡಿದ್ಯಾ ನಿನ್ನ ಮಗಳನ್ನ? ಎಷ್ಟು ಮಾತಾಡ್ತಾಳೆ?" ಹಲ್ಲು ಕಡಿದ.

"ಈಗ ನೀವು ಹೋಗಿ ನಾನು ನಿಧಾನವಾಗಿ ಅವಳಿಗೆ ತಿಳುವಳಿಕೆ ಹೇಳ್ತೀನಿ." ಸುನಂದ ಗಂಡನಿಗೆ ಸಮಜಾಯಿಷಿ ಹೇಳಿದಳು.

"ವನಜಾ, ನಿನಗೆ ವೈಭವವಾಗಿ ಮದುವೆಯಾಗಬೇಕು. ಸ್ನೇಹಿತರನ್ನ ಕರೆಯಬೇಕು. ಉಡುಗೊರೆ ಕೊಡಬೇಕು. ತಗೋಬೇಕು ಅಂತ ಆಸೆ ಇಲ್ಲವೇನೆ?" ಮಗಳ ಬಟ್ಟೆಗಳನ್ನು ಮಡಿಸಿಡುತ್ತಾ ಕೇಳಿದಳು.

"ನನಗೆ ಬೇಕಾದಷ್ಟು ಆಸೆಗಳಿವೆ. ಅದೆಲ್ಲಾ ನೆರವೇರುತ್ತಾ?....." ಇಲ್ಲ. ಇದ್ಯಾವ ಮಹಾ ಆಸೆ...... ಬಿಡಮ್ಮಾ.......

"ನೀನೇ ಹೀಗಂದ್ರೆ ಹೇಗೆ? ಒಂದು ಕೆಲಸ ಮಾಡು..... ಗೋಪಿ ಹತ್ತಿರ ಮಾತನ್ನಾಡಿ, ಆ ಹುಡುಗನಿಗೆ ಹೇಳಿಸ್ತೀಯ?"

"ಬಿಡಮ್ಮ ಅದೆಲ್ಲಾ ನಡೆಯಲ್ಲ. ಅವನಿಗ್ಯಾಕೆ ತೊಂದರೆ?"

"ನಡೆಯುತ್ತೆ. ನಿನಗೇ ಆಸೆ ಅಂತ ಅಂದರೆ ಅವನು ಒಪ್ತಾನೆ. ಇಲ್ಲದಿದ್ದರೆ ಅಪ್ಪ ನಿನಗೆ ಬೇರ ವರನ್ನ ಹುಡುಕ್ತಾರೆ. ಮತ್ತೆ ಮತ್ತೆ....."

"ಸರಿ. ನಾನು ಗೋಪಿಗೆ ವಾಸುಕೀನ ಕರೆದುಕೊಂಡು ಬಾ ಅಂತ ಹೇಳ್ತೀನಿ. ನೀವೆ ಮಾತನ್ನಾಡಿ. ನನಗೆ ಯಾವ ಚಿಂತೆಯೂ ಬೇಡ."

"ಈ ಮಾತನ್ನು ಸದಾನಂದನೊಂದಿಗೆ ಹೇಳಿದಾಗ ಅವನು ಕಿರುಚಾಡಿದ "ಇದು ನಮ್ಮ ಸ್ವಂತ ವಿಷಯ. ಅದಕ್ಕೆ ಗೋಪಿಯಾಕೆ? ಅವನೇನು ನಮ್ಮ ಮನೆಯವನೇನೆ? ಅವನು ಯಾವ ದೊಡ್ಡ ಮನುಷ್ಯ ಅಂತ.....?

"ಮೊದಲಿನಿಂದ ತಿಳಿದವನು. ಅಲ್ಲದೇ ವಾಸುಕಿಯ ಸ್ನೇಹಿತ..... ವನಜಳ ಮಾತಿಗೆ ಗೋಪಿ ಇಲ್ಲ ಅನ್ನಲ್ಲ. ಅವನನ್ನು ಒಪ್ಪಿಸ್ತಾನೆ."

"ಅಂಥಾದಾದ್ರೂ ಏಕೆ? ವನಜಂಗೇನೂ ಮದುವೆ ವಯಸ್ಸು ಮೀರಿಲ್ಲ. ಇನ್ನು ಒಂದಲ್ಲ ಅಂತ ನಾಲ್ಕಾರು ಗಂಡು ನೋಡಿದರಾಯ್ತು."

"ನಾಲ್ಕಾರು ಗಂಡುಗಳ ಎದುರಿಗೆ ಹೆಣ್ಣು ಮಕ್ಕಳು ಸಂಕೋಚದಿಂದ ಕೂತುಕೊಳ್ಳುವಾಗಿನ ಸ್ಥಿತಿ ನಿಮಗೆ ಅರ್ಥವಾಗುವುದಿಲ್ಲ. ಅಲ್ಲದೇ ನಮ್ಮ ವನಜ ಸುರಸುಂದರಿಯಲ್ಲ. ನೋಡಿದೋರೆಲ್ಲಾ ತಕ್ಷಣಕ್ಕೆ ಒಪ್ಪಿಬಿಡೋಕೆ.... ಗೊತ್ತು ತಾನೇ......"

"ಒಟ್ನಲ್ಲಿ ನನ್ನ ಮಾತನ್ನು ತಳ್ಳಿ ಹಾಕಬೇಕು. ಅದೇನು ಮಾಡ್ತೀರೋ ಮಾಡಿ. ಇನ್ನು ನಾನು ಈ ವಿಷಯಕ್ಕೆ ಬರುಲ್ಲ." ಅವನು ಮುನಿಸಿನಿಂದ ನುಡಿದಾಗ, ವನಜಗಳಿಗೆ ಏನು ಅನ್ನಿಸಲಿಲ್ಲ.

"ಹೋಗೇ ಜಲಜಾ, ಗೋಪಿ ಮನೇಲಿದ್ರೆ. ನಮ್ಮನೇಗೆ ಬರಬೇಕಾಂತೆ ಅಂತ ಹೇಳಿ ಬಾ" ಅಂತ ತಾಯಿ ಹೇಳಿದಾಗ ಅವಳಿಗೆ ಖುಷಿಯಾಗಿತ್ತು.

ಗೋಪಿ ಮನೆಯಲ್ಲಿರಲಿಲ್ಲವಾದ್ದರಿಂದ ಜಲಜ ಆಂಟಿಗೇ ಆ ವಿಷಯವನ್ನು ತಿಳಿಸಿ ಬಂದಳು. ಗೋಪಿ ತಾಯಿಯ ಮಾತಿನಂತೆ ಮಾರನೇ ದಿನ. ವಾಸುಕಿಯನ್ನು ಕರೆದುಕೊಂಡು ಅವರ ಮನೆಗೆ ಬಂದ. ಸದಾನಂದ ಮುಖ ಹುಳ್ಳಗೆ ಮಾಡಿದ, ತನಗೇನೂ ಮಾತನಾಡಲು ಇಷ್ಟವಿಲ್ಲವೆನ್ನುವಂತೆ ಅಲ್ಲಿಂದ ಹೊರಟವನನ್ನು ಸುನಂದ ತಡೆದಳು.

"ಇವತ್ತು ಅದೇನೇನು ಇತ್ಯರ್ಥವಾಗಬೇಕೋ ಎಲ್ಲಾ ಆಗಿಹೋಗಲಿ? ನೀವು ಈಗ ಎಲ್ಲಿಗೆ ಹೊರಟಿರಿ?"

"ಆ ಅಪಢ್ಢಾಳರ ಹತ್ತಿರ ಮಾತನಾಡಲು ನನಗಿಷ್ಟವಿಲ್ಲ."

"ಹಾಗಂತ? ನಿಮಗೇನೂ ಜವಾಬ್ದಾರಿ ಇಲ್ಲವೇ? ಇದು ನಮ್ಮ ಮಗಳ ಮದುವೆ ವಿಷಯ. ನಾವು ಮಾತಾಡದೇ ಇನ್ಯಾರಾಡ್ತಾರೆ?"

"ಸರಿ. ಅದ್ಯಾಕೆ ಬಂದಿದಾರೇಂತ ಕೇಳು?" ಈ ಮಾತುಗಳು ಹೊರಗೆ ಕೂತಿದ್ದ ಗೋಪಿ, ವಾಸುಕಿಯರ ಕಿವಿಗೆ ಬಿದ್ದಿತ್ತು. ವಾಸುಕಿ ಅಸಹನೆಯಿಂದ ಗೋಪಿಯ ಕಡೆ ನೋಡಿದಾಗ ಅವನು 'ಸಾರಿ' ಎನ್ನುವಂತೆ ಮುಖ

ಮಾಡಿದ.

"ಏನಯ್ಯಾ ಏನು ಗೋಪಿ? ಎಷ್ಟುದಿನವಾಯ್ತು? ನಿನ್ನನ್ನ ನೋಡಿ....."

"ಏನೋ ಕೆಲಸ..... ವನಜಳ ಮದುವೆ ಗೊತ್ತಾಗಿದೆಯಲ್ಲ. ಏನಾದರೂ ನನ್ನಿಂದ ಸಹಾಯವಾಗಬೇಕಾಗಿದ್ದರೆ ಹೇಳಿ..... ಖಂಡಿತಾ ಮಾಡಿಕೊಡ್ತೀನಿ...."

"ಹುಂ. ಹೇಳೋಣ. ಆದರೆ ಮುಖ್ಯವಾದ ಮಾತುಕತೆಗಳದ್ದೇ ಇತ್ಯರ್ಥವಾಗೊಲ್ಲ. ಇನ್ನು" ಎನ್ನುತ್ತಾ ವಾಸುಕಿಯ ಕಡೆ ನೋಡಿದಾಗ ಅವನು ನಕ್ಕ.

"ಗೋಪಿನಾಥ್ ನೀವೇ ಹೇಳಿ. ಅತೀ ಸರಳವಾಗಿ, ಸಾಮೂಹಿಕವಾಗಿ ನಡೆಯುವ ವಿವಾಹ ಸಮಾರಂಭದಲ್ಲಿ ನಮ್ಮ ಮದುವೆ ನಡೀಲಿ ಅಂತ ಹೇಳಿದೆ, ಅದು ತಪ್ಪಾ?" ವಾಸುಕಿ ನುಡಿದಾಗ ಸದಾನಂದ ತುಟಿಸೊಟ್ಟಗೆ ಮಾಡಿದ.

"ಅದರಲ್ಲೇನು ತಪ್ಪು? ಎಂಥಾ ಒಳ್ಳೆಯ ಐಡಿಯಾ? ನನಗೂ ಯಾವುದಾದರೂ ಹೆಣ್ಣು ಸಿಕ್ಕಿದರೆ ನಾನೂ ಅವತ್ತೇ ಮದುವೆ ಆಗ್ತೀವಿ. ಆ ಚಪ್ಪರದಲ್ಲಿ....." ಗೋಪಿ ತಮಾಷೆಯೆಂಬಂತೆ ಆಡಿ, ಸದಾನಂದನ ಕಡೆ ನೋಡಿದ.

"ನಾನೇ ಹುಡುಕಿ ಕೊಡ್ತೀನಿ ಬಿಡಿ.... ಆದರೆ ಇವರುಗಳಿಗೆ ಅದು ಇಷ್ಟವಿಲ್ಲ. ಆದರೆ ನನಗೆ ಅದ್ದೂರಿ ಮದುವೆ ಬೇಡ. ಈಗ ಅದೇ ಒಂದು ಭಾರಿ ಸಮಸ್ಯೆ. ನೀವು ಸ್ವಲ್ಪ ಹೇಳಿ, ಇವರುಗಳಿಗೆ....."

"ವನಜ ಏನಂತಾಳೆ ಕೇಳಿದ್ರಾ?" ಗೋಪಿ ಸದಾನಂದನ್ನ ಕೇಳಿದ.

"ಅವಳೇನಂತಾಳೆ. ನಾವು ಹೇಳಿದ ಹಾಗೆ ಕೇಳ್ತಾಳೆ."

"ಇರಲಿ ಪರವಾಗಿಲ್ಲ. ವನಜನ್ನ ಕರೀರಿ ನಾನೂ ಕೇಳ್ತೀನಿ" ಗೋಪಿ ನುಡಿದ ಅವರುಗಳೆದುರಿಗೆ ಬಂದು ನಿಂತಳು ವನಜ. ಗೋಪಿಯನ್ನು ನೋಡಿ ಅವಳು ಉತ್ಸಾಹಗೊಂಡಿದ್ದಳು. ಗೋಪಿಯೇ ಮತ್ತೆ ವಿಷಯವನ್ನು ತಿಳಿಸಿ, ಪ್ರಶ್ನಿಸಿದ.

"ನನಗೆ ಅದ್ದೂರಿ ಮದುವೆ ಬೇಡ ಮಾಂಗಲ್ಯವನ್ನು ಛತ್ರದಲ್ಲಿ ಕಟ್ಟಿಸಿಕೊಂಡರೂ ಬೆಲೆ ಇದೆ. ಚಪ್ಪರದ ಕೆಳಗೆ ಕಟ್ಟಿಸಿಕೊಂಡರೂ ಅಷ್ಟೇ ಬೆಲೆ ಇದೆ ಎಂದಳು. ವಾಹ್! ಶಹಭಾಸ್" ಎಂದ ಗೋಪಿ.......

"ಏನಯ್ಯಾ ನೀವೆಲ್ಲಾ ಸೇರಿಕೊಂಡು, ನಮ್ಮ ಮನೇಲಿ, ನನ್ನ ವಿರುದ್ಧವಾಗಿ ಮಾತಾಡ್ತಿದೀರಿ. ವನಜಂಗೆ ನೀನೇ ಹೇಳಿಕೊಟ್ಟಿರಬೇಕು.... " ಗುರುಗುಟ್ಟಿದ.

"ಇಲ್ಲಾ ಸಾರ್! ವನಜಾ ನನಗಿಂತ ತಿಳುವಳಿಕಸ್ಥೆ. ಅದಿರಲಿ, ಇದು ಹೊಸ ಪ್ರಯೋಗ. ನಿಮ್ಮ ಮಗಳ ಮದುವೆ ವಿಷಯ ಪೇಪರ್‍ನಲ್ಲಿ ಬರುತ್ತೆ. ನಿಮ್ಮ ಹೆಸರು, ನಿಮ್ಮ ಭಾವಚಿತ್ರ ಸಹ ಪೇಪರ್‍ನಲ್ಲಿ ಬರುತ್ತೆ. ಓದಿದ ಜನರು ನಿಮ್ಮನ್ನು ಹೊಗಳ್ತಾರೇ ವಿನಃ ಆಡಿಕೊಳ್ಳುವುದಿಲ್ಲ. ನೀವು ನಿಮ್ಮ ಕಡೆಯವರಿಗೆಲ್ಲ ಒಂದು ಮಾದರಿಯಾಗ್ತೀರಿ..... ಮಾದರಿ ಕನ್ಯಾಪಿತೃ!....."

"ಏನೇ ಅನ್ನಿ, ಇದು ನಮಗೆ ಮಾಡಿಸಿದ್ದಲ್ಲ. ಮುಂದೆ ಹೊಗಳುವ ಜನ ಹಿಂದೆ ಆಡಿಕೊಳ್ತಾರೆ. ಮಾದರಿ ಅನ್ನಲ್ಲ, ಮೂದಲಿಸುತ್ತಾರೆ."

"ಅಂಥೋರಿಗೆ ನೀವೇಕೆ ಬೆಲೆ ಕೊಡ್ತೀರಿ? ಮುಂದೆ ಹೊಗಳುವವರು ಹಿಂದೆಯೂ ಹೊಗಳಬೇಕು. ಇಲ್ಲದಿದ್ದರೆ ಅವರುಗಳಿಗೆ ದೊಡ್ಡ ಬುದ್ಧಿಯೇ ಇಲ್ಲ. ಅಂಥೋರಿಂದ ನಿಮಗೇನು ಪ್ರಯೋಜನ? ಅದಕ್ಕೆಲ್ಲಾ ಹೆದರಬೇಡಿ"

"ಏನೇ ಆದರೂ ಅವರುಗಳು ನೆಂಟರು. ಅವರ ಬಾಂಧವ್ಯ ಬೇಕೇ ಬೇಕು. ಬಿಡುಕ್ಕೆ ಆಗುಲ್ಲವಲ್ಲ. ಅದೆಲ್ಲಾ ಸುಲಭವಲ್ಲ."

"ಬಿಡಬೇಡಿ, ಅವರುಗಳನ್ನು ಕರೆಯಿರಿ. ಪಬ್ಲಿಕ್ ಫಂಕ್ಷನ್ ತರಹ ಬರ್ತಾರೆ ಹೋಗ್ತಾರೆ...."

"ಇಲ್ಲಪ್ಪಾ ಇದು ಸಾಧ್ಯವಿಲ್ಲ. ನನಗೆ ಸರಿಎನಿಸುವುದಿಲ್ಲ."

"ಏಕೆ ಸಾಧ್ಯವಿಲ್ಲ? ಈಗ ನೀವು ಮಾಡಿದರೆ ಸಾಧ್ಯವಾಗುತ್ತದೆ. ಜನರಿಗೂ ಒಂದು ಬದಲಾವಣೆಯನ್ನು ಗುರುತಿಸುವ ಅವಕಾಶ ಸಿಗುತ್ತದೆ. ಅದು ಈಗ ಸಧ್ಯವಾದದೇ ಸರಿ. ನಾನು, ನೀವು ವಾಸುಕಿ, ವನಜಾ.... ವಾಸುಕಿಯ ಸ್ನೇಹಿತರು, ಅವನ ಸಂಘದ ಸದಸ್ಯರು, ಎಲ್ಲರೂ ಸೇರಿ ಒಂದು ಹೊಸಾ ಪದ್ಧತಿಯನ್ನು ಜಾರಿಗೆ ತರೋಣ. ಹೀಗೆ ಒಂದು ಬದಲಾವಣೆಯಾಗಬೇಕಾದರೆ ಅದಕ್ಕೇ ಎಲ್ಲರ ಸಹಕಾರ ಬೇಕೇ ಬೇಕು. ಆಗಲೇ ಆ ಕಾರ್ಯದಲ್ಲಿ ಯಶಸ್ಸು ಸಿಗುವುದು. ನೀವು ಈಗ ಒಪ್ಪಲೇ ಬೇಕು ಸಾರ್."

"ಏನಯ್ಯಾ..... ನಮ್ಮ ಸಮಸ್ಯೆಗೆ ಉಪಾಯ ಹೇಳು ಅಂತ ಕರೆಸಿದರೆ, ನಮಗೇ ಬುದ್ಧಿವಾದ ಹೇಳ್ತಿಯಲ್ಲಾ..... ಇಂತಹ ಬದಲಾವಣೆಗೆ ನಿಮ್ಮ ತಂದೆ ಒಪ್ತಾರಾ? ಅವರನ್ನು ಒಪ್ಪಿಸಬಲ್ಲೆಯಾ?" ವ್ಯಂಗ್ಯದಿಂದ ಕೇಳಿದ.

"ಸಮಯ ಬಂದರೆ ಅವರನ್ನು ಒಪ್ಪಿಸ್ತೀನಿ. ಈಗ ಈ ಕಂಡೀಷನ್‌ಗೆ ವನಜಳೇ ಒಪ್ಪಿರುವಾಗ ಯಾಕೆ ತಕರಾರು?"

"ಅವಳಿಗೆ ತಿಳುವಳಿಕೆ ಸಾಲದು, ಹುಡುಗಿಯರು ಜೀವನದಲ್ಲಿ ಒಂದೇ

ಒಂದು ಬಾರಿ ಮದುವೆಯಾಗುವುದು ಅಂತ ವೈಭವವಾಗಿ ಮದುವೆ ಮಾಡಿಕೊಳ್ಳಲು ಇಚ್ಛಿಸುತ್ತಾರೆ. ನೀನು ವನಜಳ ತಲೆ ಕೆಡಿಸಿದೀಯ ಅಷ್ಟೇ......"

"ಹಾಗೇನಿಲ್ಲಪ್ಪಾ...... ಇದು ನನ್ನ ಅಭಿಪ್ರಾಯ ಸಹ. ನೀವು ನನಗೋಸ್ಕರ ಖರ್ಚು ಮಾಡಲು ತೆಗೆದಿಟ್ಟಿರುವ ಹಣವನ್ನು ಬ್ಯಾಂಕಿನಲ್ಲಿ ಹಾಕಿದ ಬಡ್ಡಿ ಹಣ ಬರುತ್ತೆ. ಜಲಜ ಇಷ್ಟಪಟ್ಟರೆ ಅಥವಾ ಅವಳ ಗಂಡನಾಗುವವನು ಡಿಮ್ಯಾಂಡ್ ಮಾಡಿದರೆ, ಆಗ ವಿಜೃಂಭಣೆಯಿಂದ ಮದುವೆ ಮಾಡಿ, ನಿಮ್ಮ ಆಸೆಯೂ ನೆರವೇರುತ್ತದೆ. ಮುಂದೆ ನಿಮಗೆ ಹಣದ ಅಗತ್ಯ ಬಂದಾಗ, ನಿಮ್ಮದೇ ಹಣವಿದ್ದರೆ ಬೇರೆ ಯಾರನ್ನು ಕೇಳುವ ಅವಕಾಶವೂ ಬರುವುದಿಲ್ಲ." ಅದು ಒಳ್ಳೇದಲ್ವಾ? ವನಜ ನುಡಿದಳು.

"ಹೌದು ಜನಜಾ..... ನೀವು ಹೇಳುವುದು ಸರಿ. ವೃಥಾ ಖರ್ಚ ಮಾಡವ ಬದಲು, ಮುಂದೆ ಅಗತ್ಯ ಬಿದ್ದಾಗ ಬೇಕಾಗಬಹುದು ಅಂತ ಇಟ್ಟುಕೊಂಡಿದ್ದರೆ ಖಂಡಿತಾ ಒಳ್ಳೆಯದು" ಎಂದು ವಾಸುಕಿ ಧನಿ ಗೂಡಿಸಿದಾಗ, ಸದಾನಂದ ಸುನಂದ ಮುಖ ಮುಖ ನೋಡಿಕೊಂಡರು.

ಆ ಮಾತಿನಲ್ಲಿ ಸತ್ಯವಿದೆ ಅಂತನ್ನಿಸಿತ್ತು. ತಾನಿರುವುದು ಒಂಧು ಪ್ರೈವೇಟ್ ಕಂಪೆನಿಯಲ್ಲಿ. ಆದೂ ಗುಮಾಸ್ತನಾಗಿ, ಬರುವ ಸಂಬಳವೇ ಕಡಿಮೆ. ಇನ್ನು ಕೂಡಿಡುವ ಮಾತೆಲ್ಲಿ? ರಿಟೈರ್ ಆದಮೇಲೆ ಪೆನ್ಷನ್ ಬರುವುದಿಲ್ಲ. ಮನೆಸಹ ಸ್ವಂತದಲ್ಲ. ಹೆಣ್ಣು ಮಕ್ಕಳನ್ನು ಮದುವೆ ಮಾಡಿ ಕೊಟ್ಟು ಕಳಿಸಿದರೆ, ಮುಂದೆ ಅವರುಗಳ ಜತೆ ಇರಲು ಅಳಿಯಂದಿರು ಒಪ್ಪಬೇಡನೇ? ವಾಸುಕಿಯೇನೋ ಒಳ್ಳೆಯವನಂತೆ ಕಾಣುತ್ತಾನೆ. ಮುಂದೆ ಮನೆ ಮಗನಂತೆ ನಮಗೆ ಸಹಾಯಕನಾಗಿರಲೂ ಬಹುದು, ಆಗ ನಮಗೆ ಇವನೇ ಗತಿ...... ಇವನ ಕಂಡೀಷನ್ ವಿಚಿತ್ರವಾದರೂ, ಮಾತಿನಲ್ಲಿ ನಿಜಾಂಶವಿದೆ. ಈಗ ಇವನ ಮಾತಿಗೆ ಒಪ್ಪುವುದೇ ಸರಿಯೇ ಅಂತನ್ನಿಸಿತು. "ಒಂದಿಮಿಷ ಹೀಗೆ ಬಾ" ಎಂದು ಸುನಂದಳನ್ನು ಒಳಗಿನ ಕೋಣೆಗೆ ಕರೆದ.

"ನೋಡು ಎಲ್ಲರೂ ಮತ್ತೆ ಮತ್ತೆ ಬಳಸಿ ಅದೇ ತೀರ್ಮಾನಕ್ಕೆ ಬರ್ತಿದ್ದಾರೆ. ಈಗ ಏನು ಮಾಡೋಣ ಹೇಳು?"

"ನನಗೂ ಏನೂ ತೋಚುತ್ತಿಲ್ಲ. ವಾಸುಕಿ, ಅವನ ಅಕ್ಕ ಭಾವ ಎಲ್ಲರೂ ಒಳ್ಳೆಯವರಂತೆ ಕಾಣುತ್ತಾರೆ. ತಂದೆ ಬಿಟ್ಟು ಹೋದ ಆಸ್ತಿ ಇದೆಯಂತೆ ವಿದ್ಯಾವಂತ ತಿಳುವಳಿಕಸ್ಥ, ರೂಪವಂತ, ಯಾವುದರಲ್ಲೂ

ತೆಗೆದು ಹಾಕುವಂತಿಲ್ಲ. ಎರಡು ಖರ್ಚು ಮಾಡಿ ಮದುವೆಯಾಗುವ ತಾಕತ್ತಿರುವವನು. ಆದರೆ ಅನಾವಶ್ಯಕ ಖರ್ಚುಶ್ರಮ ಏಕೆ ಅಂತ ಅವನ ಭಾವನೆ.... ಧಾರಾಳವಾಗಿ ಉಧಾಯಿಸುವ ಆಸೆಯವನಲ್ಲ. ಅವನ ಮಾತು ಸರಿ ಅಂತನ್ನಿಸುತ್ತೆ. ಆದ್ದರಿಂದ ಅವನು ಹೇಳಿದಂತೆ ಕೇಳುವುದೇ ಈಗ ಉಳಿದಿರುವ ಮಾರ್ಗ......."

"ಈಗ ಹೀಗೆ ಮಾತಾಡಿ, ನಾಳೆ ವನಜನ್ನ ಹಂಗಿಸಿ ಅಂದು ಆಡಿಗೋಳು ಹುಯ್ದುಕೊಂಡರೇ ಅಂತ....... ಆತಂಕವಾಗುತ್ತೆ."

"ಅವನೇಕೆ ಹಂಗಿಸ್ತಾನೆ? ವನಜಾನೇ ಬಜಾರಿ, ಅವನನ್ನು ಹಂಗಿಸದೇ ಬಿಡುವುದಿಲ್ಲ. ವನಜಾನೂ ಒಪ್ಪಿದ್ದಾಳಲ್ಲ. ಹೂಂ ಅಂತ ಅನ್ನಿ ಮುಂದು ನಮ್ಮದು ಅಂತ ಏನೇ ಇದ್ದರೂ, ನಮ್ಮ ಮಕ್ಕಳಿಗೇ ತಾನೇ....."

"ನನಗ್ಯಾಕೋ ಇದು ಸರಿ ಅಂತ ಅನ್ನಿಸ್ತಾನೆ ಇಲ್ಲ..... ಬಿಡುವುದಕ್ಕೂ ಮನಸ್ಸಿಲ್ಲ. ಒಂದು ವೇಳೆ ಈಗ ಒಪ್ಪಬೇಕಾಗಿ ಬೇಕಾಗಿ ಬಂದರೂ, ಈ ಸಾಮೂಹಿಕ ಮದುವೆಗೆ ನಮ್ಮ ನೆಂಟರಿಷ್ಟರು ಯಾರನ್ನು ನಾನು ಕರೆಯುವುದಿಲ್ಲ. ಆಮೇಲೆ ನನ್ನ ಇಷ್ಟದ ಪ್ರಕಾರ ವಿಜೃಂಭಣೆಯಿಂದ ರಿಸೆಪ್ಶನ್ ಇಟ್ಟುಕೊಳ್ತೀನಿ"

ಗಂಡನ ಮಾತಿನ ಜಾಡು ಅರ್ಥವಾಗಿತ್ತು. ಅವನು ಒಪ್ಪಿಕೊಂಡಿದ್ದಾನೆಂದು ಸಮಾಧಾನವಾಗಿತ್ತು. ಹೊರಗೆ ಬಂದ ಗಂಡ ಹೆಂಡತಿ ಏನೂ ಮಾತನ್ನಾಡದೇ ಸುಮ್ಮನಿರುವುದನ್ನು ಅವರುಗಳು ಗಮನಿಸಿದರು. ವಾಸುಕಿ ಎಲ್ಲರೆದುರಿಗೆ ಕೇಳಿದ.

"ಸಂಘ ಸಂಸ್ಥೆ, ಸಮಾಜಸೇವೆ ಅಂತ ಓಡಾಡುವವನು ನಾನು..... ನಿಮಗೆ ಎಷ್ಟವಿಲ್ಲದಿದ್ದರೆ ನಾನು ಬಲವಂತ ಮಾಡುವುದಿಲ್ಲ. ಆದರೆ ಮುಂದೆ ಆಕ್ಷೇಪಣೆ ಮಾಡಬಾರದು?"

"ನಿಮ್ಮ ಚಟುವಟಿಕೆಯನ್ನು ನಾನೇಕೆ ಆಕ್ಷೇಪಿಸಲಿ? ಅಲ್ವಾ ಗೋಪಿ?" ಗೋಪಿ ನಕ್ಕ. ಎಲ್ಲರಿಗೂ ಸಿಹಿ ತಿಂಡಿ ಕಾಫಿ ಆಯಿತು. ಅವರುಗಳು ಹೊರಟಾಗ, ಗೋಪಿ ವನಜಳನ್ನು ಕರೆದ. ಇವರ ಸಂಘದ ಆಫೀಸಿಗೆ ಹೋಗ್ತಾ ಇದೀನಿ. ನೀನೂ ಬರ್ತೀಯಾ?

"ನಿನಗೂ ಸದಸ್ಯನಾಗುವ ಆಸೇನಾ?" ನಕ್ಕು 'ಹೂ' ಎಂದ ಗೋಪಿ.

ಮೂವರು ಮನೆಯಿಂದ ಹೊರಟ ಸ್ವಲ್ಪ ದೂರದ ನಂತರ, ವಾಸುಕಿ ಅವರಿಬ್ಬರನ್ನೇ ಬಿಟ್ಟು ಮುಂದೆ ಹೊರಟ.

"ಪರವಾಗಿಲ್ಲ ನಮ್ಮ ಜತೆ ಇನ್ನು ಸ್ವಲ್ಪ ಹೊತ್ತು ಇರಬಹುದಲ್ಲ" ಎಂದು ಗೋಪಿ ನುಡಿದಾಗ ವಾಸುಕಿ ತಮಾಷೆ ಮಾಡಿದ.

"ಪ್ರೇಮಿಗಳನ್ನು ಒಂದು ಗೂಡಿಸುವ ಕೆಲಸ ನನ್ನದು. 'ಕಬಾಬ್ ಮೇಹಡ್ಡೀ' ಅನ್ನೋ ತರಹ..... ನಾನು ಈಗ ಇಲ್ಲಿರುವುದು ಸರಿಯಲ್ಲ."

"ಸರಿಯಪ್ಪಾ ನಿಮ್ಮಿಷ್ಟ. ನಮ್ಮಿಬ್ಬರ ಮದುವೆಗೆ ಬರುವುದನ್ನು ಮಾತ್ರ ಮರೆಯಬೇಡಿ......."

"ನಾನೇ ಸೂತ್ರಧಾರ. ನಾನು ಬರದಿದ್ದರೆ ಹೇಗೆ? ಅಂದ್ಹಾಗೇ ಒಂದ್ಮಾತು ಗೋಪಿನಾಥ್. ನಾನು ನಿಮ್ಮ ತಂದೇನ ನೋಡಿ ಮಾತಡಬೇಕಲ್ಲ."

"ಅವರು ಮನೇಲಿ ಸಿಗುವುದೇ ಕಷ್ಟ. ಪೋಲಿಸ್‌ಸ್ಟೇಷನ್‌ಗೇ ಹೋದರೆ ಖಂಡಿತಾ ಸಿಗ್ತಾರೆ."

"ಪೋಲಿಸ್ನೋರ್ನ ನೋಡಬೇಕು ಅಂದ್ರೆ ಪೋಲಿಸ್‌ಸ್ಟೇಷನ್‌ಗೇ ಹೋಗಬೇಕು. ಆ ಅನುಭವ ನನಗೂ ಇದೆ" ಎಂದಳು ವನಜಾ ನಗುತ್ತಾ....

"ಇನ್ನು ಮೇಲೆ ಅಂಥಾ ಕಷ್ಟ ನಿನಗೆ ಬರುಲ್ಲ. ಎಲ್ಲಿದ್ದರೂ ರಾತ್ರಿ ಮನೆಗೆ ಬಂದೇ ಬರ್ತೀನಲ್ಲ.... ಊಟಕ್ಕೆ"?....... ವಾಸುಕಿ ನಕ್ಕು ಪ್ರಶ್ನಿಸಿದ

"ನಿಮ್ಮ ತಂದೆ ಹೇಗೆ......? ತತ್‌ಕ್ಷಣ ವನಜಾ ನುಡಿದಳು."

"ಗಿರಿಜಾ ಮೀಸೆ..... ಕೂಡಿಕೊಂಡ ಹುಬ್ಬುಗಳು ಸಿಡುಕು ಮುಖ ಕೈಯಲ್ಲಿ ದೊಣ್ಣೆ.... ಮಾತಲ್ಲಿ ಜೋರು, ತನ್ನದೇ ಸರಿ ಎನ್ನುವಭಾವನೆ" ಹೌದು ವಾಸುಕಿ. ವನಜ ಹೇಳಿದ್ದು ಸರಿ. ಅದಕ್ಕೇ ತಾನೇ ಈಗ ನಿಮ್ಮ ಸಹಾಯ ಬೇಕಾಗಿರುವುದು. ಮುಂದೆ ನಿಮ್ಮ ಯೋಚನೆ ಏನು?

"ನಿಮ್ಮ ತಂದೆಯ ಹತ್ತಿರ ಮಾತನಾಡಿದ ನಂತರ ತಿಳಿಸ್ತೀನಿ. ಓ.ಕೆ."

ಓ.ಕೆ. ಗುಡ್‌ನೈಟ್ ಎಂದು ಅವನು ತಿರುಗಿ, ತಿರುವಿನಲ್ಲಿ ಮರೆಯಾಗುವವರೆಗೂ ವನಜಾ ಗೋಪಿ ಹಾಗೇ ನಿಂತಿದ್ದರು.

"ಗೋಪಿ ಈ ನಿಮ್ಮ ಪ್ಲಾನ್ ನನ್ನ ತಲೆಗಂತೂ ಹೋಗಿಲ್ಲ, ನನಗ್ಯಾಕೋ ಭಯವೇ ಆಗುತ್ತೆ. ನಮ್ಮಪ್ಪ ಒಂದು ರೀತಿ, ನಿಮ್ಮಪ್ಪ ಒಂದು ರೀತಿ. ಈವಾಸುಕಿಯ ನಾಟಕದ ಅಂತ್ಯ ಎಲ್ಲಿಗೆ ಎಳೆದೊಯ್ಯುತ್ತೋ.......?"

"ಕಡೇಗೆ ನಿನ್ನನ್ನ ನನ್ನ ಮನೆಗೆ ಕರೆತಂದು ತಲುಪಿಸುತ್ತೆ ಧೈರ್ಯವಾಗಿರು, ಈಗ ಈ ಮಾತು ಸಾಕು."

"ನಿನಗೆ ಆತಂಕವೇ ಆಗುಲ್ವಾ?"

"ಒಂದೊಂದು ಸಲ ಆಗುತ್ತೆ. ಆದರೆ, ಅದೇನೇನು ಆಗಬೇಕೋ

ಅದು ಆಗಿತೀರುತ್ತೆ, ಅಲ್ವಾ! ಒಟ್ಟನಲ್ಲಿ ನಮ್ಮಿಬ್ಬರಲ್ಲಿ ಒಬ್ಬರು ನಿನ್ನನ್ನು ಮದುವೆಯಾಗುವುದು ಮಾತ್ರ ಖಂಡಿತಾ....."

"ನಿನಗೆ ಈಗಲೂ ತಮಾಷೇನಾ? ನಾನು ಯಾವುದೇ ಕಾರಣಕ್ಕೂ ಅವನನ್ನು ಮದುವೆಯಾಗುವುದಿಲ್ಲ. ನೀನು ಹೆದರಿಸಬೇಡ....."

"ಈ ಬೆಳದಿಂಗಳು, ಹಿತವಾದ ಗಾಳಿ, ಇಲ್ಲಿಂದ ಕದಲುವುದೇ ಬೇಡ ಅಂತ ಅನ್ನಿಸ್ತಿದೆ ಅಲ್ವಾ? ಅವಳ ಭುಜ ಹಿಡಿದ."

"ಪ್ಲೀಸ್ ಗೋಪಿ, ಯಾರಾದ್ರೂ ನೋಡಿಯಾರು......?"

"ಹೌದು, ನಿಮ್ಮಪ್ಪ ನಮ್ಮ ಹಿಂದೆ ಬಂದಿದ್ದರೂ ಬಂದಿರಬಹುದು. ಸ್ಪೈ ಮಾಡುಕ್ಕೆ"

"ನಮ್ಮಪ್ಪನಿಗೆ ಸರಿಯಾಗಿ ಸ್ಪೈ ಕೂಡಾ ಮಾಡುಕ್ಕೆ ಬರುಲ್ಲ. ನಾವಿಬ್ರೆ ಇರುವುದನ್ನು ಕಂಡ ಕೂಡಲೇ ನನ್ನನ್ನು ಕರೆದಿರುತ್ತಿದ್ದರು."

"ಸರಿ ನಡೀ..... ನಿಮ್ಮ ಮನೇತನಕ ಬರ್ತೀನಿ." ಹೆಜ್ಜೆ ಹಾಕಿದರು.

"ಪ್ಲೀಸ್ ಗೋಪಿ, ನನಗೆ ದ್ರೋಹ ಮಾತ್ರ ಮಾಡಬೇಡ. ನನಗೆ ಅದೇ ಚಿಂತೇಲಿ ನಿದ್ದೆ ಸಹ ಬರುಲ್ಲ....."

"ಕನಸ್ನಲ್ಲಿ ನಾನು ಬರ್ತೀನೋ..... ವಾಸುಕಿ ಬರ್ತಾನೋ?"

"ಇಬ್ಬರೂ ಅಲ್ಲ. ನಿದ್ದೆನೇ ಬರುಲ್ಲ. ಕನಸೆಲ್ಲಿಂದ ಬಂತು?"

"ನನಗೆ ಮಾತ್ರ ಗಡದ್ದಾಗಿ ನಿದ್ದೆ ಬರುತ್ತೆ. ನಿದ್ದೆ ಬರದಿದ್ದರೆ ಎದುಕೂತು ಎರಡು ಸಿಗರೇಟು ಸೇದುತ್ತೀನಿ:... ಎರಡು ಪೆಗ್ ವ್ಹಿಸ್ಕಿ ತಗೋತೀನಿ....."

"ಆಂ ಏನಂದೆ?...... ಸಿಗರೇಟು, ಕುಡಿತ.....?"

"ಮತ್ತಿನ್ನೇನು ಮಾಡಲಿ? ನನಗೂ ಆತಂಕ..... ಆದರಿಂದಲೇ ಈದುರಭ್ಯಾಸಗಳು ನೀನು ಬಂದು ಬಿಡು. ಎಲ್ಲಾ ಬಿಟ್ಟು ಬಿಡ್ತೀನಿ......"

"ನೀನು ಬರದಿದ್ದರೆ ನಾನೂ ಎಲ್ಲಾ ಅಭ್ಯಾಸ ಮಾಡಿಕೊಳ್ತೀನಿ ಅಷ್ಟೆ.... ಗೋಪಿ ಸುಳ್ಳು ಹೇಳುತ್ತಿದ್ದಾನೆಂದು ತಿಳಿದಿತ್ತು. ನಗುತ್ತಾ ಅವನ ಕೈ ಮುಟ್ಟಿ ಬೈ ಹೇಳಿಒಳಗೆ ಹೋದಳು. ಸದಾನಂದ ಸುನಂದ ಅವಳನ್ನೇ ವಿಚಿತ್ರವಾಗಿ ನೋಡಿದರು. ಅದನ್ನು ಗಮನಿಸಿದವಳಂತೆ ವನಜಾ ಬಚ್ಚಲು ಮನೆಯ ಕಡೆ ನಡೆದಳು."

"ನಮ್ಮ ಮಕ್ಕಳಿಗೇ ನಮ್ಮ ನೀತಿ ರೀತಿ ಸರಿ ಹೋಗುವುದಿಲ್ಲ. ಇನ್ನು ಬೇರೆಯವರಿಗೆ ತಿಳುವಳಿಕೆ ಹೇಳಲು ನಾವ್ಯಾರು?" ಸುನಂದ ನುಡಿದಾಗ ಅವನು ರೇಗಿದ.

"ಇದಕ್ಕೆಲ್ಲಾ ನೀನೇ ಕಾರಣ. ನಿನ್ನ ಮಕ್ಕಳನ್ನಾ ಬೆಳೆಸಿರುವ ರೀತಿ ಇದು. ಮೊದಲ್ನಿಂದ ಹೊಡೆದು ಬಡಿದು ಬುದ್ಧಿ ಕಲಿಸಿದ್ದರೆ, ಈದಿನ ನಮ್ಮ ಎದುರಿಗೆ ನಿಂತು ಮಾತನಾಡುವ ಧೈರ್ಯ ಅವಳಿಗೆ ಬರುತ್ತಿರಲಿಲ್ಲ."

"ಹೆಣ್ಣು ಮಕ್ಕಳಿಗೆ ಯಾರಾದ್ರೂ ಹೊಡೀತಾರ್‍ಯೆ?"

"ಹೆಣ್ಣು ಮಕ್ಕಳು ತಗ್ಗಿ ಬಗ್ಗಿ ನಡಯದಿದ್ದರೆ ಈಗೇನೋ ಆಮನೇಲಿ ಅತ್ತೆ ಮಾವ ಇಲ್ಲ, ಸರಿ ಹೋಯ್ತು... ಇಲ್ಲದಿದ್ದರೆ ನಿನ್ನನ್ನೇ ಅನ್ನುತ್ತಿದ್ದರು. ಹಾಗೆ ಬೇಳೇಸಿದೀಯ..... ನೀನು"

"ಸದಾ ನಿಮಗೆ ನನ್ನನ್ನು ಅನ್ನುವುದೇ ಆಯ್ತು.... ಮೊದಲೆಲ್ಲಾ ಗಂಡು ಮಕ್ಕಳಾಗಲಿಲ್ಲ. ಅಂತ ನನ್ನನ್ನೇ ಅಂದಿರಿ. ಈಗ ಸರಿಯಾಗಿ ಬೆಳೆಸಿಲ್ಲ ಅಂತಾ ಅಂತಿದೀರಿ..... ನನ್ನಷ್ಟೇ ಜವಾಬ್ದಾರಿ ನಿಮಗೂ ತಾನೇ.... ಒಂದು ದಿನವಾದರೂ ಮಕ್ಕಳು ಹೇಗಿದ್ದಾರೆ ಅಂತ ವಿಚಾರಿಸಿದ್ರಾ?"

"ನನಗೆ ಬಿಡುವೆಲ್ಲಿತ್ತು? ಬರೋ ಸಂಬಳ ಸಾಕಾಗುಲ್ಲ. ಅಂತ ಪಾರ್ಟ್ ಟೈಂ ಕೆಲಸಕ್ಕೆ ಹೋಗ್ತಿದ್ದೆ. ರಾತ್ರಿ ಬರುತ್ತಿದ್ದುದೇ ಒಂಭತ್ತಕ್ಕೆ. ಊಟ ಮಾಡಿ ನಿದ್ದೆ ಮಾಡಿರುತ್ತಿದ್ದರು ಇಬ್ಬರೂ......"

"ಒಟ್ಟಿನಲ್ಲಿ ಯಾವುದೂ ಸರಿ ಹೋಗಲಿಲ್ಲ. ಮುಂದೆ ಇನ್ನು ಏನೇನಾಗ ಬೇಕಾಗಿದೆಯೋ.....? ಖರ್ಚು ವೆಚ್ಚವೇ ಇಲ್ಲದ ಮೇಲೆ ಏನು ತಯಾರಿ ಇದೆ? ಅದೇನು ಬೇಕೋ ಎಲ್ಲಾ ಅವನೇ ಮಾಡಿಕೊಳ್ತಾನೆ.....?"

"ಸಧ್ಯ ನಾಲ್ಕು ಜನರೆದುರಿಗೆ ನಗೆಪಾಟಲಾಗದಿದ್ದರೆ ಸಾಕು......"

"ಸುನಂದಾ...... ನಮ್ಮ ಜಲಜೀಗೆ ಮಾತ್ರ ಇಂಥಾ ಗಂಡನ್ನು ನೋಡುಲ್ಲ."

"ಹಿರಿಯಕ್ಕನ ಚಾಳಿ ಮನೆ ಮಂದಿಗೆಲ್ಲ ಅಂತ..... ಅವಳೇನೇನು ಹೇಳ್ತಾಳೋ..... ಬೇಗ ಬನ್ರೇ ಊಟಕ್ಕೆ ಅನ್ನ ಬಡಿಸಿ, ಆಗಿದೆ. ಆರಿ ಹೋಗುತ್ತೆ" ತಾಯಿ ಕೂಗು ಹಾಕಿದಾಗ ಜಲಜ ಓಡಿ ಬಂದಳು. ಅಕ್ಕ....ಎಂದು ಕರೆದಾಗ ವನಜಾ ಒಳಕ್ಕೆ ಬಂದಳು. ಒಳಬಾಗಿಲಿನಲ್ಲಿ ನಿಂತು ಅವಳು ತಂದೆ ತಾಯಿಯರ ಮಾತನ್ನು ಕದ್ದು ಕೇಳಿಸಿಕೊಂಡಿದ್ದಳು. ಬೇಸರವಾಗಿತ್ತು.

ಏನು ಮದುವೆಯೋ..... ಸಂಸಾರವೋ..... ಹೆಣ್ಣಾಗಿ ಹುಟ್ಟಬಾರದು, ಹುಟ್ಟಿದರೂ, ಇಂಥೋರ ಮನೇಲಿ ಖಂಡಿತಾ ಹುಟ್ಟಬಾರದು ಅಂತ ಅಂದುಕೊಂಡಳು. ಮರುಗಳಿಗೆಯೇ ಮೈಥಿಲಿಯ ನೆನಪಾಗಿತ್ತು. ಅವರ ಮನೆಗೆ ಸೊಸೆಯಾಗಿ ಹೋಗಿ, ಮಗಳಂತೆ ಇರಬೇಕು. ಎಂದುಕೊಂಡಗ ಗೋಪಿಯ ನೆನಪಾಗಿತ್ತು.

ಈ ರಾತ್ರಿ ನನ್ನ ಕನಸಿನಲ್ಲಿ ಗೋಪಿಯೇ ಬರಬೇಕು. ಎಂದುಕೊಂಡು ಅವನನ್ನೇ ಧ್ಯಾನಿಸುತ್ತಾ ಊಟ ಮಾಡಿದಳು.

"ಎಲ್ಲಿದೇ ನಿನ್ನ ಧ್ಯಾನ? ಅನ್ನ ಹಾಕಲಾ?" ತಾಯಿ ಗದರಿದಾಗ ಎಚ್ಚೆತ್ತು ನಕ್ಕಳು.

ವಾಸುಕಿ ಮೊದಲೇ ಸಮಯವನ್ನು ನಿಗದಿಪಡಿಸಿಕೊಂಡು, ಗೋಪಿಯ ತಂದೆಯನ್ನು ಬೇಟಿಯಾದ. "ನಾನು ವಾಸುಕಿ ಅಂತ.... ಇವರು ನನ್ನ ಸ್ನೇಹಿತರು ನಾವುಗಳೆಲ್ಲ ಸೇರಿ ಒಂದು ಸಂಘವನ್ನು ನಡೆಸುತ್ತಿದ್ದೇವೆ....."

"ಅದಕ್ಕೇ..... ನಾನೇನು ಮಾಡಬೇಕು? ಒರಟಾಗಿ ಕೇಳಿದರು.....?"

"ದಯವಿಟ್ಟು ಬೇಜಾರು ಮಾಡ್ಕೋಬೇಡಿ ಸಾರ್. ನಾವು ಯಾವ ಚಂದಾ ವಸೂಲಿ ಮಾಡುಕ್ಕೆ ಬಂದಿಲ್ಲ. ಪ್ರತಿ ವರ್ಷವೂ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸುತ್ತೇವೆ. ಸ್ಪರ್ಧೆಗಳು, ಸಂಗೀತ, ಕಚೇರಿಗಳು, ದಸರಾ ಹಬ್ಬ ಗಣಪತಿ ಹಬ್ಬ ಮಕ್ಕಳ ದಿನಾಚರಣೆ, ಸಂಗೀತ ಸಮಾರಂಭ ರಾಜ್ಯೋತ್ಸವ ಹೀಗೆ ಅನೇಕ ಕಾರ್ಯಕ್ರಮಗಳನ್ನು ನಡೆಸುತ್ತಲೇ ಬಂದಿದ್ದೇವೆ. ಈಚೆಗೆ ನಾಲ್ಕು ವರ್ಷಗಳಿಂದ ಸಮೂಹಿಕ ವಿವಾಹವನ್ನು ನಡೆಸುವ ಯೋಜನೆಯನ್ನು ಸಹ ಹಾಕಿಕೊಂಡಿದ್ದೇವೆ."

"ಅಂದರೇ...... ನನಗೇಕೆ ಹೇಳ್ತಾ ಇದೀರಿ ಇದನ್ನೆಲ್ಲಾ..'

"ಜನರ ಅಭಿಲಾಷೆಯಂತೆ, ಅನುಕೂಲಕ್ಕೆ ತಕ್ಕಂತೆ, ಸರಳವಾಗಿ ಹಿತಮಿತವಾದ ಖರ್ಚು ಮಾತ್ರ ಮಾಡಿ, ಮದುವೆಯ ಕಾರ್ಯವನ್ನು ನಡೆಸುತ್ತೇವೆ. ಸಾಮೂಹಿಕ ಧರ್ಮೋಪನಯವನ್ನು ನಡೆಸಿದ್ದೇವೆ. ಈ ಸಾರಿ, ಹತ್ತಾರು ಜೋಡಿ ಮದು ಮಕ್ಕಳು ದಂಪತಿಗಳಾಗಲಿದ್ದಾರೆ...."

"ಸರಿ.... ಆದರೆ ನನಗೆ ಈ ಸಂಘ ಸಂಸ್ಥೆಗಳಲ್ಲಿ ಆಸಕ್ತಿಇಲ್ಲ."

"ನಿಮ್ಮಂಥೋರೇ ಹೀಗೆ ಅಂದ್ರೆ ಹೇಗೆ ಸಾರ್? ನಿಮ್ಮಂತಹವರು ನಮಗೆ ಪ್ರೋತ್ಸಾಹ ಕೊಡಬೇಕು. ಉತ್ಸಾಹ ಹೆಚ್ಚುತ್ತೆ. ನಮ್ಮದೂ ಒಂದು ತರಹದಲ್ಲಿ ಸಮಾಜಸೇವೇನೆ. ನೀವಂತೂ ಸಮಾಜ ಸೇವಕರು. ಪ್ರಜಾಸೇನಕರು, ದೇಶದ ಉನ್ನತಿಗಾಗಿ ನಿಮ್ಮ ಜೀವನವನ್ನೇ, ಮೀಸಲಾಗಿಟ್ಟಿರುವವರು. ಆದರೂ ನಮ್ಮಿಬ್ಬರ ಗುರಿ ಒಂದೇ ಅಲ್ಲವೇ......?"

"ನಿಮ್ಮ ಸಮಾಜ ಸೇವೆಯ ಬಗ್ಗೆ ತಲೆ ಕೆಡಿಸಿಕೊಳ್ಳಲು ನನಗೆ ಸಮಯವಿಲ್ಲ. ನನ್ನಿಂದ ನಿಮಗೆ ಯಾವ ಪ್ರೋತ್ಸಾಹವಾಗಲೀ ಸಮಯವಾಗಲೀ ಸಿಗುವುದಿಲ್ಲ."

"ಛೆ...ಛೆ... ಹಾಗಾದ್ರೆ ಹೇಗೆ ಸಾರ್? ಮುಂದಿನ ತಿಂಗಳು ನಡೆಯುವ ನಮ್ಮ ಸಂಘದ ವಾರ್ಷಿಕ ಸಮಾರಂಭದ ಸಮಯದಲ್ಲಿ ನಮಗೆ ಪೋಲಿಸ್ ರಕ್ಷಣೆ ಬೇಕೇ ಬೇಕು. ಜನರು ಸೇರ್ತಾರೆ. ದೊಂಬಿ ಗಲಾಟೆ ನಡೆದರೂ ನಡೆಯಬಹುದು."

"ಪೋಲಿಸ್ ರಕ್ಷಣೆ ಕೊಡುವುದು ನಮ್ಮ ಇಲಾಖೆಯ ಕರ್ತವ್ಯ....."

"ನಿಮ್ಮ ಕರ್ತವ್ಯದಿಂದ ನಮ್ಮಂತಹವರಿಗೆ ಸಹಾಯವೇ ತಾನೇ..... ಇನ್ನು ಒಂದು ಮುಖ್ಯವಾದ ವಿಷಯವನ್ನು ಮಾತನಾಡಲು ಬಂದಿದ್ದೇನೆ."

"ಅದೇನು ಬೇಗ ಹೇಳಿಬಿಡು. ನನಗೆ ಬೇರೆ ಕೆಲಸವಿದೆ."

"ಈ ಸಲದ ನಮ್ಮ ಸಂಘದ ಸಮಾರಂಭಕ್ಕೆ ನೀವು ಮುಖ್ಯ ಅತಿಥಿಯಾಗಿ ಬಂದು, ಉದ್ಘಾಟನೆಮಾಡಿ ನಮ್ಮ ಸಂಘದ ಚಟುವಟಿಕೆಯ ಬಗ್ಗೆ ನಾಲ್ಕು ಮಾತನಾಡಿ, ಹರಸಬೇಕು..... ಇದು ನಮ್ಮ ಕೋರಿಕೆ......"

"ಆತ ಮೀಸೆಯಡಿಯಲ್ಲಿ ನಕ್ಕಿದ್ದನ್ನು ವಾಸುಕಿ ನೋಡಿದ."

"ನನಗೆ ಬಿಡುವಿಲ್ಲಯ್ಯಾ. ಬರಲಾಗುವುದಿಲ್ಲ."

"ಹಾಗೆನ್ನ ಬೇಡಿ ಸಾರ್. ನಮಗೋಸ್ಕರ ಬಿಡುವು ಮಾಡಿಕೊಳ್ಳಿ. ಸ್ವಲ್ಪ ಹೊತ್ತಿನ ಕಾರ್ಯಕ್ರಮ ಅಷ್ಟೆ. ನೀವು ಬಂದು ವೇದಿಕೆಯ ಮೇಲೆ ಕೂತರೆ, ಕಾರ್ಯಕ್ರಮಕ್ಕೆ ಅದೇ ಒಂದು ಕಳೆ. ಯಾವ ಗೌಜು ಗಲಾಟೆ ಇಲ್ಲದೇ ಕಾರ್ಯಕ್ರಮ ಸುಗಮವಾಗಿ ನೆರವೇರುತ್ತದೆ."

"ಏನಯ್ಯಾ ಬಹಳ ಹೊಗಳ್ತಿದೀಯಾ.... ನನಗೆ ಇದೆಲ್ಲ ಅಭ್ಯಾಸವಿಲ್ಲ. ನನಗೆ ಭಾಷಣ ಗೀಷಣ ಮಾಡುಕ್ಕೆ ಬರುಲ್ಲ."

"ನಾವು ಬರೆಸಿ ತಯಾರಿಸಿ ಕೊಡ್ತೀನಿ. ನೀವು ಅದನ್ನು ಓದಿದರೆ ಸಾಕು. ನೀವು ಒಪ್ಪಿಕೋ ಬೇಕು. ನಿಮ್ಮ ಹೆಸರು ಪೇಪರ್ನಲ್ಲಿ ಬರುತ್ತೆ."

"ನನ್ನ ಮಗ ಗೋಪಿಯೂ ಪೋಲಿಸ್ ಅಧಿಕಾರಿ ಅವನನ್ನು ಕೇಳಿ. ಅವನು ಬಂದರೂ ಬರಬಹುದು."

"ಅವರೂ ಬರಲಿ, ನಿಮ್ಮ ಕುಟುಂಬದವರೆಲ್ಲರೂ ಬರಲಿ, ಆದರೆ ಭಾಷಣ ಮಾತ್ರ ನೀವೇ ಮಾಡಬೇಕು. ಅವರು ಚಿಕ್ಕವರು ನಿಮ್ಮ ಅನುಭವ ಅವರಿಗೆಲ್ಲಿದೆ? ನೀವೇ ಮುಖ್ಯ ಅತಿಥಿ ಅಂತ ನಾವುಗಳು ತೀರ್ಮಾನಿಸಿಬಿಟ್ಟಿದ್ದೇವೆ?"

"ನನ್ನನ್ನು ಒಂದ್ಮಾತು ಕೇಳದೇ ಅದ್ಹೇಗಯ್ಯಾ ತೀರ್ಮಾನಿಸಿದೆ?"

"ನೀವು ನಿಮ್ಮ ಇಲಾಖೆಯಲ್ಲಿ ಒಳ್ಳೆಯ ಹೆಸರನ್ನು ಪಡೆದಿದ್ದೀರಿ.

ನಿಮ್ಮ ನಿಷ್ಠಾವಂತ ಸೇವೆಗೆ ಪುರಸ್ಕಾರಗಳು ಸಿಕ್ಕಿವೆ. ಇದನ್ನೆಲ್ಲಾ ನಾವು ತಿಳಿದೇ ನಿಮ್ಮ ಬಳಿಗೆ ಬಂದಿದ್ದೇವೆ."

"ಪೋಲಿಸ್ ಅಧಿಕಾರಿಯ ಮುಖದಲ್ಲಿ ಮುಗುಳ್ನಗೆ ಮೂಡಿತು. ಮಂದಹಾಸದಿಂದ ನುಡಿದರು." ನೀನು ಇಷ್ಟು ಹೇಳ್ತಿದೀಯಲ್ಲಾಅಂತ ನಾನು ಒಪ್ಪಿ ಕೊಳ್ತಿದೀನಿ. ಯಾವ ದಿನ, ಯಾವ ಸಮಯ ಎನ್ನುವುದನ್ನು ಸರಿಯಾಗಿ ಗುರುತು ಹಾಕಿಕೊಡಬೇಕು. ಹಾಗೇ ನನಗೆ ಮುಂಚಿತವಾಗಿ ತಿಳಿಸಬೇಕು.

"ಆಗಲಿ ಸಾರ್. ಎಲ್ಲಾ ಜವಾಬ್ದಾರಿ ನಮ್ಮದು. ನೀವು ದಯಮಾಡಿ ಒಪ್ಪಿಕೊಂಡಿರಲ್ಲ. ಅದು ಮುಖ್ಯ ಎನ್ನುತ್ತಾ ಕೈ ಮುಗಿದು ತನ್ನ ಸ್ನೇಹಿತರೊಂದಿಗೆ ಹೊರಬಂದ."

ಸೀದಾ ಗೋಪಿಯ ಮನೆಗೆ ಬಂದ. ತಲೆಯಿಂದ ಒಂದು ಹೊರೆಯನ್ನು ಇಳಿಸಿದಂತಾಗಿತ್ತು. ಮೈಥಿಲಿಯ ಹತಿರ ಮಾತನಾಡಿ ಎಲ್ಲಾ ವಿಷಯವನ್ನು ತಿಳಿಸಿದ. ಇದುವರೆಗೂ ಎಲ್ಲಾ ನಾನು ಅಂದುಕೊಂಡಂತೆಯೇ ಆಗಿದೆ. ನೀವೇನೂ ಚಿಂತಿಸಬೇಡಿ....... ಎಂದ.

"ನನಗೆ ಗೋಪಿ ಹೇಗೋ, ನೀನು ಹಾಗೇ..... ಕಣಪ್ಪಾ....." ಬೇಸರ ಮಾಡಿಕೊಂಡಿಲ್ಲ ತಾನೇ ಕಳವಳದಿಂದ ಕೇಳಿದಳು.

"ಅವರು ಗೋಪಿ, ನಾನು ವಾಸುಕಿ, ಇಬ್ಬರೂ ಸಹೋದರರೇ ತಾನೆ....." ಹಾಸ್ಯಮಾಡಿ ನಕ್ಕ.

"ನೀನು ಬಹಳ ಚೆನ್ನಾಗಿ ಮಾತಾಡ್ತೀಯಾಪ್ಪಾ..... ನನಗೆ ತುಂಬ ಇಷ್ಟವಾಯಿತು." ಹೊಗಳಿದಳು.

"ಸಂಘ, ಸಂಸ್ಥೆಗಳಲ್ಲಿ ಕೆಲಸ ಮಾಡುವಾಗ, ಮಾತು ಮುಖ್ಯ. ಅದರಲ್ಲೂ ಪೋಲಿಸ್ ಅಧಿಕಾರಿಗಳ ಹತ್ತಿರ ಹೇಗೆ ಮಾತನಾಡಬೇಕು ಎನ್ನುವುದು ಇವತ್ತು ತಿಳೀತು."

"ದೇವರು ನಿನ್ನನ್ನು ಚೆನ್ನಾಗಿಟ್ಟರಲಿ, ಇಬ್ಬರು ಪ್ರೇಮಿಗಳನ್ನು ಸೇರಿಸಿದ ಪುಣ್ಯ ನಿನಗೆ ಬರುತ್ತದೆ."

"ಆಂಟೀ, ನೀವೂ ಅಂಕಲ್‌ಗೆ ಹೆದರ್ತೀರಲ್ಲ. ಯಾಕೆ?"

"ಹೆದರಿಕೆ ಅಲ್ಲ..... ಮಾತುಕತೆ ಹೆಚ್ಚಾದರೆ ಗೋಪಿಗೆ, ತೊಂದರೆ. ಹಾಗಾಗಬಾರದು ಅಂತ ಅಷ್ಟೇ. ವನಜಾ ಈ ಮನೆಗೆ ಸೊಸೆಯಾಗಿ ಬಂದರೆ ಸಾಕು."

"ಈಗ ಈ ಹೊಣೆಯನ್ನು ಈ ವಾಸುಕಿ ಹೊತ್ತಿದ್ದಾನೆ. ನೀವು

ನಿಶ್ಚಿಂತೆಯಿಂದ ಇರಿ." ಎಂದು ಆಶ್ವಾಸನೆ ಕೊಟ್ಟು ಮೈಥಿಲಿ ಕೊಟ್ಟ ಕಾಫಿಯನ್ನು ಕುಡಿದು ಅಲ್ಲಿಂದ ಹೊರಟ.

ದಿಢೀರನೆ ಬಂದಿಳಿದ ಜಾನಕಿಯನ್ನು ಅವಳ ಮಗಳನ್ನು ಕಂಡು ಮೈಥಿಲಿಗೆ ಆಶ್ಚರ್ಯವಾಯಿತು. ಚಿಕ್ಕವಯಸ್ಸಿನಲ್ಲೇ ಮದುವೆಯಾಗಿದ್ದ ಜಾನಕಿ, ಪರಶುರಾಮರವರ ತಂಗಿ. ಹೆಚ್ಚು ಅನುಕೂಲಸ್ಥರಲ್ಲದವರ ಮನೆಗೆ ಸೊಸೆಯಾಗಿ ಹೋದವಳು ಜಾನಕಿಯ ಕಿರಿ ಕಿರಿ ತಪ್ಪಿದ್ದೇ ಇಲ್ಲ. ಅಣ್ಣನನ್ನು ಆಗಾಗ ಪೀಡಿಸುತ್ತಲೇ ಇದ್ದಳು. ಮೈಥಿಲಿಗೆ ಬಾಣಂತನ ಮಾಡುವ ನೆಪದಲ್ಲಿ ಬಂದಿದ್ದ ಜಾನಕಿಗೆ, ಮೈಥಿಲಿಗೆ ಅವಳಿ ಮಕ್ಕಳು ಹುಟ್ಟಲಿರುವ ವಿಚಾರ ತಿಳಿದು ಸ್ವಲ್ಪ ಮಟ್ಟಿಗೆ ಅಸೂಯೆಯೂ ಆಗಿತ್ತು.

"ನನಗೆ ಮದುವೆಯಾಗಿ ಎಂಟು ವರ್ಷವಾಯಿತು. ಮಕ್ಕಳಾಗಿಲ್ಲ. ನಿನ್ನ ಹೆಂಡತಿಗೆ ಅವಳಿ ಮಕ್ಕಳಾಗುತ್ತಿವೆಯಲ್ಲ...." ಎಂದು ದುಗುಡವನ್ನು ಹೊರಗೆಡವಿದ್ದಳು ತನ್ನ ಅಣ್ಣನೊಡನೆ,

"ಡಾಕ್ಟರು ಆ ವಿಷಯವನ್ನು ನನಗೆ ಮಾತ್ರ ತಿಳಿಸಿದ್ದಾರೆ....ಏಕೆಂದರೆ ಸಿಸೇರಿಯನ್ ಆಪರೇಷನ್ ಮಾಡಬೇಕಾಗಬಹುದು ಅಂತ ಅವರ ಅಭಿಪ್ರಾಯ."

"ಹಾಗಾದರೆ ಮೈಥಿಲಿಗೆ ಈ ವಿಷಯ ಗೊತ್ತಿಲ್ಲವಾ?"

"ಗೊತ್ತಿಲ್ಲ. ಅವಳಿಗೆ ಸ್ವಲ್ಪ ಬಿ. ಪಿ. ಇದೆ. ಈಗಲೇ ತಿಳಿಸಬೇಡಿ ಎಂದಿದ್ದಾರೆ. ಅವಳು ತುಂಬಾ ಸೂಕ್ಷ್ಮ." ನೀನು ಅವಳನ್ನು ಕೇಳಬೇಡ.

"ಹಾಗಾದರೆ, ನನಗೊಂದು ಮಗೂನ ಕೊಟ್ಟು ಬಿಡು. ನಾನು ಸಾಕಿಕೊಳ್ತೀನಿ ಜಾನಕಿ ಆಸೆಯಿಂದ ಕೇಳಿದಾಗ ಪರಶುರಾಮ್ ಸುಮ್ಮನಾದರು."

"ನೋಡಿದ್ಯಾ? ನನಗೆ ಯಾರಿಂದಲೂ ಯಾವ ರೀತಿಯಿಂದಲೂ ಸುಖವಿಲ್ಲ. ನನಗೂ ನನ್ನ ಗಂಡನಿಗೂ ಸರಿಯೇ ಇಲ್ಲ. ಇದುವರೆಗೂ ಮಕ್ಕಳಾಗಿಲ್ಲ. ಮುಂದೆ ಮಕ್ಕಳಾಗುವ ಸಾಧ್ಯತೆ ಇದೆಯೋ ಇಲ್ಲವೋ..... ಈಗ ನಿನ್ನ ಹೆಂಡತಿಗೆ ಎರಡೆರಡು ಮಕ್ಕಳಾಗುತ್ತವೆ. ಒಂದು ಮಗುವನ್ನು ನನಗೆ ಕೊಡು." ನನ್ನ ಆಸೆಯೂ ತೀರುತ್ತದೆ.

ಪರಶುರಾಮ್ ಇಕ್ಕಟ್ಟಿಗೆ ಬಿದ್ದರು. ಇಲ್ಲ ಎನ್ನಲಾರರು, ಹೂ ಎನ್ನಲಾರರು.

"ನಿನ್ನ ಹೆಂಡತಿ ಏನನ್ನುತ್ತಾಳೋ ಅಂತ ಯೋಚಿಸ್ತೀದಿಯಾ?"

"ಹಾಗೇನಿಲ್ಲ ಆದರೆ ಈ ವಿಷಯ ಯಾರಿಗೂ ತಿಳಿಯ ಕೂಡದು. ನಿನ್ನ ಗಂಡ ಏನಂತಾರೋ..... ಏನೋ.....?"

"ಅವರಿಗೆ ಯಾವ ಜವಾಬ್ದಾರಿಯೂ ಬೇಡ.... ಆದರೆ ಒಂದು

ಮಾತು ಮಗುವನ್ನು ಬೆಳೆಸುವ ಖರ್ಚು ವೆಚ್ಚವನ್ನು ನೀನೇ ಕೊಡಬೇಕಾಗುತ್ತದೆ."

"ಇದೊಳ್ಳೆ ಚೆನ್ನಾಗಿದೆ. ನಾನು ಮಗುವನ್ನು ಕೊಟ್ಟು ಸಾಕುವ ಖರ್ಚನ್ನೂ ಕೊಡುವುದು ಯಾವ ನ್ಯಾಯ?"

"ನಿನಗೆ ನಿನ್ನ ತಂಗಿಯ ಮೇಲೆ ಪ್ರೀತಿ ಇಲ್ಲ. ಅದಕ್ಕೆ ಹೀಗೆಲ್ಲಾ ಮಾತನಾಡ್ತೀದೀಯ ನಿನ್ನ ಹಾಗೇ ನಾನೂ ಸುಖವಾಗಿರಲಿ ಅಂತ ಆಸೆ ಇಲ್ಲವೇ....." ಅಳುವಿನ ಧ್ವನಿಯಲ್ಲಿ ಮಾತನಾಡಿದಳು.

"ಸರಿ ಜಾನಕಿ. ನೀನು ನನ್ನ ಬೆನ್ನಲ್ಲಿ ಬಿದ್ದವಳು. ಒಂದು ಮಗುವನ್ನು ನಿನಗೆ ಕೊಡ್ತೀನಿ. ಆದರೆ ಒಂದು ಹೆಣ್ಣು ಒಂದು ಗಂಡು ಹುಟ್ಟಿದರೆ ಆಗ ಏನು ಮಾಡೋದು?"

"ಗಂಡು ಮಗು ನಿನಗೇ ಇರಲಿ, ಏಕೆಂದರೆ ಸ್ವಂತ ತಂದೆ ನೀನೇತಾನೆ...."

"ಸರಿ. ನಿನ್ನಷ್ಟದಂತೆಯೇ ಆಗಲಿ." ಎಂದಿದ್ದರು ಅಂತೆಯೇ ಮೈಥಿಲಿಗೆ ತಿಳಿಯದಂತೆ ಒಂದು ಮಗುವನ್ನು ಜಾನಕಿಗೆ ಕೊಟ್ಟು ಬಿಟ್ಟಿದ್ದರು. ಆನಂತರ ನಾಜಕಿ ತಮಗೆ ಪರಿಚಯಸ್ಥರ ಮನೆಯ ಅನಾಥ ಹೆಣ್ಣು ಮಗುವನ್ನೂ ಸಾಕಿಕೊಂಡಿದ್ದಳು. ಈ ವಿಷಯ ತಿಳಿದರೂ ಪರಶುರಾಮ್ ತಂಗಿಗೆ, ಸಾಕಷ್ಟು ಹಣವನ್ನು ಕಳಿಸುತ್ತಿದ್ದರು. ಜವಾಬ್ದಾರಿಯೇ ಇಲ್ಲದ ಜಾನಕಿಯ ಗಂಡ ಆ ವಿಷಯ ತನಗೆ ಸಂಬಂಧಿಸಿದ್ದೆ, ಅಲ್ಲವಂತೆ ಇದ್ದ. ನಂತರ ಹತ್ತಾರುವರ್ಷ ಅಂಡಮಾನ್‌ನಲ್ಲಿದ್ದು ಈಗ ತಮಿಳ್ನಾಡಿನಲ್ಲಿದ್ದರು.

"ಹೇಗಿದೀರಿ ಅತ್ತಿಗೆ?" ಎಂದು ಹಸನ್ಮುಖದಿಂದ ಪ್ರಶ್ನಿಸಿದ ಮೈಥಿಲಿಗೆ

"ನನ್ನ ಮಗಳಿಗೆ ವರನನ್ನು ಹುಡುಕುತ್ತಿದ್ದೇನೆ. ಆ ಸಂಬಂಧವಾಗಿ ಬಂದಿದ್ದೇನೆ. ಅಣ್ಣನಿಗೆ ಪರಿಚಯದವರು ಬೇಕಾದಷ್ಟು ಜನರಿದ್ದಾರೆ ಅಲ್ಲವೇ?" ಎಂದು ಕೇಳಿದಳು.

"ಈ ಪೀಠಿಕೆ ಮೈಥಿಲಿಗೆ ಅರ್ಥವಾಗಿತ್ತು. ಗೋಪಿಯನ್ನೇ ಅಳಿಯನನ್ನಾಗಿ ಮಾಡಿಕೊಳ್ಳುವ ಆಸೆ.... ಒಪ್ಪದಿದ್ದರೆ ಮದುವೆಯ ಖರ್ಚನ್ನು ಅಣ್ಣನಿಂದ ಹಾಕಿಸುವ ಉಪಾಯ" ಆದರೂ ನಗುತ್ತಾ ನುಡಿದಳು.

"ನಿನ್ನ ಮಗಳು ಚೆನ್ನಾಗಿದ್ದಾಳೆ ತುಂಬಾ ಚೆನ್ನಾಗಿ ಹಾಡ್ತಾಳೆ. ಅವಳಿಗೆ ಗಂಡು ಸಿಗುವುದು ಕಷ್ಟವಲ್ಲ."

"ಹೌದು ಸಂಗೀತದಲ್ಲಿ ಸೀನಿಯರ್ ಪರೀಕ್ಷೆ ಪಾಸು ಮಾಡಿದ್ದಾಳೆ. ಬಿ.ಎಸ್ಸಿ ಓದಿದ್ದಾಳೆ. ನಿಮಗೆ ಇಷ್ಟವಾದರೆ ಗೋಪಿಗೇ ವಿಚಾರಿಸಬಹುದು."

"ಬೇಡ ಜಾನಕಿ. ಮನೆಮನೆಯಲ್ಲೇ ಸಂಬಂಧ ಬೆಳೆಸುವುದು ಬೇಡ

ನಮಗೆ ತಿಳಿದವರು ಎಷ್ಟೋ ಜನರಿದ್ದಾರೆ. ನೀನು ಯೋಚಿಸಬೇಡ"

"ಗೋಪಿ ಎಲ್ಲಿ? ಅವನ್ಯಾಕೆ ಪೋಲಿಸ್ ಇಲಾಖೆಗೆ ಸೇರಿಕೊಂಡ? ಬೇರೆ ಕೆಲಸ ಸಿಗಲಿಲ್ಲವೆ?" ತನಿಖೆ ನಡೆಸುವಂತೆ ಕೇಳಿದಳು.

"ಅದು ಅವನ ಆಸೆ ಹಾಗೂ ಅವನ ತಂದೆಯ ಆಸೆ. ಈಗ ವೇಣು ಏನು ಮಾಡ್ತಿದ್ದಾನೆ. ಅವನ ಮದುವೆ ಯಾವಾಗ?"

"ಅವನಿಗೆ ಸಿನಿಮಾ ನಟನಾಗುವ ಹುಚ್ಚು ಆಸೆ. ಸಣ್ಣ ಸಣ್ಣ ಪಾತ್ರಗಳನ್ನು ಮಾಡ್ತಾನೆ. ಬರೀ ಫೋಕಿ. ನನಗಂತೂ ಬೇಜಾರಾಗಿ ಹೋಗಿದೆ. ಮದುವೆ ಯಾಕೋ?" ತಾನೇ ಗೊತ್ತು ಮಾಡಿಕೊಂಡಿದ್ದಾನೆ. ಕೇಳಿದರೆ ನನ್ನಿಷ್ಟ ಅಂತಾನೆ?

"ಅವನಿಗೆ ಕೆಲಸಕ್ಕೆ ಸೇರುವ ಆಸೆ ಇದ್ದಿದ್ದರೆ ನಾವು ಇಲ್ಲಿ ಯಾವುದಾದರೂ ಕೆಲಸ ಕೊಡಿಸಬಹುದಾಗಿತ್ತು. ನಿಮ್ಮ ಅಣ್ಣನಿಗೆ ಬೇಕಾದಷ್ಟು ಜನರ ಪರಿಚಯವಿದೆ... ಈಗಲೂ ನೋಡಬಹುದು."

"ನಿಮ್ಮ ಸಂಸಾರ ನೋಡಿದರೆ ನನಗೆ ನನಗೆ ಖುಷಿಯಾಗುತ್ತೆ ಮೈಥಿಲಿ... ನಮ್ಮ ಮನೇ ವಿಷಯ ನಿನಗೇ ಗೊತ್ತು. ನನ್ನ ಗಂಡನಿಗೇ ಜವಾಬ್ದಾರಿಯೇ ಇಲ್ಲ. ಸಂಪಾದಿಸುವುದನ್ನೆಲ್ಲಾ ಏನು ಮಾಡ್ತಾರೋ.... ಮನೆಯ ಖರ್ಚಿಗೆ ಕೊಡುವುದಂತೂ ಸಾಕಾಗುವುದಿಲ್ಲ. ನಿನಗೆ ತಿಳಿಯದು. ಅಣ್ಣ ನಮ್ಮ ಸಂಸಾರಕ್ಕೆ ಅಂತ ಎಷ್ಟು ಸಹಾಯ ಮಾಡಿದ್ದಾನೆ ಗೊತ್ತಾ? ಇಲ್ಲದಿದ್ದರೆ ನಮ್ಮ ಗತಿ ಏನಾಗುತ್ತಿತ್ತೋ....."

ಮೈಥಿಲಿಗೆ ಈ ವಿಷಯ ಹೊಸದು, ಆದರೂ ಅದನ್ನು ಮುಖದಲ್ಲಿ ತೋರಗೊಡಲಿಲ್ಲ.

"ಜಾನಕಿ ನೀನೇನು ಬೇರೆಯವಳಾ? ನಮ್ಮ ಮನೆಯವಳೇ..... ನಿಮ್ಮ ಅಣ್ಣ ಸಹಾಯ ಮಾಡುವುದು ಸಹಜವೇ......"

"ನಮ್ಮ ಸಂಸಾರದ ಈ ಬವಣೆ ತಿಳಿದದ್ದು ನಾನು ಎರಡೆರಡು ಮಕ್ಕಳನ್ನು ಸಾಕಿದೆ. ನಮ್ಮ ಸವಿತಾ ಏನೋ ಯಾವುದೋ ಅನಾಥ ಹುಡುಗಿ ಹೆಣ್ಣು ಹುಡುಗಿಗೆ ರಕ್ಷಣೆ ಕೊಟ್ಟೆ ಎನ್ನುವ ಸಂತಸ ನನಗಿದೆ. ಆದರೆ ವೇಣು....? ಅವನು ತಂದೆ ತಾಯಿಯರಿದ್ದೂ ನಮ್ಮ ಮನೆಯಲ್ಲಿ ಬೆಳೆದ. ಆದರೆ ಅವನ ಜೀವನದ ದಾರಿ ಸರಿಯಾಗಲಿಲ್ಲ. ಓದಲಿಲ್ಲ. ಒಳ್ಳೆ ಕೆಲಸದಲ್ಲಿಲ್ಲ. ಸಿನಿಮಾಷೋಕಿ ಅವನನ್ನು ನಟನನ್ನಾಗುವ ಆಸೆಗೆ ತಳ್ಳಿತು. ಅವನೂ ನಿಮ್ಮ ಗೋಪಿಯಂತೆ ಒಬ್ಬ ಜವಾಬ್ದಾರಿ ಪೋಲಿಸ್ ಅಧಿಕಾರಿಯಾಗಿದ್ದರೆ ಎಷ್ಟು ಚೆನ್ನಾಗಿತ್ತು ಅಲ್ವಾ?"

"ಅವರವರ ಹಣೇಲಿ ಏನೇನು ಬರೆದಿದೆಯೋ ಹಾಗೇ ಆಗುತ್ತೆ....."

"ಹಣೇಬರಹ ಅಂತೀವಿ. ಆದರೆ ಅದನ್ನು ನಾವೇ ಕೈಯಾರ ಬರೆಯುತ್ತೇವೇನೋ ಅಂತನ್ನಿಸುತ್ತೆ.... ನಾನು ತಪ್ಪು ಮಡಿಬಿಟ್ಟೆ ಮೈಥಿಲಿ" ಜಾನಕಿ ದೈನ್ಯದಿಂದ ಮೈಥಿಲಿಯ ಕೈ ಹಿಡಿದಾಗ ಮೈಥಿಲಿ ಸಮಾಧಾನ ಗೊಳಿಸಿದಳು.

"ಯಾಕೆ ಏನಾಯ್ತು ಹೇಳು ಜಾನಕಿ? ಸಾಧ್ಯವಾದರೆ ಆ ತಪ್ಪನ್ನು ತಿದ್ದಿ ಸರಿ ಮಾಡೋಣ....."

"ಇಷ್ಟು ವರ್ಷಗಳ ನಂತರ ತಿದ್ದುಕ್ಕೆ ಆಗುತ್ತೋ ಇಲ್ಲವೋ... ಹೋಗಲಿಬಿಡು." ಎಂದು ಕಣ್ಣೊರೆಸಿಕೊಂಡಳು. ಜಾನಕಿಯ ವರ್ತನೆ ಮೈಥಿಲಿಗೆ ಅರ್ಥವಾಗಲಿಲ್ಲ. ಮತ್ತೆ ಮತ್ತೆ ಕೇಳಲು ಸಮಯವಿರಲಿಲ್ಲ.

ಪೋಲಿಸ್ ಯೂನಿಫಾರಂ ಧರಿಸಿ ಠಾಕು ಠೀಕಾಗಿ ಬಂದ ಗೋಪಿಯನ್ನೇ ಜಾನಕಿ ದೃಷ್ಟಿಸಿ ನೋಡಿದಳು. ಅವನ ಬಗ್ಗೆ ಅಭಿಮಾನ ಮೂಡಿತು.

"ಯಾವಾಗ ಬಂದ್ರಿ ಅತ್ತೆ? ಹೇಗಿದ್ದೀರಿ?" ಎಂದು ವಿಶ್ವಾಸದಿಂದ ಮಾತನಾಡಿಸಿದಾಗ ಅವಳ ಕಣ್ಣುಗಳು ಹನಿಗೂಡಿದವು.

"ಬೆಳಿಗ್ಗೇನೇ ಬಂದೆ. ನೀನು ಹೇಗಿದೀಯ ಅಂತ ನಾನು ಕೇಳ ಬೇಕಾಗಿಲ್ಲ. ರಾಜಕುಮಾರನ ಹಾಗಿದೀಯ... ನೀನು ನಿನಗೆ ತಕ್ಕಂತಹ ಸುಂದರ ಹುಡುಗಿಯನ್ನೇ ಮದುವೆಯಾಗಬೇಕು....." ಗೋಪಿ ತಾಯಿಯ ಕಡೆ ನೋಡಿದ.

"ಬರೀ ಮುಖ ಸೌಂದರ್ಯದಲ್ಲಿ ನನಗೆ ವಿಶ್ವಾಸವಿಲ್ಲ ಅತ್ತೆ.... ಆತ್ಮಸೌಂದರ್ಯವೂ ಇರಬೇಕು." ಮುಗುಳ್ನಗುತ್ತಾ ನುಡಿದ.

"ಆತ್ಮ ಸೌಂದರ್ಯ ಯಾರಿಗೆ ಕಾಣುತ್ತೆ? ನಿನಗೆ ತಕ್ಕ ಜೋಡಿ ಸಿಗುವವರೆಗೂ ನೀನು ಮದುವೆಯಾಗಬೇಡ....."

"ನನಗೆ ಬೇಕಾದವಳನ್ನು ಆರಿಸಿಕೊಂಡಿದ್ದೇನೆ" ಎಂದು ಹೇಳುವ ಆಸೆಯಾದರೂ, ತಾಯಿಯ ಸಂಜ್ಞೆಯನ್ನು ಅರಿತು ಸುಮ್ಮನಾದ.

"ವೇಣು ಹೇಗಿದ್ದಾನೆ? ಸವಿತಾ ಹೇಗಿದ್ದಾಳೆ? ಈಗಲೂ ಹಾಗೇ ಗಡ್ಡ ಮೀಸೆ ಬಿಟ್ಟಿದಾನಾ? ಹುಲಿ, ಕರಡಿ ತರಹ?" ತಾಯಿಯ ಕಡೆ ಕಿರುನಗೆ ನಕ್ಕ.

"ಹೂಂ. ನಿನಗೆ ಒಪ್ಪಲ್ಲ ಅಂತ ಹೇಳಿದರೂ ನನ್ನ ಮಾತಿಗೆ ಬೆಲೆಇಲ್ಲ. ಅವನು ಗಡ್ಡ ಮೀಸೆ ಬೋಳಿಸಿದರೆ, ನಿನ್ನ ತರಹಾನೇ ಕಾಣ್ತಾನೆ. ಥೇಟ್

ನಿನ್ನ ತರಹಾನೇ...." ಎನ್ನುತ್ತಾ ಮೈಥಿಲಿಯ ಮುಖ ನೋಡಿದಳು.

"ಅವನು ಹಾಗೇ ಇರಲಿ ಬಿಡಿ ಅತ್ತೆ. ಅದು ಅವನ ಇಷ್ಟ. ಅಲ್ಲದೇ ಆಮೇಲೆ ಎಲ್ಲರೂ ಅವನನ್ನೇ ಗೋಪಿ ಅಂತ ತಿಳಿದುಕೊಂಡು ಬಿಟ್ಟರೇ....?"

"ಆ ಯೋಗ್ಯತೆ ಅದಕ್ಕೆಲ್ಲಿದೆ? ನಿನ್ನ ಹಾಗೆ ಕಳೆಯೇ ಇಲ್ಲ ತಿರುಕನಂತೆ ತಿರುಗಾಡಿ ತಿರುಗಾಡಿ ಆರೋಗ್ಯಾನೇ ಹಾಳು ಮಾಡಿಕೊಂಡಿದ್ದಾನೆ. ಅವನನ್ನು ನಿಮ್ಮ ಮನೆಯಲ್ಲೇ ಬಿಟ್ಟಿದ್ದರೆ ನಿನ್ನ ಹಾಗೆ ಆರೋಗ್ಯವಾಗಿರುತ್ತಿದ್ದ."

"ಈ ಸಾರಿ ಇಲ್ಲಿಗೆ ಬಂದಾಗ ನಾನು ಅವನಿಗೆ ತಿಳುವಳಿಕೆ ಹೇಳ್ತೀನಿ ಅತ್ತೆ. ನೀವು ಚಿಂತಿಸಬೇಡಿ. ಸವಿತಾ ಈಗ ಏನು ಮಾಡ್ತಿದ್ದಾಳೆ."

"ಡಿಗ್ರಿ ಆಗಿದೆ. ಸಂಗೀತ ಕಲಿತಿದ್ದಾಳೆ."

"ಹೌದಾ? ವೆರಿಗುಡ್.... ಅವಳನ್ಯಾಕೆ ಕರೆದುಕೊಂಡು ಬರಲಿಲ್ಲ?"

"ಬಂದಿದ್ದಾಳಪ್ಪಾ..... ಮೈಥಿಲಿಗೆ ಸಹಾಯ ಮಾಡ್ತೀನಂತ ಅಡಿಗೆ ಮನೆಗೆ ಹೋಗಿದ್ದಾಳೆ."

"ಹೌದಾ! ನಾನು ಅವಳನ್ನು ಅಲ್ಲಿಯೇ ಮಾತನಾಡಿಸ್ತೀನಿ" ಎಂದು ಗೋಪಿ ಎದ್ದು ಬಿಟ್ಟ ಬಟ್ಟೆ ಬದಲಾಯಿಸಿ, ಮುಖ ತೊಳೆದು ಅಡಿಗೆ ಮನೆಗೆ ಬಂದ. ತೆಳ್ಳಗೆ ಬೆಳ್ಳಗೆ ನೋಡಲು ಆಕರ್ಷಕವಾಗಿದ್ದವಳನ್ನು ಕಂಡು ಅವನು ಖುಷಿಗೊಂಡ ಆ ಕ್ಷಣದಲ್ಲಿ ಅವನಿಗೆ ನೆನಪಾದವನು ವಾಸುಕಿ.

"ಏನೇ ಸವಿತಾ ಹೇಗಿದೀಯಾ?" ಎನ್ನುತ್ತಾ ಅವಳ ಬೆನ್ನ ಮೇಲೆ ಗುದ್ದಿದ.

"ಹಾಂ......" ಎಂದು ನೋವಿನಿಂದ ಮುಖ ಕಿವುಚಿದಳು. ಥೂ ಹೋಗಪ್ಪಾ.... ನಿನ್ನ ಪೋಲಿಸ್ ಶಕ್ತಿಯನ್ನು ನನ್ನ ಮೇಲೆ ಪ್ರಯೋಗಿಸಬೇಡ ಎಂದು ಅವಳು ತಮಿಳಿನ ಶೈಲಿಯಲ್ಲಿ ಮಾತನಾಡಿದಾಗ ಅವನು ಮುಕ್ತನಾಗಿ ನಕ್ಕ.

ನೀನು ಬರೀ ತಮಿಳು ಹಾಡನ್ನೇ ಹಾಡ್ತಿಯೋ... ಅಥವಾ ಕನ್ನಡ ಹಾಡುಗಳನ್ನು ಕಲಿತಿದಿಯೋ.......?

"ಕಲಿತಿದೀನಿ. ಆದರೆ ಹಾಡಲು ಹೆದರಿಕೆ......"

"ಹೆದರಿಕೆ ಯಾಕೆ? ಕರ್ನಾಟಕದಲ್ಲಿ ತಮಿಳಿನಲ್ಲಿ ಮಾತನಾಡಬಹುದು. ತಮಳಿನಲ್ಲಿ ಹಾಡಬಹುದು. ಏನೂ ತೊಂದರೆ ಇಲ್ಲ. ನೀನು ಕನ್ನಡ ಹಾಡನ್ನು ಹಾಡಿದರೂ ಅದನ್ನು ತಮಿಳಿನಲ್ಲೇ ಅರ್ಥಮಾಡಿಕೊಳ್ತಾರೆ. ಅಷ್ಟು ಸುಲಭ......."

"ನೀನು ಏನು ಹೇಳ್ತೀದೆಯೋ ನನಗೆ ಅರ್ಥವಾಗಲಿಲ್ಲ."

"ನನಗೆ ನಿನ್ನ ಹಾಗೆ ತಮಿಳಿನ ಕನ್ನಡ ಮಾತನಾಡಲು ಬರುವುದಿಲ್ಲ. ಹೋಗಲಿಬಿಡು. ನಿನಗೆ ಅರ್ಥವಾಗುವುದಿಲ್ಲ. ವೇಣು ಯಾಕೆ ಬರಲಿಲ್ಲ?"

"ಇಲ್ಲಿ ಯಾವುದೋ ಷೂಟಿಂಗ್ ಇದೆಯಂತೆ. ನಾಳೆ ನಾಡಿದ್ದರಲ್ಲಿ ಬರಬಹುದು. ನನಗೂ ಹಿನ್ನೆಲೆ ಗಾಯಕಿ ಕೆಲಸ ಕೊಡಿಸ್ತೀನಿ ಅಂದಿದ್ದಾನೆ."

ಅದು ಅಷ್ಟು ಸುಲಭವಲ್ಲ. ಅದಕ್ಕೆ ಇನ್‌ಫ್ಲೂಯನ್ಸ್ ಬೇಕು.

"ಮಾಮನಿಗೆ ತುಂಬಾ ದೊಡ್ಡ ಮನುಷ್ಯರು ಗೊತ್ತಂತಲ್ಲ..... ನಿನಗೂ ಯಾರಾದ್ರೂ ಗೊತ್ತಾ?"

"ನನಗೆ ಗೊತ್ತಿರುವವರು ಬರೀ ಗೂಂಡಾಗಳು, ಕಳ್ಳರು, ಮೋಸ ಮಾಡಿರುವವರು. ಅವರಿಂದ ಯಾರಿಗೂ ಉಪಯೋಗವಿಲ್ಲ....." ನಕ್ಕ.

"ನೀನು ತುಂಬಾ ತಮಾಷೆಯಾಗಿ ಮಾತನಾಡ್ತೀಯಾ.... ಗೋಪಿ"

"ವನಜಾನೂ ಹೀಗೆ ಹೇಳ್ತಾಳೆ......"

"ಯಾರು ವನಜಾ? ನಿಮ್ಮ ಮನೇಗೆ ಆಗಾಗ್ಗೆ ಬರ್ತಾಳೆ ಅಂತ ಅತ್ತೆ ಹೇಳುತ್ತಿದ್ದರಲ್ಲ ಅವರಾ? ಈಗಲೂ ಬರುತ್ತಿರುತ್ತಾರಾ?"

"ಹೂಂ, ಅವಳೇ..... ನೀನು ಅವಳನ್ನು ನೋಡಿಲ್ವಾ? ನಾನೇ ಎಂದಾದ್ರೂ ನಿನ್ನನ್ನು ಅವಳ ಮನೆಗೆ ಕರೆದುಕೊಂಡು ಹೋಗ್ತೀನಿ"

ಮನೆಯೊಳಗೆ ಕಾಲಿಡುತ್ತಿದ್ದಂತೆಯೇ, "ಏನಣ್ಣಾ ಈಗ ಬತ್‌ಇದೀಯ ಬೆಳಗಿಂದ ನಾನು ನಿನಗಾಗಿ ಕಾಯ್ತಾ ಇದೀನಿ" ತಂಗಿ ಎತ್ತರದ ಧ್ವನಿಯಲ್ಲಿ ನುಡಿದಾಗ ಪರಶುರಾಮನಿಗೆ ಬೇಸರವೆನಿಸಿತು.

"ಏನು ಇದ್ದಕ್ಕಿದ್ದಂತೆ ಈಗ ಬಂದದ್ದು?"

"ಯಾಕೆ ನನ್ನ ತವರು ಮನೆಗೆ ನಾನು ಹೇಳಿ ಬರಬೇಕಾ?"

"ಹಾಗಲ್ಲ. ಏನು ವಿಶೇಷ ಅಂತ...... ಕೇಳಿದೆ?"

"ಸವಿತನ ಪರೀಕ್ಷೆ ಮುಗಿದಿತ್ತು. ಒಂದೆರಡು ದಿನ ಇದ್ದು ಹೋಗೋಣ ಅಂತ ಬಂದೆ. ನಾಳೆ ನಾಡಿದ್ದರಲ್ಲಿ ಹೊರಟು ಬಿಡ್ತೀನಿ"

"ಸರಿ. ನಿನ್ನಿಷ್ಟ" ಎಂದು ಪರಶುರಾಮ ನುಡಿದಾಗ, ಜಾನಕಿ ಮೈಥಿಲಿಯ ಮುಖವನ್ನು ನೋಡಿದಳು.

"ನಿಧಾನವಾಗಿ ಕೂತು ಮಾತಾನಾಡಿ. ಬರುತ್ತಿದ್ದಂತೆಯೇ ಹೊರಡುವ ವಿಚಾರವೇಕೆ? ಸವಿತಾ ಬಂದಿದ್ದಾಳೆ. ಸಂಗೀತ ಪರೀಕ್ಷೆಲಿ ಪಾಸಾದಳಂತೆ"

"ಹುಂ ಸಂಗೀತಾನ ಈ ಕಾಲದಲ್ಲಿ ಕೇಳೋದು ಯಾರು?"

"ಹಾಗೆ ಹೇಳಬೇಡಿ. ಸಂಗೀತ ನಮ್ಮ ಪುರಾತನ ಕಲೆ. ಕಾಲ ಬದಲಾವಣೆ ಆದಂತೆ ಜನ ಅದನ್ನು ಮರೆತಿರಬಹುದು. ಆದರೆ ಅದರ ಬೆಲೆ ಅದಕ್ಕೇ ಇದ್ದೇ ಇದೆ. ಪ್ರೋತ್ಸಾಹ ನೀಡಿದರೆ ತಲೆ ಅಭಿವೃದ್ಧಿ ಹೊಂದುತ್ತೆ"

"ಇದು ನಿನ್ನ ಮಹಿಳಾ ಸಮಾಜ ಅಲ್ಲ. ನಮ್ಮ ಮನೆ.... ಭಾಷಣ ಬಿಗಿಯ ಬೇಡ."

"ನಮ್ಮ ಸಮಾಜದಲ್ಲಿ ಸವಿತಾಳ ಸಂಗೀತದ ಕಾರ್ಯಕ್ರಮವನ್ನು ಇಡಿಸ್ತೀನಿ... ನೋಡ್ತೀರಿ. ಕಾರ್ಯಕ್ರಮ ಎಷ್ಟು ಚೆನ್ನಾಗಿರುತ್ತೆ ಅಂತ....."

"ನಿನ್ನ ಸ್ನೇಹಿತೆಯರು ಆಡಿಕೊಂಡು ನಕ್ಕಾರು. ಸುಮ್ಮನಿರು."

"ನಿಮಗೆ ಹಾಗೇನೇ..... ನಮ್ಮ ಮನೆಯ ವಸ್ತುವಿನ ಬೆಲೆ ನಿಮಗೆ ತಿಳಿಯುಲ್ಲ. ನೀವೇ ಕಳಪೆ ಮಾಡಿದರೆ, ಜನ ಹೇಗೆ ಮೆಚ್ತಾರೆ.......?"

"ಜನ ಮೆಚ್ಚಲಿ ಅಂತ ನಾವು ಮಾಡಬಾರದು ನಮ್ಮ ಕರ್ತವ್ಯ ಅಂತ ನಾವು ಮಾಡಬೇಕು......"

"ನೀಮ್ಮ ಪೋಲಿಸ್ ನೌಕರಿ. ನಿಮಗೆ ಕರ್ತವ್ಯ; ಸಂಗೀತ, ಕಲೆ, ಅದು ಇದು ಬೇರೆ ಬೇರೇನೇ..... ಹುಡುಗಿ ನಿಮ್ಮ ಮಾತನ್ನು ಕೇಳಿದರೆ ನೊಂದ್ಕೋತಾಳೆ."

"ಎಲ್ಲೀ ಕರೀ ಅವಳನ್ನ......"

"ಹೇಗಿದೀರಿ ಮಾಮಾ?" ಎನ್ನುತ್ತಾ ಸವಿತಾ ನಗುನಗುತ್ತಾ ಬಂದಾಗ ಪರಶುರಾಮನ ಮುಖದಲ್ಲಿ ನಸುನಗೆ ಮೂಡಿತ್ತು. ಮೊಟ್ಟಮೊದಲ ಬಾರಿಗೆ ಒಂದು ಹುಡುಗಿ ಮಾಮಾ ಅಂತ ನಯುವಾಗಿ ಕರೆದದ್ದು ಆಪ್ಯಾಯಮಾನವಾಗಿತ್ತು.

"ಹಾಡು ಹೇಳ್ತೀಯಂತೆ. ನಿಮ್ಮತ್ತೆ ತುಂಬಾ ಹೊಗಳ್ತಾಳೆ."

"ಮಾಮಿ ತುಂಬಾ ಒಳ್ಳೆಯವರು ಮಾಮಾ....."

"ನಾನು? ನಿನ್ನ ಮಾಮಾ ಒಳ್ಳೆಯವನಲ್ವಾ?"

"ನಿಮ್ಮ ಮೀಸೆ ನಿಮ್ಮ ಜೋರು ಮಾತು ಸ್ವಲ್ಪ ಹೆದರಿಸುತ್ತೆ."

"ಪರವಾಗಿಲ್ವೇ...... ನನ್ನ ಎದುರಿಗೆ ನಿಂತು ನನ್ನನ್ನೇ ಹೆದರಿಸುವವನು ಅಂತೀಯಲ್ಲ. ನನಗೆ ಹಾಗೇ ಅಭ್ಯಾಸವಾಗಿ ಹೋಗಿದೆ ಏನು ಮಾಡಲಿ?"

"ಗೋಪಿನೂ ಪೋಲಿಸ್ನೋನೇ ತಾನೇ.... ಆದರೆ ಅವನೇ ಬೇರೆ ತರಹ."

"ಅವನು ಅವರ ಅಮ್ಮನ ತರಹ......"

"ವೇಣು ಮಾತ್ರ ನಿಮ್ಮ ಹಾಗೇ..... ಮಾತು ಮಾತಿಗೂ ರೇಗುವುದು ಜಂಭ ಆಡುವುದು. ಎಲ್ಲಾ ನಿಮ್ಮ ಹಾಗೇ ಅಂತ ಅಮ್ಮ ಹೇಳ್ತಾ ಇರ್ತಾಳೆ.." ಪರಶುರಾಮ ತಂಗಿಯ ಮುಖ ನೋಡಿದರು. ಇಬ್ಬರ ಮುಖವೂ ಬಿಳುಚಿಹೋಗಿತ್ತು. ಇದ್ದಕ್ಕಿದ್ದಂತೆ ಮೌನ ಆವರಿಸಿಕೊಂಡಿತು. ಯಾಕೆಂದು ಬೇರೆಯವರಿಗೆ ಗೊತ್ತಾಗಲಿಲ್ಲ.

"ಆ ಮೌನವನ್ನು ಮುರಿಯುವಂತೆ ಗೋಪಿ ಕೇಳಿದ..... " ಅಮ್ಮ ನಮ್ಮ ಮನೆ ಮಾತು ತಮಿಳೇ. ಆದರೆ ನಾವುಗಳು ಕನ್ನಡದಲ್ಲೇ ಮಾತಾಡ್ತೀವಲ್ಲ ಏಕೆ?

"ನಾನಿರುವುದು ಕರ್ಣಾಟಕದಲ್ಲಿ ಮನೆಯಲ್ಲೊಂದು ಭಾಷೆ. ಮನೆಹೊರಗೊಂದು ಭಾಷೆ ಏಕೇಂತ. ನಾವೂ ಮನೆ ಮಾತನ್ನು ಕನ್ನಡಾನೇ ಮಾಡಿಕೊಂಡೆವು. ಈಗ ನಿಮ್ಮ ಅತ್ತೆ ತಮಿಳ್ನಾಡಿನಲ್ಲಿರುವುದರಿಂದ ಅವಳ ಮಾತು, ಶುದ್ಧ ತಮಿಳು. ನನಗೇ ಅರ್ಥವಾಗುವುದಿಲ್ಲ. ಆದರೆ ಸಧ್ಯ ಅವಳು ಕನ್ನಡ ಮರೆತಿಲ್ಲ. ಮಕ್ಕಳಿಗೂ ಕನ್ನಡ ಕಲಿಸಿದ್ದಾಳೆ."

"ನಮ್ಮ ವೇಣು ಮಾತ್ರ ತಮಿಳು, ಇಂಗ್ಲೀಷು ಬಿಟ್ಟರೆ ಬೇರೆ ಮಾತನ್ನೇ ಆಡಲ್ಲ, ನನಗೇನೋ ಕನ್ನಡನೇ ಚೆನ್ನ ಅಂತನ್ನಿಸುತ್ತೆ. ಎಲ್ಲರಿಗೂ ಅವರವರ ಭಾಷಾಭಿಮಾನ ಜಾಸ್ತಿ ಎಲ್ಲಾ ಭಾಷೆಯೂ ಚೆನ್ನವೇ. ಬರದೇ ಇದ್ದಾಗ ಕಷ್ಟ ಅಂತನ್ನಿಸುತ್ತೆ. ಆಗ ನಮ್ಮ ನಮ್ಮ ಭಾಷೆಯೇ ಚೆನ್ನ ಅಂತನ್ನಿಸುತ್ತೆ ಅಷ್ಟೇ."

"ಭಾಷಾ ವಿಜ್ಞಾನದ ಭಾಷಣ ಸಾಕು. ಎಲ್ಲರಿಗೂ ಊಟ ಹಾಕು" ಪರಶುರಾಮ ಎತ್ತರದ ಧ್ವನಿಯಲ್ಲಿ ಹೇಳಿದಾಗ ಎಲ್ಲರೂ ನಕ್ಕರು. ಊಟ ಮುಗಿಸಿ ಎಲ್ಲರೂ ಮಲಗುವ ಸನ್ನಾಹದಲ್ಲಿದ್ದಾಗ ಗೋಪಿ ಅಡಿಗೆ ಮನೆಗೆ ಬಂದ.

"ಅಮ್ಮಾ ಇವರೆಲ್ಲಾ ಎಷ್ಟುದಿ,' ಇರ್ತಾರೆ? ನಮ್ಮ ಪ್ಲಾನ್‌ಗೆ ತೊಂದರೆಯಾಗುಲ್ವಾ?"

"ತೊಂದರೆ ಯಾಕೆ? ಅಷ್ಟಕ್ಕು ಎಲ್ಲವನ್ನು ಮಾಡೋನು ವಾಸುಕಿ..... ನಿಮ್ಮಪ್ಪನ್ನ ಮುಖ್ಯ ಅತಿಥಿಯನ್ನಾಗಿ ಆಹ್ವಾನಿಸಿದಾನಂತೆ. ನಿಮ್ಮ ಅತ್ತೆಗೂ ಒಂದು ಸದಾವಕಾಶ, ಅಣ್ಣನ ಭಾಷಣ ಕೇಳೋಕೆ ಇರಲಿ ಬಿಡು...."

"ಇಷ್ಟಾದರೂ ವಾಸುಕಿಯ ಪ್ಲಾನ್ ಏನೂಂತ ಸರಿಯಾಗಿ ಅರ್ಥವಾಗೇ

ಇಲ್ಲ. ಏನು ಮಾಡೋದು......?"

"ನನಗೂ ಹೇಳಿಲ್ಲ. ಕಡೇ ಗಳಿಗೇಲಿ ಏನಾದರೂ ಮಾಡಬಹುದು."

"ಸುಮ್ಮನೇ ಗಲಾಟೆ ಆದರೆ......"

"ಪೋಲಿಸ್ನೋರು, ಅಪ್ಪ ಮಗ ನೀವುಗಳೇ ಇರ್ತೀರಲ್ಲ. ಒಂದ್ನಾಲ್ಕು ಜನ ಕಾನ್‌ಸ್ಟೇಬಲ್‌ಗಳೂ ಬಂದಿರಲಿ, ಎಲ್ಲಾಸರಿ ಹೋಗುತ್ತೆ."

"ಹೇಗೂ ಅತ್ತೆ ಬಂದಿದ್ದಾರೆ. ಅತ್ತೆ ಕೈಲಿ ಹೇಳಿಸಿದರೆ, ಅಪ್ಪ ನಾನು ವನಜನ್ನೇ ಮದುವೆಯಾಗಲು ಒಪ್ಪಬಹುದು ಅಲ್ವಾ.....?"

"ಸುಮ್ಮನಿರು. ಅತ್ತೆ ಎದುರಿಗೆ ಈ ಮಾತನ್ನೇ ಎತ್ತುವುದು ಬೇಡ." ಅವಳ ಮನಸ್ನಲ್ಲಿ ಸವಿತನ್ನ ನಿನಗೆ ಕೊಡುವ ಆಸೆ ಇದೆ. ಅಣ್ಣತಂಗಿ ಒಂದು ಆಮೇಲೆ ಏನು ಮಾಡ್ತೀಯ?

"ನಾನು ನಾಲ್ಕಾರು ದಿನ ರಜ ಹಾಗಿ ಎಲ್ಲಗಾದ್ರೂ ಹೋಗಲಾ?"

"ಏನೂ ಬೇಡ ಕೇಳಿದರೆ ನಾನು ಈಗಲೇ ಮದುವೆಯಾಗುಲ್ಲ ಅಂತ ಹೇಳು.... ಸಿಕ್ಕಿ ಹಾಕಿಕೊಳಳಬೇಡ.... ಅಷ್ಟೇ.."

"ನನಗೊಂದು ಮಾತು ಹೊಳೀತು. ವಾಸುಕಿಗೆ ಸವಿತನ್ನ ಕೇಳಿದರೆ ಹೇಗೆ? ಸವಿತಾ ಚೆನ್ನಾಗಿದ್ದಾಳೆ. ವಾಸುಕಿ ಒಪ್ಪಿದರೂ ಒಪ್ಪಬಹುದು."

"ನೀನಾಗಿಯೇ ನೀನು ಯಾವ ಮಾತಿಗೂ ಹೋಗಬೇಡ. ನಾಳೆ ನಾಡಿದ್ದರಲ್ಲಿ ಅವನು ನಮ್ಮ ಮನೆಗೆ ಬರುತ್ತಾನೆ. ಆಗ ನೀನೂ ಇರುವುದಿಲ್ಲ. ನೀಮ್ಮ ಅಪ್ಪನೂ ಇರುವುದಿಲ್ಲ. ವಾಸುಕಿ ಅವನ ಯೋಜನೆಯನ್ನು ತಿಳಿಸಲು ಬರುತ್ತಾನೆ."

"ಸರಿಯಮ್ಮಾ..... ಎಲ್ಲಾ ನಿನಗೇ ಸೇರಿದ್ದು. ನನಗೇನೂ ಭಯವಿಲ್ಲ." ತಾಯಿಯ ಮೇಲೆ ಅವನಿಗೆ ಅಪಾರ ಭರವಸೆ.

ಹೇಳಿದ ಸಮಯಕ್ಕೆ ಸರಿಯಾಗಿ ವಾಸುಕಿ, ಮೈಥಿಲಿಯ ಮನೆಗೆ ಬಂದ. ಬಾಗಿಲು ತೆಗೆದವಳು ಸವಿತಾ. ಅವನು ಬೆರಗಾಗಿ ಅವಳನ್ನೇ ನೋಡಿದ.

"ಯಾರು ಬೇಕಾಗಿತ್ತು?" ಅವಳು ಕೇಳಿದಾಗ ಅವನು ಎಚ್ಚೆತ್ತ.

"ಮೈಥಿಲಿ ಆಂಟಿ ಇಲ್ವಾ?....."

"ಹೂಂ, ಇದ್ದಾರೆ ಬನ್ನಿ..... ಎಂದು ಬೆನ್ನು ತಿರುಗಿಸಿ ಹೊರಟವಳ ನೀಳವಾದ ಜಡೆಯನ್ನೇ ನೋಡಿದ. ಜಡೆಯನ್ನೇರಿದ್ದ ಕನಕಾಂಬರದ ಹೂಮಾಲೆ ಅವನನ್ನು ಆಕರ್ಷಿಸಿತು. ಅವಳ ಹಿಂದೆಯೇ ಒಳಗೆ ಬಂದ."

"ಮಾಮಿ ನಿಮ್ಮನ್ನು ಹುಡುಕಿಕೊಂಡು ಯಾರೋ ಬಂದಿದ್ದಾರೆ" ಎಂದು ಅವಳು ತಮಿಳು ಮಿಶ್ರಿತ ಕನ್ನಡದಲ್ಲಿ ಹೇಳಿದ್ದನ್ನು ಕೇಳಿಸಿಕೊಂಡು ಮುಗುಳ್ನಕ್ಕ.

"ಓ..... ವಾಸುಕಿ! ಹೇಳಿದ ಸಮಯಕ್ಕೆ ಸರಿಯಾಗಿ ಬಂದಿದೀರಪ್ಪಾ..."

"ಸಮಯ ಪ್ರಜ್ಞೆ ಇಲ್ಲದಿದ್ದರೆ, ಸಂಘ ಸಂಸ್ಥೆ ನಡೆಸುವುದು ಹೇಗೆ? ಯಾರೋ ಗೆಸ್ಟ್ ಬಂದಿರುವ ಹಾಗಿದೆ. ನಿಮ್ಮ ಮನೆಗೆ."

"ನನ್ನ ನಾದಿನಿ, ಅವಳ ಮಗಳು. ನಮ್ಮ ಪಾಡಿಗೆ ನಾವು ಮಾತನಾಡೋಣ ಪರವಾಗಿಲ್ಲ. ಸವಿತಾ ನಮ್ಮಿಬ್ಬರಿಗೂ ಇಲ್ಲಿಗೇ ಕಾಫಿಯನ್ನು ತಂದುಬಿಡು."

ಗುಸುಗುಸು ಪಿಸುಪಿಸು ಮಾತು ಮುಗಿದನಂತರ, ಸವಿತ ತಂದಿತ್ತ ಕಾಫಿಯನ್ನು ಕುಡಿದು ವಾಸುಕಿ ಹೊರಟ. ಅವನ ಎದುರಿಗೆ ವೇಣು ಬಂದ.

"ಹಲೋ ಮಾಮಿ ಎಂದ ವೇಣು, ಎಲ್ಲಿಗೋ ಹೊರಟದೀರಾ?"

"ಇಲ್ಲಪ್ಪಾ..... ಎಲ್ಲಿಂದ ಬರ್‍ತೀದಿಯಾ ನೀನು......?"

"ಇಲ್ಲೇ ಷೂಟಿಂಗ್ ಇತ್ತು ಮುಗಿಸಿಕೊಂಡು ಬರ್‍ತಿದೀವಿ....."

"ಇವರು ವಾಸುಕಿ ಅಂತ, ಗೋಪಿಯ ಸ್ನೇಹಿತ, ಇವನು ವೇಣು ನನ್ನ ನಾದಿನಿಯಮಗ.... ಸಿನಿಮಾ ನಟ......" ಪರಿಚಯ ಮಾಡಿಕೊಟ್ಟಳು.

"ಹಲೋ ಬ್ರದರ್" ಎಂದ ವೇಣು ನಾಟಕೀಯವಾಗಿ........

"ಹಲೋ" ಎಂದು ಮಾತ್ರ ಹೇಳಿ ವಾಸುಕಿ ಮುಂದೆ ಹೆಜ್ಜೆ ಇಟ್ಟವನು. ಏನೋ ನೆನಪಾದವನಂತೆ ಮತ್ತೆ ಹಿಂದೆ ಬಂದು ವೇಣುವನ್ನೇ ತದೇಕವಾಗಿ ನೋಡಿದ. ನೀಟಾಗಿ ಬಾಚಿದ ದಟ್ಟವಾದ ತಲೆ ಕೂದಲು ಗಡ್ಡಮೀಸೆ, ಇದ್ಯಾವುದೂ ಇಲ್ಲದಿದ್ದರೆ ಥೇಟ್ ಗೋಪಿನೇ.... ಆದರೆ ಗೋಪಿ ಪರ್ಸನಾಲಿಟಿ ಸ್ವಲ್ಪ ಜೋರು... ಇವನು ಬಳಕುವ ನಟ.... ಅವನನ್ನೇ ನೋಡಿ ನಕ್ಕು ಮುಂದೆ ಹೊರಟ ಅವನೇಕೆ ಹಾಗೆ ನೋಡಿದ ಎಂದು ಅವನಿಗೆ ಆಶ್ಚರ್ಯವಾಗಿತ್ತು.

"ಯಾಕೆ ಮಾಮಿ? ಅವರು ನನ್ನನ್ನು ಹಾಗೆ ನೋಡಿದ?"

"ಈ ಗಡ್ಡ ಮೀಸೆಯ ಮರೆಯಲ್ಲಿ ನಿನ್ನ ಮುಖ ಮುಚ್ಚಿ ಹೋಗಿದೆಯಲ್ಲ ಅದನ್ನು ಸರಿಯಾಗಿ ನೋಡುಕ್ಕೆ ಇರಬಹುದು" ಮೈಥಿಲಿ ತಮಾಷೆ ಮಾಡಿದಳು.

"ಏನು ಮಾಮಿ? ತಮಾಷೆ ಮಾಡ್ತೋದು? ಗೋಪಿ ಎಲ್ಲಿ?"

"ಅವನು ಬರುವುದು ತಡವಾಗುತ್ತೆ......"

"ವನಜಾ ಅಂತ ನಿಮ್ಮಮನೆಗೆ ಒಂದು ಹುಡುಗಿ ಬರುತ್ತಲ್ಲ. ಆ ಹುಡುಗಿ ಮನೆ ಎಲ್ಲಿ? ನಾನು ಅವಳ ಹತ್ತಿರ ಮಾತನಾಡಬೇಕು...."

"ಅವಳ ಹತ್ತಿರ ಏನು ಮಾತು? ಅವಳ ಮದುವೆ ಗೊತ್ತಾಗಿದೆ.

ಅವಳು ಈಗ ಎಲ್ಲಿಗೂ ಬರುಲ್ಲ."

"ಅವಳದ್ದು ಫೋಟೋ ಜೆನಿಕ್ ಫೇಸ್.... ಆಗಿದ್ದರೆ ಯಾವುದೋ ಒಂದು ಆಡ್‌ಗೆ ಅವಳು ಮಾಡೆಲಿಂಗ್ ಮಾಡ್ತಾಳಾ ಅಂತ..... ಕೇಳಬೇಕು."

"ಅವರಪ್ಪ ಸಿಗಿದು ಹಾಕಿ ಬಿಡ್ತಾರೆ. ಸುಮ್ಮನಿರು."

"ಏನಿಲ್ಲ...... ಅವಳು ಸುಮಾರಾಗಿದ್ದರೆ?.... ಒಂದು ಫೇಸ್‌ಕ್ರೀಂನ ಆಡ್..... ಅದನ್ನು ಉಪಯೋಗಿಸಿದರೆ ಬ್ಯೂಟಿಫುಲ್ ಆಗ್ತಾಳೆ ಅಂತ..... ಆಡ್ವಸ್ ಮೂಡಬೇಕು. ಅದಕ್ಕೇ ಕೇಳಿದೆ...." ಅವಳು ಹೇಗಿದ್ದಾಳೆ?

"ಈ ಆಕ್ಟಿಂಗ್ ಮಾಡೆಲಿಂಗ್ ಎಲ್ಲಾ ನಮಗಲ್ಲ. ನೀನೂ ಇದನ್ನೆಲ್ಲಾ ಬಿಟ್ಟು ಸರಿಯಾದ ಕೇಲದಕ್ಕೆ ಸೇರು. ನನ್ನ ಮಾತು ಕೇಳು."

'ನಾನು ಹೆಚ್ಚಿಗೆ ಓದಿಲ್ಲ. ನನಗೆ ಯಾರು ಕೆಲಸ ಕೊಡ್ತಾರೆ.....?"

"ಪ್ರೈವೇಟ್‌ನಲ್ಲಿ ಡಿಗ್ರಿ ಮಾಡ್ಕೋ.... ನಿಮ್ಮ ಮಾಮನ ತರಹ ಪೋಲಿಸ್ ಆಫೀಸರ್ ಆಗಬಹುದು...,"

"ಬೇಡಪ್ಪಾ ಬೇಡ. ನನಗೆ ಪೋಲಿಸ್ ಕೆಲಸಾ ಮಾತ್ರ ಬೇಡ. ಬರೀ ಕಳ್ಳನ್ನ ಹಿಡಿಯೊ ಕೆಲಸ ಯಾರು ಮಾಡ್ತಾರೆ. ನಟನಾಗಿದ್ದರೆ, ಹೀರೋ ಆಗಬಹುದು. ವಿಲನ್ ಆಗಬಹುದು, ದೇಶ ಭಕ್ತ, ಲಾಯರ್, ಡಾಕ್ಟರ್, ರೈತ, ಕೊಲೆಗಾರ ಏನು ಬೇಕಾದ್ರೂ ಆಗಬಹುದು. ಅದೇ ಮಜಾ......"

"ನಿನಗೆ ಅದೇ ಸರಿ ಅನಿಸಿದರೆ ನಾನೇನು ಹೇಳಲಿ? ಬಾ ಒಳಗೆ."

ವಾಸುಕಿ, ಸೀದಾ ಅವರ ಮನೆಯಿಂದ ಗೋಪಿಯನ್ನು ಹುಡುಕಿಕೊಂಡು ಪೋಲಿಸ್ ಸ್ಟೇಷನಿಗೆ ಬಂದ. ಅಲ್ಲಿ ಅವನಿರಲಿಲ್ಲ. ಅಲ್ಲಿಂದ ಸೀದಾ ವನಜನ ಮನೆಗೆ ಬಂದ. ಆದರಾತಿಥ್ಯದ ನಂತರ ವನಜಳಿಗ ಹೇಳಿದ.

"ಗೋಪಿ ಬಂದರೆ, ನನ್ನನ್ನು ತಕ್ಷಣವೇ ನೋಡಬೇಕು ಅಂತ ಹೇಳಿ, ಹಾಗೇ ನೀವೂ ಬನ್ನಿ."

"ಯಾಕೆ ಏನು ವಿಷಯ?"

"ಏನಿಲ್ಲ, ನನ್ನ ಬಳಿಗೆ ಬರಲಿ ನಾನು ಮಾತನಾಡ್ತೀನಿ" ಎನ್ನುತ್ತಾ ಹೊರಟೇ ಹೋದ. ಆದಿನವೆಲ್ಲಾ ಗೋಪಿ ಬರಲಿಲ್ಲವಾದ್ದರಿಂದ, ವಾಸುಕಿ ತಾನೇ ಗೋಪಿಯ ಮನೆಗೆ ಬಂದ. ಅದೇ ಸಮಯಕ್ಕೆ ವನಜಳೂ ಅಲ್ಲಿಗೆ ಬಂದಳು. ಎಲ್ಲರೂ ಕುಳಿತು ನಗುತ್ತಾ ಹರಟೆ ಹೊಡೆಯುತ್ತಿದ್ದರು. ಪರಶುರಾಮ ಮಾತ್ರ ಬಂದಿರಲಿಲ್ಲ, ಮೈಥಿಲಿ ವನಜಳ ಪರಿಚಯವನ್ನು ಮಾಡಿಕೊಟ್ಟಳು. ವನಜ ವೇಣುವನ್ನು ನೋಡಿ ಕೆಟ್ಟ ಮುಖ ಮಾಡಿದಳು. ಗೋಪಿ ನಕ್ಕ

ವಾಸುಕಿ ಗೋಪಿಯನ್ನು ಪ್ರತ್ಯೇಕವಾಗಿ ಕರೆದು ಏನನ್ನೋ ಹೇಳಿದ..... ಗೋಪಿ ವೇಣುವನ್ನು ಕರೆದ. ನಿನ್ನ ಬಳಿ ಚೆನ್ನಾಗಿರುವ ಕ್ಯಾಮೆರಾ ಇದೆಯಾ ಕೇಳಿದ.

"ಹೂಂ, ಇದೆ. ಏಕೆ?"

"ಫಿಲಂ ಇದೆಯಾ ಹೇಳು. ಒಂದು ಗ್ರೂಪ್ ಫೋಟೋ ತೆಗೆಯೋಣ ಅಂತ."

"ಸರಿ. ತಡಿ ತಂದು ಕೊಡ್ತಿನಿ..... ಗೋಪಿ, ನಾನು ಸ್ವಲ್ಪ ವನಜನ ಹತ್ತಿರ ಮಾತನಾಡಬೇಕಲ್ಲ....."

"ಏನು ಮಾತು?" ಸಿಡುಕಿದ..... ಗೋಪಿ.

"ಆಡಲಿ ಬಿಡಿ ಗೋಪಿ..... ನೀವು ಕ್ಯಾಮೆರಾ ತಂದು ಕೊಡಿ..... ನೀವು ಮಹಡಿ ಮೇಲೆ ಹೋಗಿ. ನಾನು ವನಜನ್ನ ಕಳಿಸ್ತೀನಿ. ವೇಣು ತಲೆಯಾಡಿಸಿದಾಗ ಗೋಪಿ ವಾಸುಕಿಯನ್ನೇ ವಿಚಿತ್ರವಾಗಿ ನೋಡಿದ. ಸುಮ್ಮನಿರಿ ಎನ್ನುವಂತೆ ಸಂಜ್ಞೆಮಾಡಿ, ಎಲ್ಲರೂ ಸಿದ್ಧವಾಗಿರುವಂತೆ ಹೇಳಿ, ನಾನು ಪೋಟೋ ತೆಗೀತೀನಿ...." ಎಂದ. ಗೋಪಿ ಅಸಹನೆಯಿಂದ ತಾಯಿ ಬಳಿಗೆ ಹೋಗಿ ಎಲ್ಲಾ ತಿಳಿಸಿದ. ವಜನಳಿಗೆ ಅದೆಲ್ಲ ಹಿಡಿಸುವುದಿಲ್ಲ ಅಂತಂದ.

"ಇದೇ ಸರಿಯಾದ ಸಮಯ. ವಾಸುಕಿಯ ಪ್ಲಾನ್ ಏನೂಂತ ನನಗೀಗ ಅರ್ಥವಾಗ್ತಿದೆ. ವನಜನ ಹತ್ತಿರ ಮಾತನಾಡಬೇಕೂಂತ ವೇಣು ಹೇಳಿದ್ದ. ಆಡಲಿ ಬಿಡು... ನಾನು ನಿನ್ನ ಅತ್ತೇನ ಸವಿತನ್ನ ಹೊರಕ್ಕೆ ಕರೆದುಕೊಂಡು ಹೋಗ್ತೀನಿ. ಆಮೇಲೆ ನೀನು ವನಜನ್ನ ಮನೆಗೆ ಕರೆದುಕೊಂಡು ಹೋಗಿ ಬಿಟ್ಟು ಬಾ......." ಗೋಪಿ ತಲಾಯಾಡಿಸಿದ.

"ಥೂ ಇದೆಲ್ಲಾ ಏನಮ್ಮಾ..... ಯಾರಾದ್ರೂ ಪ್ರೀತಿಸಿ ಮದುವೆಯಾಗೋದಾದ್ರೆ ಇಷ್ಟು ಕಷ್ಟ ಪಡಬೇಕಾ?" ಅವನ ಸಹನೆ ಮೀರಿತ್ತು.

"ಮೆಲ್ಲಗೆ ಮಾತಾಡು ನಿಮ್ಮ ಅತ್ತೆಗೆ ತುಂಬಾ ಕುತೂಹಲ. ನಿಮ್ಮಪ್ಪನ ಕಿವಿಗೆ ಬಿದ್ದರೆ ಕೆಲಸ ಕೆಡುತ್ತೆ."

"ವೇಣು ಮೇಲೆ ವನಜಂಗೆ ನಂಬಿಕೆ ಇಲ್ಲ. ಅವತ್ತೇ ಕಮಂಗಿ ಅಂತ ಬೈದಿದ್ದಳು....." ಅವನಿಗೆ ಮದುವೆ ಗೊತ್ತಾಗಿದೆಯಂತೆ. ಅದುಬೇರೆ ಕೇಡು.

"ಅವನು ಕಮಂಗೀನೇ....... ನೀನು ಅವರಿಬ್ಬರಿಗೆ ಕಾಣಿಸಿ ಕೊಳ್ಳದಂತೆ ಮರೆಯಲ್ಲಿರು. ಅವನೇನಾದರೂ ಅವಿವೇಕಿ ತರಹ ವರ್ತಿಸಿದರೆ, ಚೆನ್ನಾಗಿ ನಾಲ್ಕು ಬಡಿ. ಬೇಕಾದರೆ ಲಾಕಪ್‌ಗೆ ಹಾಕು"

"ವನಜಳೇ ಕೆನ್ನೆಗೆ ಬಾರಿಸ್ತಾಳೆ ಬಿಡು." ಎಂದ ಗೋಪಿ ಮಹಡಿ ಏರಿ, ಯಾರಿಗೂ ಕಾಣದಂತೆ ಒಂದು ಜಾಗದಲ್ಲಿ ನಿಂತ. ಸೀಟಿ ಹೊಡಿಯುತ್ತಾ ಬಂದ ವೇಣು. ಕಿಟಕಿಯ ಬಳಿನಿಂತ, ವಾಸುಕಿ, ವನಜಾ ಒಟ್ಟಾಗಿ ಮಹಡಿ ಏರಿ ಬಂದಾಗ, "ಹಲೋ....... ಮಿಸ್ ವನಜಾ......" ಎಂದ ವೇಣು....

ವನಜಾ ಮಾತನಾಡಲಿಲ್ಲ.

"ಇವನು ಗೋಪಿಯ ಕಸಿನ್. ಸಿನಿಮಾ ನಟ ನೋಡಿ, ಅದಕ್ಕೆ ಇವನ ಸ್ಟೈಲ್ ಹೀಗೆ. ಅವನು ನಿಮ್ಮ ಹತ್ತಿರ ಮಾತನಾಡಬೇಕು ಅಂದ...."

"ಏನಂತೆ? ವನಜ ಉದಾಸೀನವಾಗಿ ಕೇಳಿದಳು."

"ನಗೊಂತ್ತಿಲ್ಲ, ವೇಣು, ಅದೇನೋ ಮಾತನಾಡಬೇಕು ಅಂದ್ರಲ್ಲ..... ಬೇಗ ಮಾತನಾಡಿ..... ಎಲ್ಲರೂ ಸಿನಿಮಾಕ್ಕೆ ಹೋಗುವ ಪ್ಲಾನ್ ಹಾಕಿಕೊಂಡಿದ್ದಾರೆ......"

"ಮಿಸ್ ವನಜಾ..... ಎಂದು ವನಅವಳ ಬಳಿಗೆ ಬಂದ. ಅಷ್ಟರಲ್ಲಿ ವಾಸುಕಿ ಅಲ್ಲಿಂದ ಕದಲಿದ್ದ. " ದೂರ ನಿಂತು ಮಾತನಾಡಿ ಎಂದು ವನಜಾ ರೇಗಿದ್ದು ಗೋಪಿಗೆ ಕೇಳಿಸಿತ್ತು.

"ನಿಮ್ಮ ಫೇಸ್ ಕಟ್ ಎಷ್ಟು ಚೆನ್ನಾಗಿದೆ ಗೊತ್ತಾ?"

"ಈಡಿಯಟ್.....ಗೋಪಿಗೆ ತಿಳಿದರೆ ನಿಮ್ಮನ್ನು ಸಿಗಿದು ಹಾಕ್ತಾನೆ...."

"ನನಗೆ ಗೊತ್ತು ನೀವು ಗೋಪಿಯ ಫಿಯಾನ್ಸಿ ಅಂತ.....ನಾನು ನಿಮಗೆ ಒಂದು ಆಡ್‌ಪಿಕ್ಚರ್‌ನಲ್ಲಿ ಕೆಲಸ ಮಾಡಲು ಅವಕಾಶ ಕೊಡ್ತೀನಿ.... ಚೆನ್ನಾಗಿ ದುಡ್ಡು ಕೊಡ್ತೀನಿ"

"ನಿಮ್ಮ ದುಡ್ಡು ಕಾಸು ನನಗೆ ಬೇಡ...... ಎಂದು ತಿರುಗಲಿದ್ದವಳನ್ನು ವೇಣು ಹಿಡಿದು ನಿಲ್ಲಿಸಿದ. ಅವಳು ಕಿರುಚಿದಳು. ಅವನು ಹೆದರಿ ಕೈ ಬಿಟ್ಟ. ವನಜ ಅವನ ಕೆನ್ನೆಗೆ ಬಾರಿಸಿ ದುಡು ದುಡು ಕೆಳಗಿಳಿದು ಬಂದಳು. ಕೆಳಗೆ ಯಾರೂ ಇರಲಿಲ್ಲ. ಯಾರಿಗೂ ಹೇಳದೇ ತನ್ನ ಮನೆಗೆ ಹೊರಟು ಹೋದಳು."

"ಕೆನ್ನೆ ಉಜ್ಜುತ್ತಾ ನಿಂತಿದ್ದವನನ್ನು ಮೊದಲು ಮಾತನಾಡಿಸಿದವನು ಗೋಪಿ..... " ಇಲ್ಲೇನು ಮಾಡ್ತೀದೀಯಾ? ಕೆಳಗಿಳಿದು ಬಾ.... ಎಂದ ಆಜ್ಞೆ ಮಾಡುವವನಂತೆ. ಬಾಲ ಮುದುರಿದ ನಾಯಿಯಂತೆ ವೇಣು ಕೆಳಗಿಳಿದು, ಬಂದ. ವಾಸುಕಿ ಕ್ಯಾಮೆರಾದಿಂದ ಫಿಲಂ ರೋಲ್‌ನ್ನು ಜೋಪಾನವಾಗಿ ತೆಗೆದಿಟ್ಟುಕೊಂಡ.

ವನಜಾ ಕೋಪಿಸಿಕೊಂಡು ಮನೆಗೆ ಹೊರಟು ಹೋಗಿರಬಹುದು

ಎಂದು ಗೋಪಿ ಊಹಿಸಿದ. ವಾಸುಕಿಗೆ ಹೇಳಿ, ಅವಳ ಮನೆಕಡೆ ನಡೆದ. ಅರ್ಧ ದಾರಿಯಲ್ಲೇ ಸಿಕ್ಕಳು. ಧುಮುಗುಟ್ಟುತಿದ್ದ ವನಜ ಗೋಪಿಯೊಡನೆ ಮಾತನಾಡಲಿಲ್ಲ. ತಂಗಿ ಜತೆಯಲ್ಲಿದ್ದಳು "ಏನಾಯ್ತು? ನಿಮ್ಮಕ್ಕನಿಗೆ? ಏಕೆ ಹೀಗಿದ್ದಾಳೆ" ಅಂತ ಕೇಳಿದೊಡನೆ ವನಜ ಅಳಲಾರಂಭಿಸಿದಳು......

"ನಾನು ಅವತ್ತೇ ಹೇಳಿದ್ದೆ. ಆ ನಿನ್ನ ಕಸಿನ್.... ಹಲ್ಕಾ ಅಂತ.... ಅವನ ಜತೆ ನನ್ನನ್ನು ಬಿಟ್ಟು ನೀವೆಲ್ಲಾ ಹೊರಟು ಹೋಗೋದಾ?"

"ನಾನು ಕೆಳಗಿದ್ದೆ. ನನ್ನನ್ನು ಒಂದ್ಮಾತು ಕೂಗಿದ್ದರೆ ಓಡಿ ಬಂದು ಅವನಿಗೆ ಸರಿಯಾಗಿ ಬುದ್ಧಿ ಕಲಿಸುತ್ತಿದ್ದೆ..... "

"ಆಡ್ ಪಿಕ್ಚರ್ ತೇಗೀತಾನಂತೆ. ನಾನು ಮಾಡೆಲ್ ಆಗಬೇಕಂತೆ....."

"ನಾನ್ಸೆನ್ಸ್, ಅವನ ಮಾತನ್ನು ನಂಬಿದೆಯಾ? ಬರೀ ಬೊಗಳೆ. ಅವನ ಹತ್ತಿರ ಅಷ್ಟು ದುಡ್ಡೆಲ್ಲಿದೆ?" ಬರೀ ಸುಳ್ಳು ಹೇಳ್ತಾನೆ.

"ನಿಮ್ಮ ಫೇಸ್ ಕಟ್ ಚೆನ್ನಾಗಿದೆ ಅಂತ ಹತ್ತಿರಬಂದ. ಕೆನ್ನೆಗೆ ಒಂದು ಬಿಗಿದೆ......"

"ಒಳ್ಳೇ ಕೆಲಸ ಮಾಡಿದೆ....."

"ಅವನು ನಿಮ್ಮಪ್ಪನಿಗೆ ಹೇಳಿದರೇ....."

"ಆ ಧೈರ್ಯ ಅವನಿಗೆಲ್ಲಿದೆ? ಅಲ್ಲದೇ ಅಪ್ಪನಿಗೆ ಅವನ ಯೋಗ್ಯತೆ ಗೊತ್ತು..... ನೀನು ಹೆದರಬೇಡ ಸುಮ್ಮನಿರು."

"ಹೆದರಬೇಡ ಸುಮ್ಮನಿರು. ಎಲ್ಲಾ ಸರಿ ಹೋಗುತ್ತೆ ಧೈರ್ಯವಾಗಿರು ಅಂತ ಹೇಳುವ ನಿನ್ನ ಈ ಉಪದೇಶದ ಮಾತುಗಳನ್ನು ಕೇಳಿ ಕೇಳಿ ಸಾಕಾಗಿ ಹೋಯಿತು. ನಾನೇ ನೀನಾಗಿದ್ದಿದ್ದರೆ, ಅವನನ್ನು ಎಳೆದುಕೊಂಡು ಹೋಗಿ ಲಾಕಪ್‌ಗೆ ತಳ್ಳುತ್ತಿದ್ದೆ."

"ಅವನು ನನ್ನ ಕಸಿನ್ ಕಣಮ್ಮಾ..... ನನ್ನ ಅತ್ತೆ ಏನಂದು ಕೊಳ್ತಾರೆ....?"

"ಇಂಥಾ ವಿಷಯದಲ್ಲಿ ಯಾವ ಸಂಬಂಧವೂ ಮಧ್ಯೆ ಬರಬಾರದು....."

"ಈಗ ಆಯ್ತಲ್ಲ ಬಿಡು.... ನೀನು ನನ್ನ ಮಡದಿಯಾಗಿ ನಮ್ಮ ಮನೆಗೆ ಬಂದ ಮೇಲೆ, ನೀನು ಹೇಗೆ ಹೇಳ್ತೀಯೋ ಹಾಗೆ......"

"ಅಂತೂ ಇಷ್ಟು ದಿನಕ್ಕೆ ನಿನ್ನ ಬಾಯಲ್ಲಿ ನನ್ನನ್ನು ನಿನ್ನ ಮಡದಿಯನ್ನಾಗಿ ಕರೆಸಿಕೊಳ್ಳುವ ಮಾತು ಬಂತು. ಅಂತೂ ಈ ವಿಷಯದಲ್ಲಿ ನಿನ್ನ ಕಸಿನ್ ಬಂದು ನಿನ್ನ ಬಾಯಿ ಬಿಡಿಸಿದ. ಜಲಜಾ ಹೋಗೇ ಆ ಅಂಗಡಿಯಿಂದ ನಾಲ್ಕು ಚಾಕಲೇಟ್ಸ್ ತಗೊಂಬಾರೇ..... " ಜಲಜಾ ಓಡಿದಳು.

"ನಾಲ್ಕು ಚಾಕಲೇಟ್ಸ್ ಯಾರ್ಯಾರಿಗೆ?"

"ನನಗೊಂದು, ನಿನಗೊಂದು ಜಲಜಂಗೊಂದು, ಇನ್ನೊಂದು ಆ ಕಮಂಗಿಗೆ. ವನಜಾ ನಗುತ್ತಾ ಉತ್ತರಿಸಿದಳು. ಜಲಜ ಚಾಕಲೇಟ್ ತಂದು ಹಂಚಿದಳು."

"ಇನ್ನೊಂದು ವಾರ ಅಷ್ಟೇ. ಆಮೇಲೆ ನಮ್ಮ ಈ ಕಷ್ಟವೆಲ್ಲಾ ಬಗೆ ಹರಿದು ಹೋಗುತ್ತೆ. ಅಲ್ಲವೇನೇ ಜಲಜಾ.... ಚಾಕಲೇಟ್ಸ್ ತಿನ್ನುತ್ತಾ ಗೋಪಿ ನುಡಿದಾಗ ವನಜಾ ಮೊಣಕೈನಿಂದ ಅವನನ್ನು ತಿವಿದಳು....."

"ಬಾರೇ ಹೊತ್ತಾಯ್ತು. ನನಗೆ ಓದೋದಿದೆ" ಎನ್ನುತ್ತಾ ಜಲಜಾ ಮುಂದೆ ಮುಂದೆ ನಡೆದಾಗ, ವನಜಾ ಅವಳ ಹಿಂದೆ ನಡೆದಳು. ಗೋಪಿ ತನ್ನ ಮನೆ ದಾರಿ ಹಿಡಿದ. ಅವನು ಬರುವಷ್ಟರಲ್ಲಿ ವೇಣು, ತನಗೆ ಕೆಲಸವಿದೆಯೆಂದು ಹೊರಟು ಹೋಗಿದ್ದ. ಪಾರ್ಕಿನಲ್ಲಿ ವಾಸುಕಿಯನ್ನು ಕಾದು ಕಾದು ಬೇಸತ್ತು ಮೈಥಿಲಿ, ಜಾನಕಿ, ಸವಿತಾ ವಾಪಸ್ಸು ಬಂದಿದ್ದರು.

"ಮೈಥಿಲಿ ಪಿಸುದನಿಯಲ್ಲಿ ಮಗನೊಡನೆ ಹೇಳಿದ್ದಳು."

"ವಾಸುಕಿ, ನಿಮ್ಮ ತಂದೆನ, ಮುಖ್ಯ ಅತಿಥಿಯಾಗಿ ಕರೆದಿದಾನಂತೆ. ಅದಕ್ಕೆ ನಾನೇ ಭಾಷಣ ತಯಾರಿಸಿಕೊಡಬೇಕಂತೆ. ಏನೇನು ಪಾಯಿಂಟ್ಸ್ ಹಾಕಿಕೊಡಲಿ?"

"ಅಪ್ಪನ ವಿಷಯ ನಿನಗಿಂತ ಚೆನ್ನಾಗಿ ಯಾರಿಗೆ ಗೊತ್ತು? ಅಪ್ಪನಿಗೆ ಯಾವ ಅನುಮಾನ ಬರಬಾರದು ಅಷ್ಟೇ......"

"ಅವತ್ತಿನ ಸಮಾರಂಭದಲ್ಲಿ, ನಮ್ಮ ಸವಿತನಿಂದ ನಾಲ್ಕಾರು ಹಾಡುಗಳನ್ನು ಹೇಳಿಸಿದರೆ, ಇವಳಿಗೂ ಪ್ರೋತ್ಸಾಹ ಸಿಕ್ಕಂತಾಗುತ್ತದೆ."

"ಅದೆಲ್ಲಾ ನಂಗೊತ್ತಿಲ್ಲಮ್ಮಾ.... ಅಪ್ಪನ್ನೇ ಕೇಳು ಏನಂತಾರೋ?..... ಬೇಕಾದರೆ ವಾಸುಕೀನ ಕೇಳು...." 'ಅದು ಸರಿ' ಮೈಥಿಲಿ ನುಡಿದಳು.

ಸಂಘದ ವಾರ್ಷಿಕ ಚಟುವಟಿಕೆಗಳು ಒಂದೊಂದಾಗಿ ಪ್ರಾರಂಭವಾಗಿ ಕೆಲವು ಮುಗಿದಿದ್ದವು. ಸದಸ್ಯರ ಕುಟುಂಬದವರ ಮಕ್ಕಳಿಗಾಗಿ ನಡೆಸಿದ್ದ ಕೆಲವು ಸ್ಪರ್ಧೆಗಳು, ಮಹಿಳೆಯರಿಗಾಗಿ, ಪುರುಷರಿಗಾಗಿ ಏರ್ಪಡಿಸಿದ್ದ ಪ್ರತ್ಯೇಕ ಸ್ಪರ್ಧೆಗಳು, ಸಂಗೀತ ಸ್ಪರ್ಧೆ, ರಂಗೋಲಿ ಸ್ಪರ್ಧೆ, ಕವನ ಸ್ಪರ್ಧೆ, ಎಲ್ಲಾ ನಡೆದು ಬಹುಮಾನಿತರ ಹೆಸರುಗಳನ್ನು ಲಿಸ್ಟ್ ಮಾಡಿಯಾಗಿತ್ತು. ಸಮಾರಂಭದ ದಿನ ಬಹುಮಾನ ವಿತರಣೆ ನಡೆಯಬೇಕಾಗಿತ್ತು. ಆಮಾತು ಬಂದಾಗ ಮೈಥಿಲಿ ಹೇಳಿದ್ದಳು.

"ಬಹುಮಾನ ವಿತರಣೆ. ಮೊದಲು ನಡೆದು ಹೋಗಲಿ, ಏಕೆಂದರೆ ವಿಪರೀತ ಗದ್ದಲವಾಗುತ್ತೆ. ವಿವಾಹದ ಕಾರ್ಯಕ್ರಮದ ದಿನ, ಬರೀ ವಿವಾಹದ ಕಲಾಪ ಮಾತ್ರ ಇರಲಿ. ಬರೀ ಅವರ ಮನೆಯವರು ಆಪ್ತರನ್ನು ಮಾತ್ರ ಕರೆಸಿದರೆ ಒಳ್ಳೇದು ಅಂತ ನನ್ನ ಅಭಿಪ್ರಾಯ."

"ಹೌದು ಅದೆ ಸರಿ. ಈಸಲ, ಸುಮಾರು ಎಂಟು ಜೋಡಿಗಳು ದಂಪತಿಗಳಾಗುತ್ತಾರೆ. ಅವರುಗಳಿಗೂ ಅವರವರ ಮನೆಯವರು ಬರಲಿ ಅಂತ ಆಸೆ ಇರುತ್ತೆ. ಹಾಗಾಗಿ ಒಂದು ಮನೆಯಿಂದ ಹತ್ತೊ ಜನ ಅಂತ ಲೆಖ್ಖಹಾಕಿದರೂ, ನೂರೈವತ್ತಕ್ಕಿಂತ ಹೆಚ್ಚು ಜನ ಆಗ್ತಾರೆ. ಜತೆಗೆ ನಾವುಗಳು ಸೇರಿ ಒಟ್ಟು ಇನ್ನಾರು ಜನರು. ಇನ್ನೂರು ಜನಕ್ಕೆ ಬಫೆ ಊಟ, ಫಲತಾಂಬೂಲ ಅಷ್ಟೇ. ಒಟ್ಟು ಎಷ್ಟು ಖರ್ಚಾಗುತ್ತೇ ಅದನ್ನು ಎಲ್ಲರೂ ಸಮನಾಗಿ ಹಂಚಿಕೊಳ್ಳುವುದು ಅಂತ ನಿರ್ಧರಿಸಿದೀನಿ."

"ಅದಕ್ಕೆ ಎಲ್ಲರ ಒಪ್ಪಿಗೆ ಇದೆಯಾ?"

"ಒಪ್ಪಿದವರು ಕೊಡ್ತಾರೆ. ಗೊಣಗುವವರನ್ನು ನಾವು ಮತ್ತೆ ಕೇಳುವುದಿಲ್ಲ. ಕೊಟ್ಟರೆ ಕೊಡಲಿ. ಸಂಘದ ಫಂಡ್‌ನಿಂದ ಹಣವನ್ನು ತೆಗೆದು ಖರ್ಚು ಮಾಡ್ತೀನಿ. ಇದರಿಂದ ಸಮಾಜಕ್ಕೆ ಲಾಭ. ಸಂಘಕ್ಕೆ ನಷ್ಟವಿಲ್ಲ. ಫಂಡ್ ಕಲೆಕ್ಷನ್ ನಡೀತಾನೇ ಇರುತ್ತಲ್ಲ......"

"ಇನ್ನೊಂದು ಮಾತು ವಾಸುಕಿ..... ನಮ್ಮ ಸವಿತನ್ನ ನೋಡಿದೀಯಲ್ಲ.... ಅವಳು ಸಂಗೀತ ಕಲಿತಿದ್ದಾಳೆ. ಚೆನ್ನಾಗಿ ಹಾಡ್ತಾಳೆ.... ಅವಳಿಗೆ ಒಂದು ನಾಲ್ಕು ಹಾಡು ಹೇಳುವ ಅವಕಾಶ ಮಾಡಿ ಕೊಡ್ತೀರಾ ಅಂತ......"

"ಅರೇ! ಆಂಟಿ, ಮೊದಲೆ ಹೇಳಿದ್ದರೇ.... ಸ್ಪರ್ಧೆಯನ್ನು ಏರ್ಪಡಿಸಿದ್ದೆವಲ್ಲ. ಖಂಡಿತಾ ಬಹುಮಾನ ಸಿಕ್ಕಿರುತ್ತಿತ್ತು. ಅವರಿಗೆ"

"ಪರವಾಗಿಲ್ಲ. ಸಮಾರಂಭದ ದಿನ ಹಾಡಲು ಛಾನ್ಸ್ ಸಿಕ್ಕರೇ ಸಾಕು."

"ಖಂಡಿತಾ ಛಾನ್ಸ್ ಇರುತ್ತೆ. ಪ್ರಾರ್ಥನೆ ಗೀತೆಯನುನ ಅವರೇ ಹಾಡಲಿ. ಒಂದೆರಡು ಶುಭವನ್ನು ಹಾರೈಸುವ ಹಾಡುಗಳನ್ನು ಹೇಳಲಿ. ಸಮಾರಂಭಕ್ಕೆ ಕಳೆ ಕಟ್ಟುತ್ತೆ...."

"ಸವಿತನ್ನ ಕರೀತೀನಿ.... ನೀವೇ ಹೇಳಿಬಿಡಿ."

"ಆಂಟಿ ಕರೆದ ಕೂಡಲೇ ಸವಿತಾ ಓಡೋಡಿ ಬಂದಳು. ವಾಸುಕಿ ಸಮಾರಂಭದಲ್ಲಿ ಹಾಡುವಂತೆ ಕೇಳಿದಾಗ, ಸವಿತಾ ಖುಷಿಯಿಂದ

ಒಪ್ಪಿಕೊಂಡಳು."

ಮುಂದಿನ ಭಾನುವಾರವೇ ಸಮಾರಂಭ. ಚೆನ್ನಾಗಿ ಪ್ರಾಕ್ಟೀಸ್ ಮಾಡಿ.... ಎಂದು ಹಾರೈಸಿ ವಾಸುಕಿ ಹೊರಟ. ಗೋಪೀನ ನಮ್ಮ ಆಫೀಸಿಗೆ ಕಳಿಸಿ.... ಅವರ ಹತ್ತಿರ ಮುಖ್ಯವಾದ ಕೆಲವು ವಿಷಯಗಳನ್ನಾ ಮಾತನಾಡಬೇಕು ಎಂದು ಮೈಥಿಲಿಗೆ ತಿಳಿಸಿದ.

ಗೋಪಿ ಬಿಡುವು ಮಾಡಿಕೊಂಡು ವಾಸುಕಿಯ ಸಂಘದ ಆಫೀಸಿಗೆ ಬಂದ.

"ಹಲೋ! ಗೋಪಿ ಹೇಗಿದೀರಿ?" ವನಜಾ ನೀವು ಭೇಟಿ ಯಾಗ್ತಾಇದೀರಾ? ಹೇಗೆ?" ನಗುತ್ತಾ ಪ್ರಶ್ನಿಸಿದ.

"ಎಲ್ಲಾದರೂ ಉಂಟೆ ವಾಸುಕಿ? ವನಜಳ ಮದುವೆ ಗೊತ್ತಾಗಿದೆ. ಅವರ ತಂದೆ ತಾಯಿಯ ಅಪ್ಪಣೆ ಇಲ್ಲದೇ ಅವಳು ಬರುವಂತೇ ಇಲ್ಲ."

"ಛೇ.... ಛೇ.... ಎಂಥಾ ಅನ್ಯಾಯ? ಅವರ ತಂದೆ ಏನೋ ಒಪ್ಪಿಗೆ ಕೊಟ್ಟಿದ್ದಾರೆ. ಆದರೂ ನನಗೆ ಅನುಮಾನ. ನೀವು ಆಗಾಗ ಹೋಗಿ, ಏನಾದರೂ ಮಾತು ಕತೆ ನಡೆದಿದೆಯೇ ಅಂತ ತಿಳಿದುಕೊಂಡಿದ್ದರೆ ಚೆನ್ನಾಗಿತ್ತು."

"ವನಜಳ ತಂದೆ ಒಂಥರಾ ಮನುಷ್ಯ. ಮೊದಲೇ ಅವರಿಗೆ ನನ್ನನ್ನು ಕಂಡರಾಗುವುದಿಲ್ಲ. ಅದಕ್ಕೇ ಹೋಗೇ ಇಲ್ಲ.... ಸಮಾರಂಭದ ಸಿದ್ಧತೆಗಳೂ ಹೇಗೆ ನಡೆಯುತ್ತಿವೆ?" ನನ್ನ ಸಹಾಯ ಬೇಕಾದರೆ ಕೇಳಿ.

"ನಿಮ್ಮ ಸಹಾಯ ಬೇಕೇ ಬೇಕು ಗೋಪಿನಾಥ್. ಸಮಾರಂಭ ಅಂದರೆ ಜನ ಸೇರುತ್ತಾರೆ. ಎಲ್ಲಾ ನಮ್ಮವರೇ ಆದರೂ, ಅವರಲ್ಲಿ ಪರಿಚಿತರು ಯಾರು? ಅಪರಿಚಿತರು ಯಾರು ಅಂತ ಗುರುತಿಸುವುದು ಕಷ್ಟ ಆಗುತ್ತೆ. ನಮಗೆ ಆಗದವರು ಗಲಾಟೆ ಎಬ್ಬಿಸಬಹುದು. ಆದ್ದರಿಂದ ಪೋಲಿಸ್ ರಕ್ಷಣೆ ಅಗತ್ಯ. ಯೂನಿಫಾರಂ ಹಾಕಿಕೊಂಡ, ನಾಲ್ಕಾರು ಕಾನ್‌ಸ್ಟೇಬಲ್ಸ್‌ಗಳು ನಾಲ್ಕು ಕಡೆ ನಿಂತಿದ್ದರೂ ಸಾಕು.... ಸ್ವಲ್ಪ ಭಯ ಇರುತ್ತೆ."

"ಓ..... ಅದಕ್ಕೇನು ಸಿಬ್ಬಂದೀನ ನಾನು ಒದಗಿಸ್ತೀನಿ."

"ಥ್ಯಾಂಕ್ಸ್.... ನಿಮ್ಮ ತಂದೇನೇ ಮುಖ್ಯ ಅತಿಥಿ. ನಿಮ್ಮ ತಾಯಿ ಭಾಷಣವನ್ನು ಸಿದ್ಧ ಮಾಡಿಕೊಡುತ್ತಾರೆ. ನಿಮ್ಮ ಕಸಿನ್ ಸವಿತಾ ಪ್ರಾರ್ಥನಾ ಗೀತೆಗಳನ್ನು ಹುಡುತ್ತಾರೆ.... ಇನ್ನೇನು ಬೇಕು ಅಲ್ವಾ?.... ಅದೆಲ್ಲಾ ಸರಿ. ನೀವು ಒಂದು ಸಲ ಹೋಗಿ ವನಜಳನ್ನು ಮಾತನಾಡಿಸಿಕೊಂಡು ಬನ್ನಿ. ಆತಂಕದಿಂದ ಬಳಲಿ ಹೋಗಿರುತ್ತಾರೆ. ಸಮಾಧಾನ ಹೇಳುವುದು ನಿಮ್ಮ

ಕರ್ತವ್ಯವಲ್ಲವೆ?...."

"ಹೌದು" ಎನ್ನುತ್ತಾ ಗೋಪಿ ಎದ್ದ. ಸೀದಾ ವಲಜನ ಮನೆಗೆ ಬಂದ. ಅಕ್ಕತಂಗಿಯರಿಬ್ಬರೇ ಇದ್ದರು. "ಎಲ್ಲಿ ನಿಮ್ಮ ಅಪ್ಪ ಅಮ್ಮ.....?" ಎಂದು ಪ್ರಶ್ನಿಸಿದ.

"ಗೋಪಿ ಯಾಕೆ ಹೀಗ್ಮಾಡ್ತೀಯಾ? ನನಗಂತೂ ಪ್ರಾಣವೇ ಹೋಗುತ್ತೆ. ಅಪ್ಪ ಅಮ್ಮ ಜವಳಿ ವ್ಯಾಪಾರಕ್ಕೆ ಹೋಗಿದ್ದಾರೆ. ಅಳಿಯನಿಗೆ ಅಂತ ಹೊಸ ಉಂಗುರ ತಂದಿದ್ದಾರೆ."

"ಅದೆಲ್ಲಾ ಯಾಕೆ ತಂದರು? ವಾಸುಕಿ ಏನಂತಾನೋ?"

"ಅದನ್ನ ಹಾಕಿ ಕೊಳ್ಳುವವನು ವಾಸುಕಿಯಲ್ಲ. ನೀನು.... ತಡೀ ತೋರಿಸ್ತೀನಿ. ಚೆನ್ನಾಗಿದೆಯಾ ಅಂತ ನೋಡಿ ಹೇಳು....."

"ಪರವಾಗಿಲ್ಲ ಬಿಡು. ಹೇಗಿದ್ದರೂ ಅದು ನನಗಾಗಿ ತಂದಿದ್ದು ಅಂತ ನನಗೆ ಗೊತ್ತು. ವಾಸುಕಿ ಸರಳವಾದ ಮದುವೆ ಅಂತಾನೆ.... ನಿಮ್ಮಪ್ಪ ಜವಳಿ, ಉಡುಗೊರೆ ಅಂತ ಯಾಕೆ ತರ್ತಾರೆ?"

"ನಂಗೊತ್ತಿಲ್ಲ. ಈಚೆಗೆ ವಾಸುಕೀನೂ ಬಂದಿಲ್ಲ. ಅವನು ಏನೋ ಕೈ ಕೊಡ್ತಾನೆ ಅನ್ನುವ ಅನುಮಾನ ನನಗೆ."

"ನಾನು ಈಗ ಅಲ್ಲಿಂದಲೇ ಬರ್ತಿದೀನಿ.... ಅವನೇ ಬಲವಂತ ಮಾಡಿ ಇಲ್ಲಿಗೆ ಕಳಿಸಿದ್ದು ನನ್ನನ್ನು."

"ಅಂದರೆ, ನಿನಗೆ ಸ್ವಂತ ಅಭಿಪ್ರಾಯವೇ ಇಲ್ಲ ಅಂತಾಯ್ತು."

"ಹಾಗಲ್ಲ ವನಜಾ.... ಅವನ ಪ್ಲಾನ್ ಏನೂಂತ ನನಗೆ ಸರಿಯಾಗಿ ಅರ್ಥವಾಗ್ತಿಲ್ಲ. ಆದರೆ ಒಂದು ಮಾತು ನಿಜ. ಗಲಾಟೆ ದೊಂಬಿ ಕಳ್ಳತನ ಏನೂ ನಡೆಯುಲ್ಲ. ನಾನು ಒಂದು ಪೋಲಿಸ್ ಪಡೇನೇ ಅಲ್ಲಿಗೆ ಕಳಿಸಿಸ್ತಿದೀನಿ."

"ಇದರ ಬದಲು ರಿಜಿಸ್ಟರ್ ಮ್ಯಾರೇಜೇ ವಾಸಿಯಾಗಿತ್ತು...."

"ಇದು ಹೊಸ ರೀತಿಯ ಮದುವೆ.... ಮುಂದೆ ನಮ್ಮ ಮಕ್ಕಳು ನಮ್ಮ ಅಪ್ಪ ಅಮ್ಮ ಹೀಗೆ ಮದುಯಾಗಿದ್ದರು ಅಂತ ನೆನೆಸಿಕೊಳ್ತಾರೆ ಬಿಡು.."

"ಅಂತೂ, ಇದರಲ್ಲೂ ನಿನಗೆ ತಮಾಷೆ....."

"ಹೀಗೆ ತಮಾಷೆ ಮಾಡುತ್ತಿರುವುದರಿಂದ ನಾನು ಹೀಗೆ ಆರೋಗ್ಯವಾಗಿದೀನಿ, ಇಲ್ಲದಿದ್ದರೆ, ಪೋಲಿಸ್ ನೌಕರಿ ಮಾಡೋದು ಸುಲಭನಾ? ಇಷ್ಟು ಹೊತ್ತಿಗೆ ಏನಾಗಿ ಹೋಗುತ್ತಿದ್ದೇನೋ"

"ಬಿಡು, ಬಿಡು, ನಾನು ಏನಾಗಿದೀನಿ ಅನ್ನುವ ಯೋಚನೆಯೇ ನಿನಗಿಲ್ಲ...."

"ನೀನು ಹೇಗೇ ಇದ್ದರೂ ನನಗೆ ಚೆನ್ನ ಬಿಡು...."

"ನಿಜ ಹೇಳು ಗೋಪಿ, ನಾನು ರೂಪವತಿ ಅಲ್ಲ ಅಂತ.... ನಿನಗೇನಾದರೂ ಬೇಸರಾನಾ?" ಅನುಮಾನದಿಂದ ಕೇಳಿದಳು.

"ನೀನು ಕುರೂಪಿ ಅಂತ ನಾನು ಎಂದಾದರೂ ಹೇಳಿದೀನಾ?"

"ಇಲ್ಲ, ನಾನು ಕುರೂಪಿಯಂತೂ ಅಲ್ಲ."

"ಸರಿ ಮತ್ತೆ ಸುಮ್ಮನಿರು. ಮತ್ತೆಂದೂ ನೀನು ಹೀಗೆ ಕೇಳಬಾರದು. ನನಗೆ ನೀನು ಮುಖ್ಯ, ನಿನ್ನ ರೂಪವಲ್ಲ. ತಿಳೀತಾ? ಇನ್ನು ಕೆಲವೇ ದಿನಗಳಲ್ಲಿ ನಾವಿಬ್ಬರೂ, ಎಲ್ಲಾ ಸರಿಹೋದರೆ, ದಂಪತಿಗಳಾಗುತ್ತೇವೆ.... ಆಮೇಲೆ ನಾನು ನೀನು ಇಬ್ಬರೇ... ಕೂತು ಬೇಕಾದಷ್ಟು ಮಾತನಾಡೋಣ. ಬೈ.... ಬೈ.... " ಎಂದ. ವನಜಾ ಖುಷಿಯಿಂದ ಕೈಯಾಡಿಸಿದಳು.

"ಅಕ್ಕಾ.... ಇದೇನೇ....? ಗೋಪಿ ಏನೇನೋ ಆಡಿದ್ನಲ್ಲ. ಅದೆಲ್ಲಾ ನಿಜನಾ? ಅಪ್ಪಂಗೆ ಗೊತ್ತಾದರೆ?"

"ಅಪ್ಪನಿಗೆ ಹೇಗೆ ಗೊತ್ತಾಗುತ್ತೆ? ನೀನು ಹೇಳುಲ್ಲ ಅಂತ ನನಗೆ ಗೊತ್ತು. ನಿನ್ನನ್ನು ಕೇಳಿದರೆ ನಂಗೊತ್ತಿಲ್ಲ ಅಂತ ಅಂತೀಯ ಅಲ್ವಾ?"

"ಹೌದು..... ಆದರೆ ವಾಸುಕಿ....."

"ವಾಸುಕೀನ ನೀನು ಮದುವೆಯಾಗ್ತೀಯಾ ಹೇಳು.... ನಾನು ನಿಂತು ಮದುವೆ ಮಾಡಿಸ್ತೀನಿ... ಬೇಕಾದರೆ"

"ಛೀ.... ನನಗೀಗಲೇ ಮದುವೆ ಬೇಡಪ್ಪಾ....."

"ಜಲಜೀ..... ಒಂದ್ಮಾತು ಹೇಳ್ತೀನಿ. ನೀನು ಮಾತ್ರ ನನ್ನ ಹಾಗೆ ಯಾರನ್ನು ಲವ್ ಮಾಡಬೇಡ. ಅಪ್ಪ ತೋರಿಸಿದ ಗಂಡನ್ನು ಒಪ್ಪಿಕೊಂಡು, ಗ್ರ್ಯಾಂಡ್ಆಗಿ ಮದುವೆಯಾಗಿ ಹಾಯಾಗಿರು ತಿಳೀತಾ?" ಜಲಜಾ ನಾಚಿದಳು ಅಷ್ಟೇ. ತಂಗಿಯನ್ನು ಕಬ್ಬಿಕೊಂಡು ಮುತ್ತಿಟ್ಟಳು.

ಸಂಘದ ವಾರ್ಷಿಕೋತ್ಸವದ ವಿವರಗಳನ್ನೊಳಗೊಂಡ ಆಹ್ವಾನ ಪತ್ರಿಕೆ ಸಿದ್ಧವಾದ ಕೂಡಲೇ ವಾಸುಕಿ ತಾನೇ ಖುದ್ದಾಗಿ, ಗೋಪಿಯ ಮನೆಗೆ ಬಂದ. ಮೈಥಿಲಿಗೆ ಪತ್ರಿಕೆಯನ್ನು ತೋರಿಸಿದ. ಮೊದಲನೇ ದಿನದ ಕಾರ್ಯಕ್ರಮ ಸಂಘದ ಸದಸ್ಯರಿಗೆ ಬಹುಮಾನ ವಿತರಣೆ, ಸಾಂಸ್ಕೃತಿಕ ಕಾರ್ಯಕ್ರಮ ಇತ್ಯಾದಿ. ಮಾರನೇ ದಿನ, "ಸಾಮೂಹಿಕ ವಿವಾಹದ" ಸಮಾರಂಭ. ವಿವಾಹಕ್ಕೆ

ಸಂಬಂಧಿಸಿದವರಿಗೆ, ಹತ್ತಿರದ ನೆಂಟರಿಗೆ ಮಾತ್ರ ಆಮಂತ್ರಣ, ನೋಡಿ ನಿಮ್ಮ ಆಸೆಯಂತೆ, ಪ್ರಾರ್ಥನ ಗೀತೆ ಸವಿತಾವರಿಂದ.....ಉಳಿದ ಕಾರ್ಯಕ್ರಮಗಳ ವಿವರಗಳು ಹೀಗೆ..... ಈ ಮಧ್ಯೆ......

ಅಷ್ಟರಲ್ಲಿ ಪರಶುರಾಮ್ ಬಂದುದರಿಂದ ಮಾಸು ನಿಂತಿತು.

"ನಮಸ್ಕಾರ ಸಾಹೇಬ್ರಿಗೆ ಹೇಗಿದೀರಿ? ಬಹುವಿನಯದಿಂದ ವಾಸುಕಿ ಪ್ರಶ್ನಿಸಿದಾಗ ಆತ ಹುಬ್ಬೇರಿಸಿದರು."

"ಅತಿ ವಿನಯಂ ಧೂರ್ತ ಲಕ್ಷಣಂ..... " ಅನ್ನೋ ತರಹ ನನಗೆ ಏನೋ ಅನುಮಾನ ಬರುತ್ತಿದೆ....

"ಯಾಕೆ ಸಾರ್ ಈ ಬಡವನ ಮೇಲೆ ಕೋಪ? ಹೇಳೆ ಕೇಳಿ ನಾನೊಬ್ಬ ಬಡಬ್ರಾಹ್ಮಣ..... ಸಮಾಜ ಸೇವೆ ಮಾಡಬೇಕೂಂತ ಆಸೆ.... ನನಗೆ ನಿಮ್ಮ ಸಹಕಾರ ಬೇಕು...." ಅದು ಬಿಟ್ಟು ಹೆದರಿಸಿದರೆ ಹೇಗೆ?

"ನಾನು ಹೆದರಿಸಿದರೆ ನೀವು ಹೆದರ್ತೀರಾ? ಹೋಗಲಿ ಬಿಡು.... ಏನು ಬಂದದ್ದು?"

"ಏನ್ಸಾರ್ ಮರತೇ ಬಿಟ್ರಾ?.... ನಮ್ಮ ಸಂಘದ ಸಮಾರಂಭದ ಮುಖ್ಯ ಅತಿಥಿ ನೀವೇ ಅಲ್ಲವೇ......"

"ಅದಕ್ಕೇ ಜ್ಞಾಪಿಸೋಕೆ ಬಂದ್ದಿದೀಯಾಂತ ಕಾಣಸುತ್ತೆ... ಅದೇನೇನು ಅಂತ ಬರೆದುಕೊಟ್ಟು ಬಿಡು...."

"ನಾನು ಮೇಡಂಗೆ ಎಲ್ಲಾ ಹೇಳಿದೀನಿ ಅವರು ತಿಳಿಸ್ತಾರೆ.... ನಾನು ಬರುತ್ತೀನಿ ಎಂದು ಹೊರಟವನನ್ನು ಅವರು ತಡೆಯಲಿಲ್ಲ. ಮೈಥಿಲಿಯೇ ಕೇಳಿದಳು."

"ಕಾಫಿ ತರ್ತೀನಿ. ಕುಡಿದು ಹೋಗೋರಂತೆ......" ವಾಸುಕಿ ಬೇಡ ಅಂದ.

"ಬಂದು ಬಂದೋರಿಗೆಲ್ಲಾ ಕಾಫಿ ಕಾಫಿ ಅಂತ ಬಲವಂತ ಮಾಡುವ ನಿನ್ನ ಈ ದುರಭ್ಯಾಸ ನನಗೆ ಹಿಡಿಸುವುದಿಲ್ಲ." ವಾಸುಕಿ ಹೊರಟು ಹೋಗಿದ್ದರಿಂದ ಅವನಿಗೆ ಈ ಮಾತು ಕೇಳಿಸಲಿಲ್ಲ.

"ನಿಮಗೇಕೆ ಈ ಜುಗ್ಗುತನ? ದೇವರು ನಮಗೇನು ಕಡಿಮೆ ಮಾಡಿದ್ದಾನೆ?"

"ಹಾಗಂತ? ಅವನ್ಯಾವ ಸಂಬಂಧ ನಮಗೆ? ಒಂದು ಸಲ ಇಂಥೋರನ್ನ ಹಚ್ಚಿಕೊಂಡು ಬಿಟ್ಟರೆ ಆಯ್ತು..... ಅಷ್ಟೇ....." ಗಂಡನ ಸ್ವಭಾವದ ಅರಿವಿದ್ದ ಮೈಥಿಲಿ ಸುಮ್ಮನಾದಳು. ಅಲ್ಲಿಯೇ ಇದ್ದ ಆಹ್ವಾನದ ಪತ್ರಿಕೆಯನ್ನು ಎತ್ತಿಸಹ

ನೋಡಲಿಲ್ಲ. ಮೈಥಿಲಿಯೇ ವಿವರವನ್ನೆಲ್ಲಾ ಹೇಳಿದಳು.

"ಓ. ಹೋ... ಸವಿತನ್ನ ಹಾಡು ಬೇರೆ ಇದೆ.... ನನ್ನ ಭಾಷಣ ಇದೆ.. ನಿನ್ನ ಪ್ರೋಗ್ರಾಂ ಏನು? ಗೋಪಿ?" ಎಂದು ಹಸಿನಗೆ ಬೀರುತ್ತಾ ಪ್ರಶ್ನಿಸಿದಾಗ ಮೈಥಿಲಿಗೆ ಹಾಯೆನಿಸಿತ್ತು.

ಸಂಘದ ಆಫೀಸಿನ ಮುಂಭಾಗದಲ್ಲಿದ್ದ ದೊಡ್ಡ ಮೈದಾನದಲ್ಲಿ ಭಾರಿ ಚಪ್ಪರ ಹಾಕಿಸಿ, ಶಾಮಿಯಾನ ಹಾಕಿಸಿದ್ದರು. ಎಂಟು ಗಂಟೆಯ ಹೊತ್ತಿಗೇ ವಧೂ ವರರ ಪಾರ್ಟಿಯವರು, ಬಂದು ಸೇರಿದರು. ಎಲ್ಲರಿಗೂ ಕುಳಿತು ಕೊಳ್ಳಲು ಸಾಲಾಗಿ ಕುರ್ಚಿಗಳು, ಮದುವೆಯ ಕಲಾಪಗಳನ್ನು ನೆರವೇರಿಸಲು, ಒಂದು ಕಡೆ ಎತ್ತರವಾದ ವೇದಿಕೆ, ಇನ್ನೊಂದು ಕಡೆ, ಅಧ್ಯಕ್ಷರಿಗೆ ಮುಖ್ಯ ಅತಿಥಿಗಳಿಗೆ, ಕಮಿಟಿಯ ಮುಖ್ಯ ಸದಸ್ಯರಿಗೆ ಆಸನಗಳು ಸಿದ್ಧವಾಗಿದ್ದವು. ಪೆಂಡಾಲಿನ ಮುಂದೆ ಪೋಲಿಸ್ ವ್ಯಾನ್, ಅಗ್ನಿಶಾಮಕದಳದ ವಾಹನ ಬಂದು ನಿಂತಿತ್ತು.

ಅರಿಶಿನ ಕುಂಕುಮದ ತಟ್ಟೆ ಬಟ್ಟಲುಗಳೊಂದಿಗೆ ವಧುವಿನ ಮನೆಯವರು ಸಿದ್ಧರಾಗಿ ಬಂದಿದ್ದರೆ, ವರನ ಕಡೆಯವರು, ಮಾಂಗಲ್ಯದ ಸರವನ್ನು ಮಾಡಿಸಿಕೊಂಡು ಬಂದಿದ್ದರು. ಉಳಿದ ಹೂವು ಹಣ್ಣು ಫಲ ತಂಬೂಲಗಳನ್ನು ಸಂಘದವರು ತರಿಸಿದ್ದರು. ಕೆಲವರಿಗೆ ಈ ಕಾರ್ಯಕ್ರಮ ಸಮ್ಮತವಲ್ಲದಿದ್ದರೂ, ಸಂಘದ ಚಟುವಟಿಕೆಗಳನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಒಪ್ಪಿಕೊಂಡಿದ್ದರು. ಕೆಲವರಿಗೆ ಉಳಿತಾಯದ ಹಣವನ್ನು ನಂತರ ವರನಿಗೆ ವರದಕ್ಷಿಣೆಯ ರೂಪದಲ್ಲಿ ಕೊಡುವ ಆಸೆ. ನಿಜವಾಗಿಯೂ ಅನುಕೂಲವಿಲ್ಲದ ಕನ್ಯಾಪಿತೃ ಒಬ್ಬರು ಹೆಚ್ಚು ಖರ್ಚು ಮಾಡಲು ಅಸಾಧ್ಯವಾದುದರಿಂದ ಸ್ವಸಂತೋಷದಿಂದ ಒಪ್ಪಿಕೊಂಡಿದ್ದರು. ವರನ ಮನೆಯವರು ಉಳಿತಾಯದ ಹಣದಲ್ಲಿ ತಮಗೆಲ್ಲಾ ಒಳ್ಳೆಯ ಉಡುಗೊರೆಯನ್ನು ಕೊಡಬೇಕೆಂಬ ಅಪೇಕ್ಷೆಯನ್ನು ವ್ಯಕ್ತಪಡಿಸಿದ್ದರು. ವಾಸುಕಿಯ ಸ್ನೇಹಿತನೊಬ್ಬ ತಾನು ಪ್ರೀತಿಸಿದವಳನ್ನು ಮದುವೆಯಾಗಲು ಬಯಸಿ, ತಂದೆ ತಾಯಿಯ ವಿರೋಧವನ್ನು ಪರಿಗಣಿಸದೇ ತನ್ನ ಸ್ನೇಹಿತರೊಂದಿಗೆ ಚಪ್ಪರದಲ್ಲಿ ತನ್ನ ಬಾಳ ಸಂಗಾತಿಯಾಗುವವಳೊಡನೆ ಮಾತನಾಡುತ್ತಾ ಕೂತಿದ್ದ. ವರನ ಕಡೆಯವರಿಗೇ ಬೇಡವಾದ ಮೇಲೆ ತಮಗೇಕೆ ಎನ್ನುವಂತೆ ವಧುವಿನ ಮನೆಯವರೂ, ಬರಲು ನಿರಾಕರಿಸಿದುದರಿಂದ ವಧು ಖಿನ್ನಳಾಗಿ ತನ್ನ ಅಳಲನ್ನು ಹೇಳಿಕೊಳ್ಳುತ್ತಿದ್ದಳು.

ಸದಾನಂದ ತನ್ನ ಹೆಂಡತಿ ಮಕ್ಕಳೊಂದಿಗೆ ಬಂದವನು. ಅತ್ತಿತ್ತ

ಅನುಮಾನದಿಂದ ಕುತೂಹಲದಿಂದ ಕಣ್ಣಾಡಿಸಿದ. ತನ್ನ ಪರಿಚಯದವರು ಯಾರೂ ಇಲ್ಲದ್ದನ್ನು ಕಂಡು ಅವನು ನೆಮ್ಮದಿಯ ಉಸಿರನ್ನು ಬಿಟ್ಟ. ವನಜಳ ಕಣ್ಣುಗಳು ಗೋಪಿಯನ್ನು ಅರಸಿದವು.

ವಾಸುಕಿ, ತಾನೇ ಖುದ್ದಾಗಿ ಎಲ್ಲರನ್ನು ಸ್ವಾಗತಿಸಿ, ಕುಳಿತುಕೊಳ್ಳಲು ಹೇಳಿದ. ಹೊಸ ಬಿಳಿಯ ಪಂಚೆ ಉಟ್ಟು, ಜುಬ್ಬಾ ಧರಿಸಿ, ಮೇಲೆ ಶಲ್ಯ ಹೊದ್ದು, ಹುಬ್ಬುಗಳ ನಡುವೆ ಕುಂಕುಮವನ್ನಿಟ್ಟುಕೊಂಡು ಮದುಮಗನ ವೇಷದಲ್ಲಿದ್ದ ವಾಸುಕಿಯನ್ನು ಕಂಡು ವನಜಳ ಮುಖದ ಕಳೆ ಇಳಿದು ಹೋಯಿತು. ತಾಯಿಯ ಆದೇಶದಂತೆ ಹೊಸ ಸೀರೆ ರವಿಕೆ ಧರಿಸಿ, ಒಡವೆಗಳನ್ನು ಧರಿಸಿ, ನವವಧುವಿನ ಅಲಂಕಾರದಲ್ಲಿ ಬಂದ ವನಜ ಗೋಪಿಯನ್ನು ಕಾಣದೇ ಕಂಗೆಟ್ಟಳು. ವಾಸುಕಿ ಅದಳನ್ನು ಗಮನಿಸಿದ. ಅದೇ ಸಮಯದಲ್ಲಿ ಸಂಘದ ಸದಸ್ಯರೊಬ್ಬರಿಂದ ಒಂದು ಜೋಡಿಯ ಮದುವೆ ರದ್ದಾಗಿದ್ದ ವಿಷಯ ತಿಳಿದು ವಾಸುಕಿ ಪೆಚ್ಚಾದ.

ಗೋಪಿ ತನ್ನ ತಂದೆ ತಾಯಿಯರೊಂದಿಗೆ, ಮತ್ತು ಜಾನಕಿಯ ಮಕ್ಕಳೊಂದಿಗೆ ಪೆಂಡಾಲಿನ ಒಳಕ್ಕೆ ಬಂದೊಡನೆ, ಅಲ್ಲಿನ ಕಳೆಯೇ ಬದಲಾಯಿತು. ವನಜಳ ಕಣ್ಣುಗಳು ಮಿಂಚಿದವು. ಆದರೂ ಪೋಲಿಸಿನ ದಿರಿಸಿನಲ್ಲಿಯೇ ಬಂದಿದ್ದವನನ್ನು ಕಂಡು ಅವಳ ಹುಬ್ಬುಗಳು ಏರಿದವು. ಮೈಥಿಲಿ ವನಜಳಿಗೆ ಕಣ್ಣು ಸನ್ನೆಯಿಂದಲೇ ಧೈರ್ಯವನ್ನು ತುಂಬಿದಳು. ಗೋಪಿಯ ತುಂಟನಗೆ ಅವಳನ್ನು ದಿಗಿಲು ಗೊಳಿಸಿತು. ಮೈಥಿಲಿ ಹಾಗೂ ಗೋಪಿ ಬಂದು, ಇವರುಗಳನ್ನು ಮಾತನಾಡಿಸಿ ಇವರುಗಳೊಂದಿಗೇ ಕುಳಿತರು. ಪರಶುರಾಮ್ ಮಾತ್ರ ತಮಗಾಗಿ ಮೀಸಲಿದ್ದ ವೇದಿಕೆಯ ಮೇಲಿನ ಕುರ್ಚಿಯ ಮೇಲೆ ಕುಳಿತು ಅಲ್ಲಿಯ ಸಿದ್ಧತೆಗಳನ್ನು ಗಮನಿಸಿದರು. ಮೀಸೆಯ ಮೇಲೆ ಕೈಯಾಡಿಸುತ್ತಾ.

ಎಂಟು ಜೋಡಿ, ವಧೂವರರಿಗಾಗಿ ಪ್ರತ್ಯೇಕವಾಗಿ ಹಸೆಮಣೆ ಹಾಕಲಾಗಿತ್ತು. ಅಗ್ನಿ ಸಾಕ್ಷಿಯೊಂದಿಗೆ ಸಪ್ತಪದಿ ತುಳಿಯಲು, ಪ್ರತ್ಯೇಕ ಸಣ್ಣ ಸಣ್ಣ ಹೋಮಕುಂಡಗಳನ್ನಿಡಲಾಗಿತ್ತು. ಸರಳ ರೀತಿಯಲ್ಲಿ ಮಿತವಾದ ಶಾಸ್ತ್ರಗಳ ಕಲಾಪದೊಂದಿಗೆ ವಿವಾಹದ ಕಾರ್ಯಕ್ರಮಕ್ಕೆ ಏನೇನು ಬೇಕೋ ಎಲ್ಲವನ್ನು ವ್ಯವಸ್ಥೆಗೊಳಿಸಲಾಗಿತ್ತು. ವಾಸುಕಿಯನ್ನು ಮನದಲ್ಲೇ ಶ್ಲಾಘಿಸಿದರು.

ಮೊದಲಿಗೆ ಬಂದವರಿಗೆಲ್ಲಾ ಬಿಸಿ ಬಿಸಿ ಕಾಫಿಯ ಸಮಾರಾಧನೆಯಾಯಿತು. ನಂತರ ಕಾರ್ಯಕ್ರಮಗಳು ಪ್ರಾರ್ಥನಾಗೀತೆಯೊಂದಿಗೆ ಪ್ರಾರಂಭವಾಯಿತು.

ಕೆಂಪು ಬಣ್ಣದ ಜರತಾರಿ ಸೀರೆಯುಟ್ಟು ಅದೇ ಬಣ್ಣದ ತುಂಬು ತೋಳಿನ ರವಿಕೆ ಧರಿಸಿ, ಮಿರುಮಿರನೆ ಮಿನುಗುವ ಚಿನ್ನದ ಆಭರಣಗಳನ್ನು ತೊಟ್ಟ ಸವಿತಾ, ನೀಳವಾದ ಜಡೆಯನ್ನು ಓಲಾಡಿಸುತ್ತಾ ಬಂದು ವೇದಿಕೆಯ ಮೇಲಿದ್ದ ಮೈಕಿನ ಹಿಂದೆ ನಿಂತಳು. ತಲೆ ತುಂಬಾ ಮುಡಿದಿದ್ದ ಸನಕಾಂಬರದ ಹೂಮಾಲೆ, ಅವಳ ಮುಖದ ಸೊಬಗನ್ನು ಹೆಚ್ಚಿಸಿದ್ದವು. ವಾಸುಕಿ ತದೇಕವಾಗಿ ಅವಳನ್ನೇ ನೋಡಿದ..... ನೀರಿಗೆ ನೈದಿಲೆ ಶೃಂಗಾರ ಎನ್ನುವಂತೆ ತರುಣಿಗೆ ಅಲಂಕಾರನೇ ಭೂಷಣ. ಅಂತಂದುಕೊಂಡ ಅವನ ಕಣ್ಣುಗಳಲ್ಲಿನ ಮೆಚ್ಚುಗೆಯನ್ನು ಸಮೀಪದಲ್ಲಿದ್ದ ಗೋಪಿ ಗಮನಿಸಿದ. ಅವನಿಗೆ ಖುಷಿಯಾಯಿತು.

"ಗಜಮುಖ ವಂದಿಸುವೆ, ಕರುಣಿಸಿ ಕಾಯೋ.... ಎಂದು ಶುದ್ಧ ಕನ್ನಡದಲ್ಲಿ ಸುಶ್ರಾವ್ಯವಾಗಿ ಸವಿತಾ ಹಾಡಿದಾಗ, ವಾಸುಕಿ ಮೆಚ್ಚುಗೆಯಿಂದ ಚಪ್ಪಾಳೆ ತಟ್ಟಿದ. ನಂತರ ವಧೂವಿನ ಮನೆಯವರು, ವಧುವನ್ನು ಕರೆತಂದು ಹಸೆಮಣೆಯ ಮೇಲೆ ಕೂರಿಸಿ, ವರನ ಮನೆಯವರನ್ನು ವರನನ್ನು ಕರೆತರುವಂತೆ ಆಮಂತ್ರಿಸಿದರು. ಮೈಕನ್ನು ಕೈಯಲ್ಲಿ ಹಿಡಿದ ಪ್ರಧಾನ ಪುರೋಹಿತರು, ಸಭಿಕರ ಅಪ್ಪಣೆಯನ್ನು ಪಡೆದು, ಗಣಪತಿಯ ಪೂಜೆಯೊಂದಿಗೆ ಕಲಾಪವನ್ನು ಪ್ರಾರಂಭಿಸಿದರು. ಇನ್ನೇನು ಮದುವೆ ಕಾರ್ಯಕ್ರಮ ಪ್ರಾರಂಭವಾಗೇಕು ಎನ್ನುವ ಹೊತ್ತಿಗೆ ಹಸೆಮಣೆ ಏರಲು ಹೊರಟಿದ್ದ ವಾಸುಕಿಯನ್ನು ಯಾರೋ ಕರೆದರು." 'ಈಗ ಬಂದೆ' ಎನ್ನುತ್ತಾ ಹೊರಟ ವಾಸುಕಿ, ಸವಿತಳನ್ನು ಕುರಿತು, ನೀವು ಇನ್ನೊಂದೆರಡು ಹಾಡುಗಳನ್ನು ಹಾಡಿ.... ಕುಳಿತವರಿಗೂ ಕೇಳಲು ಹಿತವಾಗಿರುತ್ತೆ ಎಂದು ಹೇಳಿ ಗೋಪಿಯ ಕಡೆ ನೋಡಿ ಸಂಜ್ಞೆಮಾಡಿ, ತಾನು ಹಿಂದೆಯೇ ಇದ್ದ ಸಂಘದ ಆಫೀಸಿಗೆ ಅವಸರದಿಂದ ಹೋದ. ಗೋಪಿ ಗಂಭೀರನಾದ..... ಸವಿತಾ ಮತ್ತೆರಡು ದೇವರನಾಮಗಳನ್ನು ಹಾಡಿ, ಸಭಿಕರ ಮೆಚ್ಚುಗೆಯನ್ನು ಗಳಿಸಿದಳು. ಅಧ್ಯಕ್ಷರು ತಮ್ಮ ಭಾಷಣವನ್ನು ಕೆಲವೇ ಶಬ್ದಗಳಲ್ಲಿ ಮುಗಿಸಿ, ಮುಖ್ಯ ಅತಿಥಿಗಳನ್ನು ಕೆಲವು ಮಾತುಗಳನ್ನಾಡ ಬೇಕೆಂದು ಕೇಳಿಕೊಂಡರು. ಮೈಥಿಲಿ ತಾನು ಸಿದ್ಧಗೊಳಿಸಿದ್ದ ಭಾಷಣದ ಪ್ರತಿಯನ್ನು ತನ್ನ ಪತಿಯಕೈಗೆ ಕೊಟ್ಟಳು.

ಪರಶುರಾಮ ತಮಗೆ ಸಿಕ್ಕಿದ ಅವಕಾಶವನ್ನು ಉಪಯೋಗಿಸಿ ಕೊಳ್ಳುವ ಇಚ್ಛೆಯಿಂದ, ಬೇರೆ ಯಾವುದನ್ನು ಗಮನಿಸದೇ, ತಮ್ಮ ಪೋಲಿಸ್ ವೃತ್ತಿ, ತಮ್ಮ ಇಲಾಖೆಯ ಬಗ್ಗೆ ಮಾತುಗಳನ್ನು ಪ್ರಾರಂಭಿಸಿ, ತಮ್ಮ ಸಾಹಸದ

ಉದಾಹರಣೆಗಳನ್ನು ಕೊಟ್ಟು, ತಮ್ಮ ಔದಾರ್ಯದ ಬಗ್ಗೆ ಹೊಗಳಿಕೊಂಡು, ತಾವು ಮಾಡಿದ, ಮಾಡಲಿರುವ ಜನಸೇವೆ, ದೇಶಸೇವೆಯನ್ನು ಕುರಿತು ಸಾಕಷ್ಟು ದೊಡ್ಡ ದೊಡ್ಡ ಪದಗಳನ್ನು ಹಾಕಿ ಬರೆದಿದ್ದ ಭಾಷಣವನ್ನು ಓದಿ, ಮೈಥಿಲಿಯ ಕಡೆ ಹೆಮ್ಮೆಯಿಂದ ನೋಡಿದರು.

ಯಾರೋ ಬಂದು ಸದಾನಂದನನ್ನು ಕರೆದು, ವನಜಳನ್ನು ಸಂಘದ ಆಫೀಸಿಗೆ ಕರೆದುಕೊಂಡು ಬರುವಂತೆ ಹೇಳಿದಾಗ, ಸದಾನಂದನ ಮುಖ ಕಳಾಹೀನವಾಗಿತ್ತು. ವನಜಳೊಡನೆ ಹೊರಟ ಸುನಂದನನ್ನು ಮೈಥಿಲಿ ತಡೆದಳು. ಎಲ್ಲರೂ ಹೋದರೆ ಅನುಮಾನ ಬರುತ್ತೆ. ಹೋಗಬೇಡಿ ಕೂತ್ಕೊಳ್ಳಿ. ಎಂದಳು. ಗೋಪಿ ಮೆಲ್ಲಗೆ ಅಲ್ಲಿಂದ ಸರಿದುದನ್ನು ಮೈಥಿಲಿ ಗಮನಿಸಿದಳು.

ಅತಿ ಗಂಭೀರವನ್ನು ನಟಿಸುತ್ತಾ ವಾಸುಕಿ, ಒಂದೆರಡು ಫೋಟೋಗಳನ್ನು ಸದಾನಂದನ ಕೈಗಿತ್ತು. ಇದೇನಿದು? ಎನ್ನುವಂತೆ ಕೈಕಟ್ಟಿ ನಿಂತ. ಸದಾನಂದನ ಮುಖ ಕಪ್ಪಿಟ್ಟು ಹೋಯಿತು. ತಕ್ಷಣಕ್ಕೆ ಅರ್ಥವಾಗಲಿಲ್ಲ. ಎದುರಿಗಿದ್ದವರ ಕಡೆ ಪೆದ್ದನಂತೆ ನೋಡಿದ, ನಂತರ ವನಜಳ ಕಡೆ ತಿರುಗಿ "ಏನೇ ಇದು ಚಂಡಾಲಿ? ಯಾರೇ ಇವನು?" ಎನ್ನುತ್ತಾ ಹೊಡೆಯಲು ಕೈ ಎತ್ತಿದವನನ್ನು ವಾಸುಕಿ ತಡೆದ......

"ಸುಮ್ಮನೇ ಗಲಾಟೆ ಮಾಡಿದರೆ ಏನುಪಯೋಗ ಸಾರ್? ಮೆಲ್ಲಗೆ ಮಾತಾಡಿ. ನಿಧಾನವಾಗಿ ನಿಮ್ಮ ಮಗಳ ಹತ್ತಿರ ಮಾತನಾಡಿ" ಎಂದ. ಸಮಾಧಾನ ಹೇಳುವಂತೆ.

"ಏನಯ್ಯಾ ಮೆಲ್ಲಗೆ ಮಾತನಾಡುವುದು? ಮಾನ ಹೋಗುವ ಸ್ಥಿತಿ ಬಂದಿದೆ. ನನಗೆ ಬುದ್ಧಿ ಹೇಳ್ತೀರಲ್ಲಾ.... ಯಾರೇ ಇವನು ಬೊಗಳೇ" ವನಜಳ ಮೇಲೆ ಗರ್ಜಿಸಿದ.

"ನನಗೆ ಗೊತ್ತಿಲ್ಲಪ್ಪ.......! ವನಜ ಗಾಭರಿಯಿಂದ ವಾಸುಕಿಯನ್ನು ನೋಡಿದಳು. ಇದೆಲ್ಲ ಏನು ಅನ್ನುವಂತೆ ಗೊತ್ತಿಲ್ಲ..... ಗೊತ್ತಿಲ್ಲ." ನೋಡು ಸರಿಯಾಗಿ, ಅವಳ ಮುಖದ ಮುಂದೆ ಫೋಟೋ ಹಿಡಿದಾಗ ಅವಳು ಬೆಚ್ಚಿದಳು. ಅವನು ಗೋಪಿಯ ಕಸಿನ್ ವೇಣು.... ತನಗೂ ಅವನಿಗೂ ಸ್ನೇಹವೇ ಇಲ್ಲ.... ಅಂಥಾದ್ದರಲ್ಲಿ ಅವನ ಜತೆ ಕುಳಿತು ಮಾತನಾಡುತ್ತಿರುವ ಎರಡೆರಡು ಭಂಗಿಯ ಭಾವ ಚಿತ್ರಗಳು..... ಇದು ಹೇಗೆ ಸಾಧ್ಯ? ಅವಳಿಗೆ ಅಳು ಬರುವಂತಾಗಿತ್ತು. ಈ ವಾಸುಕಿ ತನಗೆ ಹೀಗಾ ಅವಮಾನ ಮಾಡುವುದೇ? ಅವನ ಮೇಲೆ ಕಿಡಿ ಕಾರಿದಳು, ದುರುದುರು ನೋಡಿದಳು.

"ನನಗೆ ಇವನು ಯಾರೂಂತ ಗೊತ್ತಿಲ್ಲ....... ನಾನೇನು ಹೇಳಲಿ?"

"ಗೊತ್ತಿಲ್ಲದೇನೇ ಅವನ ಜತೆ ಕೂತಿದೀಯಾ? ಮಾತಾಡಿದೀಯಾ? ಇನ್ನು ಏನೇನು ಮಾಡಿದೀರೋ......" ಮಗಳನ್ನು ಬೈಯ ತೊಡಗಿದಾಗ, ವಾಸುಕಿ ಮಧ್ಯೆ ಬಾಯಿ ಹಾಕಿದ.......

"ಈಗ ಈ ಚರ್ಚೆ ಬೇಡ.... ನಿಧಾನವಾಗಿ ಏನು ಮಾಡೋಣ ಅಂತ ಯೋಚಿಸೋಣ. ಅಲ್ಲಿ ಎಲ್ಲರೂ ನಮಗಾಗಿ ಕಾಯ್ತಿದ್ದಾರೆ. ಹೋಗೋಣ. ನಡೀರಿ......"

"ಅಂದರೆ, ಇದೆಲ್ಲಾ ತಿಳಿದೂ..... ನೀವು ಇವಳನ್ನು ಮದುವೆಯಾಗ್ತೀರಾ? ಆ ಪಕ್ಷಕ್ಕೆ ಈ ಫೋಟೋಗಳನ್ನು ಯಾಕೆ ತೋರಿಸಿ ಯಾಕೆ ಗಲಾಟೆ ಮಾಡಿದಿರಿ?"

"ಈಗ ನಮ್ಮಿಬ್ಬರ ಮದುವೆ ಮಾತು ಬೇಡ....." ಉಳಿದವರು ಕಾಯ್ತಾಇದ್ದಾರೆ...... ನಡೀರಿ ಹೋಗೋಣ...... ವಾಸುಕಿ ಗಂಭೀರವಾಗಿ ನುಡಿದ.

"ಅದ್ಹೇಗಯ್ಯಾ ಹೋಗೋದು? ಮದುವೆ ಯಾಗ್ತೀನಿ ಅಂತ ಒಪ್ಪಿಗೆ ಕೊಟ್ಟು ಇಷ್ಟವಿಲ್ಲದ ಈ ಚಪ್ಪರದ ಮದುವೆಗೆ ಒಪ್ಪಿಸಿ, ಈಗ ನೋಡಿದರೆ, ಯಾವುದೋ ಸುಳ್ಳು ಫೋಟೋ ತೋರಿಸಿ ಅವಮಾನ ಮಾಡುಕ್ಕೆ ನೋಡ್ತೀಯಾ? ನಾನು ಪೋಲಿಸ್ ಕಂಪ್ಲೆಂಟ್ ಕೊಟ್ಟು ನಿನ್ನನ್ನು ಒಳಗೆ ಹಾಕಿಸ್ತೀನಿ. ನೋಡ್ತಿರು."

"ನನ್ನನ್ನು ಒಳಗೆ ಹಾಕಿಸಿದ್ರೆ ನಿಮ್ಮ ಮಗಳೂ ಸುಖವಾಗಿರುಲ್ಲ ತಿಳೀತೆ? ಈಗ ಮಾತು ಬೇಡ ನಡೀರಿ ಹೋಗೋಣ....."

"ಇಲ್ಲಯ್ಯಾ ಇದು ಈಗಲೇ ಇತ್ಯರ್ಥವಾಗಬೇಕು.... ಓದಿದವನು ವಿದ್ಯಾವಂತ ತಿಳುವಳಿಕಸ್ಥ, ಸಮಾಜ ಸೇವೆ ಮಾಡ್ತೀನಿ ಅದೂ ಇದೂ ಅಂತ ಹೇಳೋನು ಹೀಗಾ ಆಡೋದು......? ಇದೆಲ್ಲಾ ಏನು? ಏನೂಂತ?" ಕೈಕುಟ್ಟಿ ಪ್ರಶ್ನಿಸಿದ.

"ಹಾಗಂತ, ಯಾರನ್ನೋ ಪ್ರೀತಿಸುತ್ತಿರುವ ನಿಮ್ಮ ಮಗಳನ್ನು ಬಲವಂತವಾಗಿ ನಾನು ಮದುವೆಯಾಗುಲ್ಲ..... ಅದು ಸಾಧ್ಯವಿಲ್ಲ."

"ಅವಳು ಯಾರನ್ನೂ ಪ್ರೀತಿಸುತ್ತಿಲ್ಲ ನಂಗೊತ್ತು...."

"ಮುಂಚೇನೇ ಕೇಳಿ, ಅವಳ ಒಪ್ಪಿಗೆ ಪಡೆದಿದ್ರಾ?"

"ಅದೆಲ್ಲಾ ಏನಿಲ್ಲ. ಅಂದ್ಹಲ್ಲ..... ನನ್ನ ಮಗಳಿಗೆ ಆ ಧೈರ್ಯ ಎಲ್ಲಿದೆ? ಹಾಗೇನಾದ್ರೂ ಇದ್ದರೆ, ಅವಳನ್ನು ಇಲ್ಲೇ ಭೂಗತ ಮಾಡಿ ಬಿಡ್ತೀನಿ.."

"ಒಂದು ವೇಳೆ ಇದೇ ತರಹ, ಬೇರೊಬ್ಬ ಹುಡುಗಿಯ ಜತೆಯಲ್ಲಿ ನನ್ನನ್ನು ಫೋಟೋದಲ್ಲಿ ನೋಡಿದ್ದರೆ, ನೀವಾಗಲೀ ನಿಮ್ಮ ಮಗಳಾಗಲೀ ನನ್ನನ್ನು ಮದುವೆಯಾಗಲು ಒಪ್ಪುತ್ತಿದ್ರಾ? ನಿಜ ಹೇಳಿ."

ಸದಾನಂದ ತಬ್ಬಿಬ್ಬಾದ. ಏನು ಉತ್ತರ ಕೊಡಬೇಕೆಂದು ಹೊಳೆಯಲಿಲ್ಲ.

"ನೋಡಿದ್ರಾ....? ಇಂತಹ ವಿಷಯಗಳನ್ನು ಎಲ್ಲರೂ ಯೋಚಿಸಲೇ ಬೇಕು. ನಾನು ಯೋಚಿಸಬೇಡವೇ?"

"ಆದರೆ, ನೀನು ದೊಡ್ಡ ಮನುಷ್ಯ! ಸಮೂಜ ಸೇವಕ..... ನೀನೂ ಹೀಗಾಡೋದೇ.....? ಈಗ ನಮ್ಮ ಮಾನ ಹೋಗುವ ಪರಿಸ್ಥಿತಿಯನ್ನು ತಂದಿಟ್ಟು ತಪ್ಪಿಸಿಕೊಳ್ಳಲು ನೋಡ್ತೀಯಾ? ಹೀಗಾ ಸಮಾಜ ಸೇವೆ ಮಾಡೋದು?"

"ನಿಮ್ಮ ಮಗಳನ್ನು ನೀವು ನಂಬಬಹುದು. ನಾನು ಹೇಗೆ ನಂಬಲಿ? ಅವನು ಯಾರು ಅಂತ ತಿಳಿಯದ ಹೊರತು ನಾನು ಒಪ್ಪಿಗೆ ಕೊಡುವುದಿಲ್ಲ"

"ಇಲ್ಲಪ್ಪಾ..... ನಾನು ಹೇಳ್ತಿದೀನಲ್ಲ...... ಗೋಪಿಯ ಹೊರತು, ಅವಳಿಗೆ ಬೇರೆ ಹುಡುಗರ ಪರಚಯವೇ ಇಲ್ಲ. ಬೇಕಾದರೆ ಗೋಪಿಯನ್ನೇ ಕೇಳೋಣ..... ಗೋಪೀನ ಕರೆಸಿ......"

"ಸರಿ. ಗೋಪಿಗೆ ಹೇಳಿ ಕಳಿಸಿ ಕೇಳಿ ಬಿಡೋಣ. ಎನ್ನುತ್ತಾ ವನಜಳ ಕಡೆ ತಿರುಗಿ ಅವಳಿಗೆ ಕಣ್ಣಿನಲ್ಲೇ ಸಮಾಧನ ಹೇಳಿದ. ಗಲಿಬಿಲಿಗೊಂಡಿದ್ದ ಅವಳು ಮಂಕಾಗಿ ನಿಂತಿದ್ದಳು. ಇದೆಲ್ಲಾ ಏನು ಅವಾಂತರ ಅಂತನ್ನಿಸಿತ್ತು." ದೇವರನ್ನು ನೆನೆದಳು.

"ಗೋಪಿ ಆ ಸಮಯಕ್ಕಾಗಿ ಕಾದು ನಿಂತಿದ್ದವನಂತೆ, ಅತಿ ಗಂಭೀರವನ್ನು ನಟಿಸುತ್ತಾ ಬಂದ. ಏನು ಅನ್ನುವಂತೆ, ವನಜಳ ಕಡೆ ನೋಡಿ, ಸದಾನಂದನ ಕಡೆ ತಿರುಗಿದ."

"ನೋಡಪ್ಪಾ ಗೋಪಿ, ಇವರು ಈ ದೊಡ್ಡ ಮನುಷ್ಯರು, ನನ್ನ ಮಗಳ ಮೇಲೆ ಇಲ್ಲದ ಅಪವಾದವನ್ನು ಹೊರಿಸಿ, ಇವಳನ್ನು ಮದುವೆಯಾಗುವುದಿಲ್ಲ" ಅನ್ನುತ್ತಿದ್ದಾರೆ. ಅದೂ ಈಗ "ನೀನಾದರೂ ಸ್ವಲ್ಪ ಹೇಳಪ್ಪಾ...... ಇವರಿಗೆ"

"ಏನು ವಾಸುಕಿ? ಇವರು ಹೇಳುತ್ತಿರುವುದು ಏನು ವಿಷಯ?"

"ನೀವೇ ನೋಡಿ ಗೋಪಿ..... ಈ ಫೋಟೋದಲ್ಲಿರುವವರು ವನಜಾತಾನೇ..... ಈ ಹುಡುಗ ಯಾರೋ ನನಗೆ ತಿಳಿಯದು." ಎನ್ನುತ್ತಾ

ಫೋಟೋಗಳನ್ನು ಗೋಪಿಯ ಕೈಗಿತ್ತ. ಗೋಪಿ ಹುಬ್ಬೇರಿಸಿದ. ಅವನಿಗೀಗ ಎಲ್ಲಾ ಅರ್ಥವಾಗಿತ್ತು. ವಾಸುಕಿಯನ್ನು ಓರೆಗಣ್ಣಿನಿಂದ ನೋಡಿದ.

"ಅರೆ! ಇವನು ನನ್ನ ಕಸಿನ್ ವೇಣು..... ವನಜಾ..... ನೀನ್ಯಾವಾಗ ಅವನ ಜತೇಲಿ ಫೋಟೋ ತೆಗೆಸಿಕೊಂಡೆ..... ನಂಗೆ ಗೊತ್ತೇ ಇರಲಿಲ್ಲ."

"ನನಗೇನೂ ಗೊತ್ತಿಲ್ಲ ಗೋಪಿ ನನ್ನನ್ನು ನಂಬು. ಏನಿದೆಲ್ಲಾ?"

"ಯಾರು ಆ ಲಫಂಗ? ಇದೇನು ಈ ತಮಾಷೆ...ಏನಿದು?" ಸದಾನಂದ ಗುಡುಗಿದ.

"ನನಗೂ ಅರ್ಥವಾಗ್ತಿಲ್ಲ. ವನಜನ್ನ ನಾನು ಚಿಕ್ಕವಯಸ್ಸಿನಿಂದ ಬಲ್ಲೆ. ಒಳ್ಳೆ ಹುಡುಗಿ. ವೇಣು ಏನೋ ಕಿತಾಪತಿ ಮಾಡಿರಬೇಕು ಯಾರೋ ಬ್ಲಾಕ್ ಮೇಲ್ ಮಾಡ್ತಿದ್ದಾರೆ.... ಹಣದ ಆಸೆಗಾಗಿ ಯಾರಿರಬಹುದು?"

"ಒಟ್ಟನಲ್ಲಿ ಎಲ್ಲಾ ಸೇರಿ ಒಬ್ಬ ಹುಡುಗಿಯ ಮೇಲೆ ಹೀಗೆಲ್ಲಾ ಆರೋಪ ಹೊರಿಸ್ತಿದೀರಲ್ಲ..... ನ್ಯಾಯೂನಾ? ಬ್ಲಾಕ್‌ಮೇಲ್ ಯಾರು ಮಾಡಿರೋರು?"

ಹಾಗೇನಿಲ್ಲ. ನಾನು ವಾಸುಕಿಗೆ ಹೇಳ್ತೀನಿ. ನೀವು ಸಲ್ಪ ಸಮಾಧಾನ ವಾಗಿದ್ದುಬಿಡಿ. ಬ್ಲಾಕ್‌ಮೇಲ್ ಮಾಡಿರುವವನಿಗೆ ಶಿಕ್ಷೆ ಕೊಡಿಸೋಣ.

"ಎಷ್ಟು ಸುಲಭವಾಗಿ ಹೇಳ್ತೀಯಲ್ಲಪ್ಪಾ..... ವಾಸುಕಿ ಹೇಳಿದಕ್ಕೆಲ್ಲಾ ಇಷ್ಟವಿಲ್ಲದಿದ್ದರೂ ಒಪ್ಪಿದ್ದೆ. ನೀನು ಸರಿಯಾಗಿ ಬುದ್ಧಿ ಹೇಳು. ಅವರಿಗೆ"

"ಇಷ್ಟವಿಲ್ಲದೇ ಒಪ್ಪಿದಿರಾ? ಚೆನ್ನಾಗಿದೆ.... ನಾನೇನು ನಿಮ್ಮ ಮಗಳನ್ನೇ ಮದುವೆಯಾಗಬೇಕು ಅಂತ ದುಂಬಾಲು ಬದ್ದಿದ್ನಾ? ಈಗ ನೋಡಿದರೆ ಹೀಗೆ"

"ನೋಡು ಗೋಪಿ ಈಗ ಹೇಗೆ ಮಾತಾಡ್ತಾದೆ ಅಂತ."

"ನಿಮ್ಮದೇ ತಪ್ಪುಗಳನ್ನಿಟ್ಟುಕೊಂಡು ನನ್ನನ್ನು ಅಂತೀರಲ್ಲ. ನಾನು ನಿಮ್ಮ ಮಗಳನ್ನು ಮದುವೆಯಾಗುವುದಿಲ್ಲ. ಅದೇನು ಮಾಡ್ತೀರೊ ಮಾಡಿಕೊಳ್ಳಿ." ವಾಸುಕಿ ಮುಖತಿರುಗಿಸಿದ.

"ಗೋಪಿ ಅದೇನು ನೋಡ್ತಾ ಇದೀಯ..... ಇವನನ್ನು ಅರೆಸ್ಟ್ ಮಾಡು.... ಬುದ್ಧಿ ಬರುತ್ತೆ.... ಕೊಟ್ಟ ಮಾತಿಗೆ ತಪ್ಪಿದ್ದಾನೆ ಶಿಕ್ಷೆಆಗಬೇಕು."

ಗೋಪಿಗೆ ಬೇಸರವಾಗ ತೊಡಗಿತ್ತು. ವಾಸುಕಿ ಪ್ಲಾನ್ ಪ್ಲಾನ್ ಅಂತ ಹೇಳಿ ಹೀಗೆಲ್ಲಾ ಗಲಾಟೆ ಮಾಡಬಹುದು ಅಂತ ಅಂದು ಕೊಂಡಿರಲಿಲ್ಲ. ಇದೆಲ್ಲಾ ತಿಳಿದರೆ ತನ್ನ ತಂದೆ ಒಪ್ಪುವುದೂ ಅಸಾಧ್ಯ ಅಂತನ್ನಿಸಿದಾಗ,

ಇದ್ದಕ್ಕಿದ್ದಂತೆ ವೇಣುನ ಕರೆಸಿ ಮಾತನಾಡುವ ಉಪಾಯ ಹೊಳೆಯಿತು. ತಕ್ಷಣವೇ ಹೋಗಿ ವೇಣುವನ್ನು ಕರೆದುಕೊಂಡು ಬಂದ. ವನಜಾ ಅವನನ್ನು ನೋಡಿ ಹಿಂದೆ ಸರಿದಳು. ಗೋಪಿ ಪರಿಸ್ಥಿತಿಯನ್ನು ವಿವರಿಸಿ, ವೇಣುನ, ವನಜನ್ನ ಮದುವೆಯಾಗ್ತೀಯಾ" ಅಂತ ಕೇಳಿದ. ಇದೆಲ್ಲಿ ಗ್ರಹಚಾರ? ಈ ಕಮಂಗಿಯನ್ನು ಮದುವೆಯಾಗುವ ಪರಿಸ್ಥಿತಿ ಬಂದಿತಲ್ಲ ಅಂತನ್ನಿಸಿತು. ಆದರೆ ಆ ನಟ ಏನೇ ಆದರೂ ಒಪ್ಪಲಿಲ್ಲ.

"ನಾನು ಎಂತೆಂತಹ ಸಿನಿಮಾ ನಟಿಯರನ್ನು ನೋಡಿದೀನಿ. ಮೇಕಪ್ ಇಲ್ಲದೇ ಸುಂದರಿಯರಂತೆ ಕಂಗೊಳಿಸುವವರಿದ್ದಾರೆ. ಈ ವನಜನ್ನ ಯಾವುದೋ ಆಡ್ ಸೀನ್‌ಗೆ ಬೇಕಾಗುತ್ತೆ ಅಂತ ಕೇಳಿದ್ದೆ ಅಷ್ಟೇ. ಫೋಟೋ ಏನೂ ತೆಗಿಸಲಿಲ್ಲ. ಇದೆಲ್ಲಾ ನಿಮ್ಮದೇ ಕಿತಾಪತಿ. ನಿಮ್ಮ ಮಗಳಿಗೆ ಸುಲಭವಾಗಿ ಒಬ್ಬ ಗಂಡು ಸಿಗ್ತಾನೆ ಅಂತ ಇದೆಲ್ಲಾ ನಾಟಕ ಆಡ್ತಿದ್ದೀರಿ. ನನಗೀಗಾಗಲೇ ಮದುವೆ ಗೊತ್ತಾಗಿದೆ." ಎಂದು ಸದಾನಂದನನ್ನೇ ತೆಗಳಿದ. ವೇಣು ಪ್ಲೀಸ್ ಸುಮ್ಮನಿರು. ಹೀಗೆಲ್ಲಾ ಮಾತನಾಡಬೇಡ. ನಿನ್ನ ಮಾವನಿಗೆ ತಿಳಿದರೆ ನಿನ್ನ ಮಾತನ್ನು ನಂಬುವುದಿಲ್ಲ. ಯಾಕೆ ಹೀಗೆ ಮಾಡಿದೆ? ಗೋಪಿ ಮತ್ತೆ ಕೇಳಿದ.

"ಏಕೆ ನಂಬುಲ್ಲ? ನಾನು ಈಗಲೇ ಹೋಗಿ ಮಾವನನ್ನು ಕರೆದುಕೊಂಡು ಛರ್ತೀನಿ" ಎಂದು ಹೊರಗೆ ಹೋದವನು, ಆ ಸ್ಥಳದಿಂದ ಫರಾರಿಯಾಗಿದ್ದ.

ಇದ್ದಕ್ಕಿದ್ದಂತೆ ಮದುವೆಯ ಕಲಾಪಗಳು ಸ್ಥಗಿತಗೊಂಡಿವೆ ಅಂತನ್ನಿಸಿದಾಗ ಅಲ್ಲಿ ನೆರೆದಿದ್ದವರು ಗುಸುಗುಸು ಮಾತಾಡಲು ಪ್ರಾರಂಭಿಸಿದರು.

ಎಲ್ಲಾ ಸರಿಯಾಗಿ ತಯಾರಿ ನಡೆಸಿದ ಮದುವೆಗಳು ಮುಗಿಯುವವರೆಗೂ, ಆತಂಂಕದಿಂದ ಒದ್ದಾಡ್ತಾರೆ. ಅಂಥಾದ್ದರಲ್ಲಿ ಸಮಾಜ ಸುಧಾರಣೆ ಅಂತ ಮಾಡೋಕೆ ಹೋದರೆ ಆಗೋದೇ ಹೀಗೇ.... ಕಪ್ಪೆ ತಕ್ಕಡಿಗೆ ಹಾಕಿದ ಹಾಗೆ, ಒಬ್ಬರ ಅಭಿಪ್ರಾಯ ಇನ್ನೊಬ್ಬರಿಗೆ ಸರಿ ಹೋಗುವುದಿಲ್ಲ.... ವಾಸುಕಿ ಮುಖ್ಯಸ್ಥನಂತೆ ಅವನ ಪತ್ತೆಯೇ ಇಲ್ಲವಲ್ಲ. ಈ ಸಮಯದಲ್ಲಿ ಎಲ್ಲಿ ಹೋದ?" ಎಲ್ಲರೂ ತಮ್ಮ ತಮ್ಮಲ್ಲೇ ಚರ್ಚಿಸಲಾರಂಭಿಸಿದರು.

"ಅವನೂ ವರ, ಇವತ್ತು ಅವನದೂ ಮದುವೆ... ವರೋಪಚಾರ ಸಾಲದು ಅಂತ ಎಲ್ಲೋ ಜಗಳ ಆಡುತ್ತಿರಬಹುದು" ವ್ಯಂಗವಾಗಿ ಹೀಗೆ ತಲಾತಟ್ಟ ಮಾತಾನಾಡಲು ಪ್ರಾರಂಭಿಸಿದಾಗ ಗದ್ದಲ ಶುರುವಾಯಿತು. ವೇಣುವನ್ನು ಹುಡುಕಿಕೊಂಡು ಬಂದ ಗೋಪಿ ಗದ್ದಲವನ್ನು ಗಮನಿಸಿದ. ಅಪ್ಪನ ಕಿವಿಯಲ್ಲಿ ಏನನ್ನೋ ಹೇಳಿ, ಮೈಕ್ ಮುಂದೆ ನಿಂತು, ಮಾತಾಡಿದ.

ಸೈಲೆನ್ಸ್. ಪ್ಲೀಸ್ ಸೈಲೆನ್ಸ್. ಯಾವ ಕಾರ್ಯಕ್ರಮವೂ ನಿಂತು ಹೋಗುವುದಿಲ್ಲ. ಮುಂದುವರೆಯುತ್ತದೆ. ಪುರೋಹಿತರೇ, ನೀವು ಮದುವೆಯ ಕಾರ್ಯಗಳನ್ನು ಮುಂದುವರೆಸಿ, ವಾಸುಕಿ ತುರ್ತಾಗಿ ಎಲ್ಲಿಗೋ ಹೋಗಬೇಕಾಗಿ ಬಂತು. ಅವರ ಪರವಾಗಿ ನಾನು ಕೇಳಿಕೊಳ್ತೀನಿ.....

ಮತ್ತೆ ಕಲಾಪಗಳು ಮುಂದುವರೆದಾಗ, ಕುಳಿತಿದ್ದವರು ಚರ್ಚೆಯನ್ನು ಕಡಿಮೆ ಮಾಡಿದರು. ಗೋಪಿ ತಂದೆಯನ್ನು ಆಚೆಗೆ ಕರೆದುಕೊಂಡು ಹೋಗಿ, ವೇಣು ಮಾಡಿದ ಕಿತಾಪತಿಯನ್ನು ಹೇಳಿದ. ಪರಶುರಾಮ್ ಕಿಡಿ ಕಿಡಿಯಾದರು. ಎಲ್ಲಿ ಅವನು?..... ಜಾನಕಿಯನ್ನು ಕರಿ..... ಇದೆಲ್ಲಾ ಏನೂಂತ ಕೇಳ್ತೀನಿ ಅಂತ ಗುಡುಗಿದಾಗ ಗೋಪಿ, ನುಡಿದ.

"ಅತ್ತೆಗೆ ಯಾವ ವಿಷಯವೂ ತಿಳಿಯದು. ಈಗ ಅವರನ್ನು ಕರೆಸಿ ಗಲಾಟೆ ಮಾಡುವುದು ಏಕೆ? ನೀವು ಬಂದು, ವಾಸುಕಿಗೆ ಬುದ್ಧಿ ಹೇಳಿ. ಈಗ ಅವನು ವನಜನ್ನ ಮದುವೆಯಾಗಲು ನಿರಾಕರಿಸುತ್ತಿದ್ದಾನೆ....."

"ನಾನು ಇದರಲ್ಲೆಲ್ಲಾ ಒಂದಾಗುಲ್ಲ. ಅದಕ್ಕೇ ನನಗೆ ಇಂಥಾ ಸಂಘ ಸಂಸ್ಥೆಗಳಲ್ಲಿ ನಂಬಿಕೆ ಇಲ್ಲ. ಅಂತ ಅಂದಾಗ, ಗೋಪಿ ತಂದೆಯ ಕೈ ಹಿಡಿದ."

"ಅಪ್ಪಾ, ಈಗ ಹೀಗೆ ಹೇಳಬೇಡಿ. ಇದರಲ್ಲಿ ವನಜಳ ತಪ್ಪೇನಿದೆ ಹೇಳಿ. ವೇಣು ಏನೋ ಕಿತಾಪತಿ ಮಾಡಿದ್ದಾನೆ.... ಈಗ ನೀವು ಸುಮ್ಮನಿದ್ದರೆ ಜನ ನಮ್ಮನ್ನೇ ಆಡಿಕೊಳ್ಳುವುದಿಲ್ಲವೇ....."

"ಅವನನ್ನು ಕರಿ..... ಅವನಿಗೆ ಒದ್ದು ಬುದ್ಧಿ ಕಲಿಸ್ತೀನಿ"

"ಅವನು ನಿಮಗೆ ಹೆದರಿ ಆಗಲೇ ಓಡಿ ಹೋದ. ನಿಮಗೆಲ್ಲಿ ಸಿಗ್ತಾನೆ. ನಿಮ್ಮ ಮಗ ಮಾಡಿರುವ ತಪ್ಪನ್ನು ಈಗ ನೀವೇ ಸರಿಮಾಡಬೇಕು. ಬನ್ನಿ...." ತಂದೆಯನ್ನು ಒಪ್ಪಿಸುವಂತೆ ನುಡಿದ.

"ಮಗ? ವೇಣು ನನ್ನ ಮಗ, ಅಂತ ನಿನಗ್ಯಾರು ಹೇಳಿದರು? ಪೋಲಿಸ್ ಅಧಿಕಾರಿಯ ಕಣ್ಣುಗಳು ಕಿರಿದಾದವು......"

"ನಾನೂ ಪೋಲಿಸ್ ಅಧಿಕರಿಯೇ ತಾನೇ..... ನಾನು ಕಂಡು ಹಿಡಿದೆ." ಎಂದ ತಲೆಎತ್ತದೇ.

"ನಿಮ್ಮ ಅಮ್ಮನಿಗೂ ಹೇಳಿ ಬಿಟ್ಟೆಯಾ? ಗಾಭರಿ ಇತ್ತು. ಧ್ವನಿಯಲ್ಲಿ."

"ಇಲ್ಲ, ಅವಳಗೆ ತಿಳಿದರೆ ನೊಂದುಕೊಳ್ಳುವುದು ಖಂಡಿತಾ. ನೀವು ಏಕೆ ಹೀಗೆ ಮಾಡಿದಿರೋ ನನಗೆ ತಿಳಿಯದು."

"ಆ ಮಾತು ಈಗ ಬೇಡ. ವಾಸುಕಿಗೆ ತಿಳುವಳಿಕೆ ಹೇಳ್ತೀನಿ ನಡಿ..." ಇಬ್ಬರೂ ಒಳಗೆ ಬಂದರು. ಗೋಪಿ, ವಾಸುಕಿಯ ಕಡೆ ನೋಡಿ ಕಣ್ಣು ಹೊಡೆದ. ಪರಶುರಾಮ್ ಸದಾನಂದನ ಕಡೆ ದರ್ಪದಿಂದ ನೋಡಿ.

"ಏನಯ್ಯಾ ವಾಸುಕಿ ಗಲಾಟೆ? ಈ ಕಡೇ ಸಮಯದಲ್ಲಿ ನೀನೇ ಮುಖ್ಯಸ್ಥನಾಗಿ ಹೀಗಾ ಮಾಡುವುದು? ಏನಾಯ್ತು ಈಗ?" ಏನು ಪ್ರಾಬ್ಲಂ?

"ನಂದೇನೂ ತಪ್ಪಿಲ್ಲ ಸಾರ್? ತಪ್ಪೆಲ್ಲಾ ಈ ವನಜಂದು......"

"ಏನಮ್ಮಾ ವನಜಾ..... ಇದೆಲ್ಲಾ ಏನೂಂತ? ಹೀಗೆ ಅಂತ ನಿನ್ನ ತಂದೇಗೆ ಮುಂಚೆನೇ ಹೇಳಬಾರದಾಗಿತ್ತೇ. ನಿನ್ನ ಪ್ರೀತಿ ವಿಚಾರಗಳನ್ನ"

"ನೀವು ಸುಮ್ಮನಿರಿ. ಪೋಲಿಸ್ ಅಧಿಕಾರಿಗಳೇ.... ನಮ್ಮ ವನಜಾ ದೋಷಿಯಲ್ಲ. ನಿಮ್ಮ ತಂಗಿ ಮಗ ವೇಣು, ನಮ್ಮ ವನಜಂಗೆ ಏನೋ ಮೋಸಮಾಡಿದ್ದಾನೆ..... ನನಗೆ ಗೊತ್ತು..... ಯಾರನ್ನು ನಂಬಿದರೂ, ಈ ಪೋಲಿಸ್ನೋರನ್ನು ಮಾತ್ರ ನಂಬಬಾರದು..... ಬ್ಲಾಕ್ ಮೇಲ್ ಮಾಡ್ತಿದ್ದಾನೆ.... ಆ ಕೇಡಿ....." ನಿಮಗೆ ಗೊತ್ತೋ.....?

"ಷಟಪ್, ಯಾರ ಹತ್ತಿರ ಮಾತನಾಡ್ತಾ ಇದೀರಿ ಅಂತ ಗೊತ್ತು ತಾನೇ..."

"ಗೊತ್ತು.. ಈಗ ಏನು ಮಾಡುವ ಹಾಗಿದೀರಿ? ಅಪ್ಪ ಮಗ ಇಬ್ಬರೂ ಸೇರಿ ವೇಣುನ ಎಲ್ಲಿಗೆ ಕಳಿಸಿದ್ರಿ? ಧೈರ್ಯವಿದ್ದರೆ, ಅವನನ್ನು ಕರೆತಂದು ಒದ್ದು ಬುದ್ಧಿ ಹೇಳಿ. ಒಪ್ಪದಿದ್ರೆ ಲಾಕಪ್‌ಗೆ ಹಾಕಿ ಛಡಿ ಏಟು ಕೊಡಿಸಿ. ಅದೇನು ಕಿತಾಪತಿ ಅಂತ ಬಾಯಿ ಬಿಡಿಸಿ. ನಮ್ಮಂತಹ ಬಡಪಾಯಿಗಳ ಮಾನವನ್ನು ಏಕೆ ಕಳೆಯುತ್ತೀರಿ? ಬ್ಲಾಕ್‌ಮೇಲ್ ಮಾಡೋರಿಗೆ ಶಿಕ್ಷೆ ಕೊಡಿಸಿ" ಆಗ ನೋಡೋಣ.

"ನೀವು ಸುಮ್ಮನೇ ತಲೆಯೆಲ್ಲಾ ಹರಟಬೇಡಿ. ಸಮಯ ಸಿಕ್ಕಿದರೆ ಸಾಕು ಪೋಲಿಸ್ನೋರ ಮೇಲೆ ಗೂಬೆ ಕೂರಿಸೋಕೆ ನೋಡ್ತೀರಿ. ಇದೇನಯ್ಯಾ ತಕರಾರು ವಾಸುಕಿ? ಚೀಫ್ ಗೆಸ್ಟ್ ಆಗಿ ಬನ್ನಿ ಅಂತ ಕರೆಸಿ, ಈಗ ಇದೆಲ್ಲಾ ಏನೂಂತ?" ಅದಕ್ಕೇ ನನಗೆ ಸಂಘಸಂಸ್ಥೆ ಅಂದ್ರೆ ಬೇಜಾರು.

"ಈಗ ಹೀಗೆಲ್ಲಾ ಆಗುತ್ತೆ ಅಂತ ನನಗೇನು ಗೊತ್ತಿತ್ತು? ಮೂರುವರ್ಷದಿಂದ ವಾರ್ಷಿಕೋತ್ಸವ ನಡೆಸ್ತಿದೀವಿ. ಯಾವತ್ತೂ ಹೀಗೆಲ್ಲಾ ಆಗಿರಲಿಲ್ಲ. ಪೋಲಿಸ್ ಅಧಿಕಾರಿಯ ಸಂಬಂಧಿಯೊಬ್ಬನಿಂದ ಇಂತಹ ಕಿತಾಪತಿ ನಡೆಯಬಹುದು ಅಂತ ನಾನು ಖಂಡಿತಾ ಅಂದುಕೊಂಡಿರಲಿಲ್ಲ." ವಾಸುಕಿ

ಒತ್ತಿ ಹೇಳಿದ.

"ಕಿತಾಪತಿ ಅಂತ ಗೊತ್ತಾಯ್ತಲ್ಲ. ಅವನಿಗೆ ಶಿಕ್ಷೆ ಕೊಡಿಸುವ ಜವಾಬ್ದಾರಿ ನನಗಿರಲಿ.... ವನಜ ಒಳ್ಳೆಯ ಹುಡುಗಿ. ಅವಳದ್ದು ತಪ್ಪೇನಿಲ್ಲ. ಅವಳನ್ನು ಮದುವೆಯಾಗು, ಯಾವ ಸಂಶಯವೂ ಬೇಡ." ಈಗ ತಗಾದೆ ತೆಗೆದರೆ ಅದು ಸರಿಯಲ್ಲ.

"ನಾನು ಹೊರಗಿನವನು.... ನನಗೆ ಸುಲಭವಾಗಿ ಹೇಳ್ತಿದೀರಿ. ನನ್ನ ಸ್ಥಾನದಲ್ಲಿ ನಿಮ್ಮ ಗೋಪಿ ನಿಂತಿದ್ದರೆ ಏನು ಹೇಳುತಿದ್ರಿ?" ವಾಸುಕಿ ನೇರವಾಗಿ ಪ್ರಶ್ನಿಸಿದ.

"ಈಗ ಆ ಮಾತೇಕೆ? ನಡೆಯಲಿರುವುದು ನಿಮ್ಮಿಬ್ಬರ ಮದುವೆ ಗೋಪಿಯ ಮದುವೆ ಅಲ್ಲ."

ಇರಬಹುದು. ಆದರೂ ನನ್ನ ಈ ಪ್ರಶ್ನೆಗೆ ಉತ್ತರಕೊಡಿ. ನೀವೂ ಸಮಾಜ ಸೇವಕರು. ನಿಮ್ಮ ಕಾರ್ಯ, ಔದಾರ್ಯ ಕುರಿತು ಭಾಷಣದಲ್ಲಿ ನೀವೇ ಹೇಳಿಕೊಂಡಿದೀರಿ. ಒಂದು ವೇಳೆ ಇಂತಹ ಸ್ಥಿತಿ ನಿಮ್ಮ ಮಗನಿಗೆ ಒದಗಿದರೆ, ಹೀಗೇ ಇಷ್ಟು ಸುಲಭವಾಗಿ ಹೇಳ್ತೀರಾ? ಯಾಕೇಂದ್ರೆ..... ಮಾತಾಡುವುದು ಸುಲಭ. ಕಾರ್ಯಗತ ಮಾಡುವುದು ಕಷ್ಟ ಅಲ್ಲವೇ..... ಅಧಿಕಾರಿಗಳೇ....... ವಾಸುಕಿಯ ಮಾತಿನ ವ್ಯಂಗ್ಯ ಚುಚ್ಚಿತು.

ಪರಶುರಾಮ್‌ಗೆ ಮುಖಭಂಗವಾದಂತಾಯಿತು. ಈಗ ಪ್ರತಿಷ್ಠೆಯ ಪ್ರಶ್ನೆಯನ್ನು ಎತ್ತಿದ್ದಾನೆ. ಅದನ್ನು ಉಳಿಸಿಕೊಳ್ಳ ಬೇಕಾದರೆ ತಾನೀಗ ತನ್ನ ಸ್ವಾಭಿಮಾನವನ್ನು ಬಿಡಬೇಕು... ಆದರೆ.... ಅಷ್ಟು ಸುಲಭದಲ್ಲಿ ಬಿಡುವಂತೆ ಇಲ್ಲ.

"ನೋಡಿದ್ರಾ ಸಾರ್...... ನಿಮ್ಮ ಸ್ವಂತಕ್ಕೆ ಬಂದಾಗ ಅನುಮಾನಿಸುತ್ತೀರಿ. ಅದೇ ನನ್ನ ವಿಷಯದಲ್ಲಿ, ನನಗೆ ಬುದ್ಧಿ ಹೇಳ್ತೀರಿ. ನನಗೆ ತಂದೆ ತಾಯಿಯಿಲ್ಲ. ತಿಳುವಳಿಕೆ ಹೇಳುವ ಹಿರಿಯರಿಲ್ಲ. ಆದರೆ ಗೋಪಿಗೆ ನೀವುಗಳು ಇದೀರಿ....ಯಾಕೆ? ಗೋಪಿ ನೀವು ಹೇಳಿದರೆ ಕೇಳುವುದಿಲ್ಲ ಎಂಬ ಅನುಮಾನವೇ.... ನಿಮಗೆ?"

"ಹಾಗೇನಿಲ್ಲ. ಗೋಪಿ ನನ್ನ ಮಾತನ್ನು ಮೀರುವುದಿಲ್ಲ... ಆದರೆ ಇದು ಗೋಪಿಗೆ ಸಂಬಂಧಿಸಿದ ವಿಷಯವಲ್ಲವಲ್ಲ."

"ವನಜ ನಿಮಗೆ ಗೊತ್ತಿರುವ ಹುಡುಗಿ. ಚಿಕ್ಕವಯಸ್ಸಿನಿಂದ ನೋಡಿದೀರಿ. ನಿಮ್ಮ ಮನೆಗೂ ಬರುತ್ತಿದ್ದಳು. ಆದರೂ, ಈಗ ನೀವು ಮುಂದೆ ಬಂದು

ಅವಳನುನ ಉದ್ಧಾರ ಮಾಡಲು ಹಿಂಜರಿಯುತ್ತಿದೀರಿ ಏಕೆ? ಭಾಷಣದಲ್ಲಿ ಆಡುವುದೊಂದು. ಆಚರಣೆಯಲ್ಲಿ ಇನ್ನೊಂದು....ನಿಮ್ಮಂಥಹವರೇ ಹೀಗಾದರೆ ಸಮಾಜ ಸುಧಾರಣೆಯಾಗುವುದು ಹೇಗೆ? ಆಡಿದಂತೆ ನಡೆಯಬೇಕಲ್ಲವೇ?"

"ಏನಯ್ಯಾ ನಿನ್ನ ಮಾತು? ನಿಮ್ಮ ನಿಮ್ಮ ಸಮಸ್ಯೆಗೆ ನಾನು ಏನು ಮಾಡುಕ್ಕೆ ಆಗುತ್ತೆ.... ಯಾರ್ಯಾರಿಗೆ ಏನು ಹೇಳಲಿ?" ನೀನು ನನ್ನ ಮಾತನ್ನು ಒಪ್ಪುತಿಲ್ಲವಲ್ಲ.

"ನನಗೆ ಬುದ್ಧಿವಾದ ಹೇಳಿದಂತೆ, ಗೋಪಿಗೂ ಹೇಳಬಹುದಲ್ಲ."

"ಏನಂತ......? ಯಾಕೆ ಅಂತ?" ಗೋಪಿಗೆ ಯಾಕೆ ಹೇಳಬೇಕು?

"ಆ ಹುಡುಗಿಯ ಬಾಳು ಹಾಳಾಗುತ್ತೆ.... ಅವಳನ್ನು ಮದುವೆಯಾಗಿ ಅವಳನುನ ಉದ್ಧಾರ ಮಾಡು ಅಂತ.... " ಏನು ಗೋಪಿ ನೀನೇನು ಹೇಳ್ತೀರಿ? ದಿಢೀರನೆ ವಾಸುಕಿ ಗೋಪಿಯ ಕಡೆ ತಿರುಗಿ ನೇರವಾಗಿ ಪ್ರಶ್ನಿಸಿದ.

"ಗೋಪಿ ತಬ್ಬಿಬ್ಬಾದ. ವಾಸುಕಿಯ ಮಾತುಗಳು ಅರ್ಥವಾಗಿತ್ತು. ಆದರೆ ತಂದೆಯನ್ನು ಎದುರು ಹಾಕಿಕೊಳ್ಳುವಂತಿಲ್ಲ. ಅವರು ಏನೆಂದು ಹೇಳಿ ಬಿಡುವರೋ. ವನಜಾ ಸಹ ಪೆಚ್ಚಾಗಿದ್ದಳು. ಸುಮ್ಮನೇ ಪಿಳಿಪಿಳಿ ನೋಡಿದ." ಪೋಲಿಸ್ ಪರಶುರಾಮ್ ದಂಗಾಗಿದ್ದರು.

"ನೋಡಯ್ಯಾ.... ನೀವೆಲ್ಲಾ ಬಂದು ಬೇಕೂಂತ ನನಗೆ ಅವಮಾನ ಮಾಡುವ ಉಪಾಯ ಇದು. ನಾನು ನಿಮ್ಮನ್ನೆಲ್ಲಾ ಸುಮ್ಮನೇ ಬಿಡುವುದಿಲ್ಲ. ಕೇಸ್ ಹಾಕಿಸ್ತೀನಿ. ಆಗ ಎಲ್ಲರ ಬಂಡವಾಳವೂ ಹೊರಗೆ ಬೀಳುತ್ತೆ. ಬಾಯಲ್ಲಿ ಸಮಾಜ, ಸಮಾಜಸೇವೆ, ಸುಧಾರಣೆ ಅಂತ ಮಾತಾಡೋದು. ಮೊದಲು ನಿಮ್ಮನ್ನು ನೀವು ಸುಧಾರಿಸಿಕೊಳ್ಳಿ. ನಾನು ಅವತ್ತೆ ಹೇಳಿದೆ... ಈ ಸಾಮೂಹಿಕ ಮದುವೆ ಅದು ಇದು ನಮ್ಮಂತಹವರಿಗಲ್ಲ ಅಂತ.... ಅಂತೂ ಹೆಣ್ಣು ಹೆತ್ತ ತಪ್ಪಿಗೆ ಕರೆಸಿ ಚೆನ್ನಾಗಿ ಅವಮಾನ ಮಾಡಿದಿರಿ." ಅಂತ ಸದಾನಂದ ಮುಖ ತಿವಿಯುವಂತೆ ಮಾತಾಡಿದಾಗ, ಗೋಪಿಗೆ ಹೀನಾಯವಾಗಿತ್ತು. ವಾಸುಕಿಗೆ ಗೋಪಿಯಮೇಲೆ ಕೋಪ ಬಂದಿತ್ತು. ಪರಶುರಾಮ್‌ಗೆ ಸದಾನಂದ ಹಂಗಿಸಿದ್ದು ಅರ್ಥವಾಗಿತ್ತು.

"ಅಪ್ಪಾ.... ವೇಣು ಮಾಡಿದ ತಪ್ಪಿಗೆ ಇವರಿಗೆಲ್ಲಾ ಶಿಕ್ಷೆ ಏಕೆ? ನೀವು ಹೂಂ, ಅನ್ನಿ. ನಾನು ವನಜನ್ನ ಮದುವೆಯಾಗ್ತೀನಿ. ಆಗ ನಿಮ್ಮ ಪ್ರತಿಷ್ಠೆ ಉಳಿಯುತ್ತೆ. ನಿಮ್ಮ ಸ್ಥಾನ ಮಾನ ಹೆಚ್ಚುತ್ತೆ. ಪೇಪರ್ರಿನವರು ನಿಮ್ಮನ್ನು

ಹೊಗಳಿ ಬರೆಯುತ್ತಾರೆ. ನಿಮ್ಮ ಫೋಟೋ ಸಹ ಬರುತ್ತೆ....." ಕಸಿವಿಸಿಗೊಂಡ ಪರಶುರಾಮ್ ಮಗನನ್ನೇ ನೋಡಿದರು. ಗೋಪಿ ಯೋಗ್ಯ. ವೇಣು ಅಯೋಗ್ಯ. ಇಬ್ಬರೂ ನನ್ನ ಮಕ್ಕಳೇ.... ಯೋಗ್ಯ ಮಗನ ತಂದೆಯಾಗುವ ಯೋಗ್ಯತೆ ನನಗಿರಬೇಕು. ವೇಣು ಮಾಡಿದ ತಪ್ಪನ್ನು ನನಗೋಸ್ಕರ ಗೋಪಿ ಮುಚ್ಚಿ ಹಾಕಲು ಸಿದ್ಧನಾಗಿರುವಾಗ, ನಾನೇಕೆ ಹಿಂಜರಿಯಬೇಕು ಅಂತನ್ನಿಸಿತು ಆದರೂ,

"ನಿನ್ನ ಐಡಿಯಾ ಚೆನ್ನಾಗಿದೆ ಗೋಪಿ. ಆದರೆ ನಿನ್ನ ಅಮ್ಮನ್ನ ಒಂದು ಮಾತು ಕೇಳಬೇಡವೇ..... ಅವಳೇನಂತಾಳೊ?"

"ಜನತೆ ನಿಮ್ಮನ್ನು ಹೊಗಳುವುದಾದರೆ ಅಮ್ಮ ಏಕೆ ಒಪ್ಪುವುದಿಲ್ಲ. ಅಮ್ಮನ್ನ ನಾನು ಒಪ್ಪಿಸ್ತೀನಿ......"

"ಸರಿ. ಆದರೆ ಈ ಸದಾನಂದರಾಯರು ಒಪ್ತಾರೋ ಇಲ್ಲವೋ?"

"ಯಾಕ್ರೀ! ಹೆದರಿ ಬಿಟ್ರಾ? ಕೇಸು ಹಾಕಿಸಿ ಬಿಡ್ತೀನಿ ಅಂತ.... ಈ ಮದುವೆ ನನಗಿಷ್ಟವಿಲ್ಲ. ನಾನು ಒಪ್ಪುವುದಿಲ್ಲ......" ಸದಾನಂದ ಮೊಂಡಾಟ ಮಾಡಿದ.

"ಗೋಪೀನೇ ಒಪ್ಪಿರುವಾಗ ನೀವೇಕೆ ಬೇಡ ಸಂತೀರಿ ಸಾರ್? ನಿಮಗೂ ಗೋಪಿ ಎಂತಹವನು ಅಂತ ಗೊತ್ತು.... ನಿಮ್ಮ ಮಗಳನ್ನು ಕೇಳಿ. ಅವಳೂ ಬೇಡ ಅಂತ ಅಂದರೆ, ಆಗ ಬೇರೆ ಮಾತು..... " ವಾಸುಕಿ ನುಡಿದ ಬೇಸರಿಸಿ. ಅವನಿಗೂ ಈ ನಾಟಕ ಸಾಕೆನಿಸಿತ್ತು.

"ಅವಳು ನನ್ನ ಮಗಳು. ನನ್ನ ಇಷ್ಟವೇ ಅವಳ ಇಷ್ಟ."

"ಹಾಗೆ ಅಧಿಕಾರ ಚಲಾಯಿಸಬೇಡಿ ಸಾರ್.... ನಿಮ್ಮ ಮಗಳ ಇಷ್ಟವನ್ನು ಕೇಳಿ ಅಂತ ಹೇಳಿದೆ. ಗೋಪಿಯಂತಹ ಅಳಿಯ ನಿಮಗೆ ಸಿಗಬೇಕಾದರೆ ನೀವು ಪುಣ್ಯ ಮಾಡಿರಬೇಕು.... ಗೋಪಿ ಯೋಗ್ಯ ಅಂತ ನಿಮಗೇ ಗೊತ್ತು."

"ನನಗೆ ಪೋಲಿಸ್ ಇಲಾಖೆಯಲ್ಲಿರುವವರನ್ನು ಕಂಡರಾಗುವುದಿಲ್ಲ...... ನನಗೆ ಒಪ್ಪಿಗೆ ಇಲ್ಲ...." ಸದಾನಂದ ನುಡಿದಾಗ ಪರಶುರಾಮ್ ಸುಮ್ಮನಿರಲಿಲ್ಲ.

"ನನಗೂ ಅಷ್ಟೇ. ಪೋಲಿಸ್ ಇಲಾಖೆಯವರನ್ನು ಬಿಟ್ಟರೆ, ಬೇರೆಯವರ ಸಂಬಂಧ ಬೆಳೆಸಲು ಇಷ್ಟವಿಲ್ಲ.... ಆದರೆ ನನ್ನ ಮಗನ ಉದಾರತೆಯನ್ನು ನೋಡಿ.......! ಅವಳ ಬಾಳು ಹಾಳಾಗ ಬಾರದು ಅಂತವಳನ್ನು ಮದುವೆಯಾಗಲು ಒಪ್ಪಿ ಮುಂದೆ ಬಂದಿದ್ದಾನೆ. ನೀವೂ ಇದೀರಾ..... ಮಗಳ ಬಾಳು ಹಾಳಾದರೂ ಪರವಾಗಿಲ್ಲ.... ನಿಮ್ಮ ಒಣ ಪ್ರತಿಷ್ಠೆಗೆ ಮಾತ್ರ ಭಂಗ ಬರಬಾರದು

ಅಲ್ವಾ? ನನ್ನಂತಹ ಬೀಗರು ಸಿಕ್ಕಿದರೆ ನಿಮ್ಮ ಸ್ಥಾನ ಮಾನವೂ ಹೆಚ್ಚುತ್ತೆ ತಿಳೀತೇ!" ಕುಟುಕಿ ಮಾತನಾಡಿದಳು.

"ಏನ್ಸಾರ್, ಸುಲಭವಾಗಿ ನೆರವೇರುವ ಕಾರ್ಯಕ್ಕೆ ಭಂಗ ತರುತ್ತಿದೀರಲ್ಲ.... ಏನ್ರೀ ವನಜಾ ನೀವೇನು ಹೆಳ್ತೀರಿ. ಗೋಪೀನ ಮದುವೆಯಾಗೋಕೆ ನಿಮಗೆ ಇಷ್ಟಾನಾ?" ಬೇಗ ಹೇಳಿ.

"ಹ್ಞೂ," ಎಂದಳು ವನಜಾ ನಾಚುತ್ತಾ..... ಯಾವ ಅನುಮಾನವಿಲ್ಲದೇ.... ಅನುಮಾನಿಸಿದರೆ ಈ ಸಮಯ ಮಿಂಚಿಹೋಗುತ್ತದೆ ಎಂಬ ಹೆದರಿಕೆ ಅವಳಿಗೆ.

"ನನಗೆ ಅವಮಾನ ಮಾಡೋರ ಸಾಲಿಗೆ ನೀನೂ ಹೋಗಿ ಸೇರ್ಕೊತೀನಿ ಅಂತೀಯಲ್ಲ. ನಾಚಿಕೆ ಆಗೊಲ್ಲ ನಿನಗೆ.... ನೀನೇನಾದ್ರೂ ಗೋಪಿನ ಮದುವೆಯಾದರೆ ನನ್ನ ಪಾಲಿಗೆ ನೀನು ಸತ್ತಂತೆ....."

"ಚೆನ್ನಾಗಿದೆ ನಿಮ್ಮ ಮಾತು. ಒಂದು ಬಾರಿ ನಿಮ್ಮ ಮಗಳ ಮದುವೆ ನಿಂತು ಹೋದರೆ, ಮುಂದೆ ಯಾವ ಧೀರ ತಾನಾಗಿಯೇ ನಿಮ್ಮ ಮನೆ ಬಾಗಿಲಿಗೆ ಬಂದು ಅವಳ ಕೈ ಹಿಡಿಯುತ್ತಾನೆ......?" ಆಗ ಅವಳು ಬದುಕಿದ್ದೂ ಸತ್ತಂತೆಯೇ. ಈಗ ಅವಳು ನಿಮ್ಮ ಪಾಲಿಗೆ ಸತ್ತು, ಗೋಪಿಯ ಮನೆಯಲ್ಲಿ ಬದುಕಲಿ.... ನಿಮಗೆ ಯಾಕೆ ಇಷ್ಟು ಹಠವೋ ನನಗೆ ಅರ್ಥವಾಗುತ್ತಿಲ್ಲ. ಅಧೈರ್ಯಗೊಳ್ಳುತ್ತಿದ್ದರೂ ನುಡಿದಿದ್ದ.

"ಅಪ್ಪಾ..... ನಿಮ್ಮ ಮರ್ಯಾದೆಯನ್ನು ಉಳಿಸಲು ಬಂದಿರುವ ಗೋಪಿಯನ್ನು ಅರ್ಥಮಾಡಿಕೊಳ್ಳಿ. ನಾನು ಅವನ ಜತೆಯಲ್ಲಿ ಸುಖವಾಗಿರುತ್ತೇನೆ ಎಂಬ ನಂಬಿಕೆ ನನಗಿದೆ." ನನಗೆ ಆಶೀರ್ವಾದ ಮಾಡಿ ಎಂದು ವನಜಾ ತಂದೆಯ ಕಾಲು ಮುಟ್ಟಿ ನಮಸ್ಕರಿಸಿದಾಗ, ಸದಾನಂದ ಮೆತ್ತಗಾದ..... ಆದರೂ ಗದ್ಗದ ಧ್ವನಿಯಲ್ಲಿ ನುಡಿದ.

"ವನಜಾ.... ನೀನು ನನ್ನ ಮಗಳಾಗಿ ಇವರುಗಳ ಎದುರಿಗೆ ನನಗೆ ಅವಮಾನ ಮಾಡ್ತಾ ಇದೀಯ.... ಇದು ಸರೀನಾ?"

"ಇಲ್ಲಪ್ಪಾ.... ನೀವೇ ಯೋಚಿಸಿ. ವಾಸುಕಿಯಾರೋ.... ನಾವು ಯಾರೋ ಅವರು ನನ್ನನ್ನು ಮದುವೆಯಾಗಲು ಸಿದ್ಧರಿಲ್ಲ. ಆದರೆ ಅವರು ಹೇಳುತ್ತಿರುವ ಮಾತುಗಳು ಸರಿ ಅನ್ನಿಸುತ್ತಿದೆ. ಅವರಿಷ್ಟದಂತೆ ನಾವುಗಳು ಇಲ್ಲಿ ಸೇರಿದ್ದೇವೆ. ಅವರು ನಮ್ಮಂತೆ ಅಲ್ಲ. ಸಮಾಜ, ಸಮಾಜದ ಸುತ್ತ ಮುತ್ತ, ಅವರ ಪ್ರಪಂಚವೇ ಬೇರೆ. ನನ್ನ ಪ್ರಪಂಚವೇ ಬೇರೆ. ಒಂದಲ್ಲ ಒಂದು ದಿನ,

ಹೆಣ್ಣಾಗಿ ಹುಟ್ಟಿದ ನಾನು, ನಿಮ್ಮ ಮನೆಯಿಂದ ಹೊರಗೆ ಹೋಗಲೇ ಬೇಕು. ಈದಿನ ಗೋಪಿಯ ಕೈ ಹಿಡಿಯದೇ ಹೋದರೆ, ನಾನು ಮುರ್ಖಳಾಗ್ತೀನಿ. ನಮಗೆ ಆಶೀರ್ವಾದ ಮಾಡಿ ಎಂದಾಗ, ಗೋಪಿ, ತಾನೂ ಬಾಗಿ ಸದಾನಂದನಿಗೆ ನಮಸ್ಕರಿಸಿದ. ನಂತರ ಇಬ್ಬರೂ ಪರಶುರಾಮರಿಗೆ ನಮಸ್ಕರಿಸಿದಾಗ, ಅವರು ಅಭಿಮಾನಂದಿಂದ ಮಗನನ್ನು ತಬ್ಬಿಕೊಂಡರು. ಪೋಲಿಸ್ ಅಧಿಕಾರಿಯ ಹೃದಯ ವೈಶಾಲ್ಯವನ್ನು ನೋಡಿ ಸದಾನಂದ ತೆಪ್ಪಗಾದ...."

"ಅಂತೂ ಎಲ್ಲರೂ, ಒಂದು ಒಪ್ಪಂದಕ್ಕೆ ಬಂದಂತಾಗಿತ್ತು. ಎಲ್ಲರೂ ಮದುವೆ ಸಮಾರಂಭ ನಡೆಯುತ್ತಿದ್ದ ಚಪ್ಪರ ಅಡಿಗೆ ಬಂದರು. ಕುಳಿತಿದ್ದವರೆಲ್ಲರೂ ಅವರನ್ನೇ ನೋಡಿದರು. ಇವರುಗಳನ್ನುಳಿದು ಉಳಿದವರೆಲ್ಲರ ಮದುವೆ ಕಾರ್ಯಗಳು ಮುಗಿದಿದ್ದವು. ವಾಸುಕಿ ಎಲ್ಲರ ಕ್ಷಮೆಯಾಚಿಸಿದ. ಏನೋ ಒಂದು ಭಿನ್ನಾಭಿಪ್ರಾಯವುಂಟಾಗಿ, ಒಪ್ಪಂದಕ್ಕೆ ಬರಲು ವಿಳಂಬವಾಯಿತು. ಎಲ್ಲರೂ ಸಹಕರಿಸಬೇಕು. ನವದಂಪತಿಗಳಿಗೆ ನಮ್ಮೆಲ್ಲರ ಶುಭ ಹಾರೈಕೆಗಳು. ಮದುವೆಯ ಕಲಾಪ ಮುಗಿದಿದ್ದರೆ, ನೀವುಗಳು ಭೋಜನಕ್ಕೆ ಹೋಗಬಹುದು. ಎಲ್ಲರಿಗೂ ಧನ್ಯವಾದಗಳು ಎಂದು ಹೇಳಿ, ಮತ್ತೆ ಪರಶುರಾಮರ ಬಳಿಗೆ ಬಂದ."

"ಸಾರ್. ನೀವೇನೋ ದೊಡ್ಡ ಮನುಸ್ಸು ಮಾಡಿ, ವನಜನ್ನ ನಿಮ್ಮ ಮನೆಗೆ ಸೊಸೆಯನ್ನಾಗಿ ಮಾಡಿಕೊಳ್ತಿದೀರಿ. ಈಗ ನನ್ನ ಗತಿಯೇನು?" ನಗುತ್ತಾ ಕೇಳಿದ.

"ಏನಯ್ಯಾ ಈಗ ಹೀಗೆ ಕೇಳ್ತಿದೀಯಲ್ಲಾ? ನಿನ್ನ ಅವಿವೇಕದಿಂದ ನಿನಗೀಗ ಈಗತಿ ಬಂದಿದೆ.... ನೀನು ಕೂರಬೇಕಾದ ಹಸೆಮಣೆ ಮೇಲೆ ಗೋಪಿ ಕೂತ್ಕೋತಿದ್ದಾನೆ... ಈಗ ವ್ಯಥೆ ಪಟ್ಟರೆ ಹೇಗೆ? ಚೆನ್ನಾಗಿದೆ?" ಅವರ ಧ್ವನಿಯಲ್ಲಿ ವ್ಯಂಗ್ಯವಿರಲಿಲ್ಲ.

"ಅದಕ್ಕೆ ಒಂದು ಕೋರಿಕೆ ನೀವು ಒಪ್ಪುವುದಾದರೆ, ನಿಮ್ಮ ಸೋದರ ಸೊಸೆ, ಸವಿತಾಳನ್ನು ನಾನು ಈಗಳಿಗೆಯಲ್ಲಿ ಇಲ್ಲಿ ಮದುವೆಯಾಗಲು ಸಿದ್ಧನಾಗಿದ್ದೇನೆ. ನಾನು ಹಾಕಿಸಿದ ಚಪ್ಪರದ ಕೆಳಗೆ ನನ್ನ ಮದುವೆ ನಡೆಯದಿದ್ದರೆ ಏನು ಚೆನ್ನಾ? ಅಲ್ವಾ?" ಅಲ್ವಾ ಸಾರ್?

"ಏನಯ್ಯಾ ಬಹಳ ಜಾಣನಂತೆ ಮಾತನಾಡ್ತಿದೀಯ.... ಪರವಾಗಿಲ್ವೆ?"

"ಆ ಯೋಗ್ಯತೆ ನನಗೆಲ್ಲಿದೆ ಸಾರ್!......"

"ಇರಲಿ, ಇರಲಿ. ನನ್ನನ್ನು ಅಯೋಗ್ಯ ಅಂತ ಪರೋಕ್ಷವಾಗಿ

ಅನ್ನುತ್ತಿರುವಂತಿದೆ. ಎಲ್ಲಾ ಸೇರಿ ನನ್ನ ದರ್ಪವನ್ನು ಇಳಿಸಿ ಬಿಟ್ಟಿರಿ.... ಅದೇ ನನಗೆ ವ್ಯಥೆ.... ಮೊದಲು ವೇಣು ಎಲ್ಲಿದ್ದರೂ ಹುಡುಕಿ, ಅವನ ಸೊಂಟ ಮುರೀರಿ."

"ನಿಮ್ಮ ವ್ಯಥೆ ನನಗೆ ಅರ್ಥವಾಗುತ್ತೆ ಸಾರ್... ಆದರೆ ಅದರಿಂದ ಎಲ್ಲರಿಗೂ ಲಾಭವೇ..... ಸವಿತಾ ನನಗೆ ಮೆಚ್ಚುಗೆಯಾಗಿದ್ದಾಳೆ. ನೀವೇನಂತೀರಿ?"

"ಶುಭಸ್ಯ ಶ್ರೀಘ್ರಂ.... ಅಂತ ಹೇಳದಿದ್ದರೆ ಇನ್ನೇನೇನಾಗುತ್ತೋ ಇಲ್ಲಿ....

"ನಿಮ್ಮ ತಂಗಿ, ನಿಮ್ಮ ಸವಿತಾ..... ಅವರುಗಳು ಏನೇನ್ನನ್ನುತ್ತಾರೋ....."

"ಅವರುಗಳೂ ನಮ್ಮ ಗೋಪಿಯಂತೇ. ನನ್ನ ಮಾತನ್ನು ಖಂಡಿತಾ ಅಲ್ಲಗಳೆಯುವುದಿಲ್ಲ. ಆ ನಂಬಿಕೆ ನನಗಿದೆ. ನೀನು ಹೋಗಿ ಖಾಲಿ ಇರುವ ಇನ್ನೊಂದು ಹಸೆಮಣೆಯ ಮೇಲೆ ಕೂತ್ಕೇ." ನಮ್ಮ ಸಂಪ್ರದಾಯದಂತೆ, ನಾನು ನನ್ನ ಸೋದರ ಸೊಸೆಯನ್ನು ಹಸೆಮಣೆಗೆ ಕರೆತರುತ್ತೀನಿ ಎಂದು ತಂಗಿ ಕುಳಿತಿದ್ದಲ್ಲಿಗೆ ಬಂದರು. ಅವರ ದರ್ಪ ಒಂದಿಂಚು ಅಡಿ ಕೆಳಗೆ ಇಳಿದು ಹೋಗಿತ್ತು.

"ಜಾನಕಿ ಬಾಯಿಲ್ಲಿ" ಎಂದು ತಂಗಿಯನ್ನು ಕರೆದು, ವಾಸುಕಿ, ಸವಿತಳನ್ನು ಮೆಚ್ಚಿ ಮದುವೆಯಾಗಲಿರುವ ವಿಷಯವನ್ನು ತಿಳಿಸಿದರು. ಜಾನಕಿ, ಪರಶುರಾಮನ ತಂಗಿ ಮೊದಲಿಗೆ ಒಪ್ಪಲಿಲ್ಲ.

"ಯಾವುದೋ ಚಪ್ಪರದಲ್ಲಿ ಮದುವೆ ಮಾಡಿ ಮುಗಿಸಲು, ನಾವು ದಿಕ್ಕು ಗೆಟ್ಟವರೇ..... ನೀನು ಒಪ್ಪಬಾರದಾಗಿತ್ತು. ಅಲ್ಲದೇ, ಇದ್ದಕ್ಕಿದ್ದಂತೇ ವನಜಳನ್ನು ಬಿಟ್ಟು ಸವಿತಳನ್ನು ಮದುವೆಯಾಗ್ತೀನಿ ಅಂತ ಯಾಕೆ ಅನ್ನುತ್ತಿದ್ದಾನೆ." ಮೊದಲು ವಿಚಾರಿಸು.

"ವೇಣುನ ನೀನು ಸರಿಯಾಗಿ ಬೆಳೆಸಿಲ್ಲ. ಸಿನಿಮಾ, ನಾಟಕ ಅಂತ ಕೆಟ್ಟು ಹೋಗಿದ್ದಾನೆ. ತನ್ನ ಪಾಡಿಗೆ ತಾನು ಸುಮ್ಮನಿರುವುದು ಬಿಟ್ಟು ಕಿತಾಪತಿ ಮಾಡಿದ್ದಾನೆ. ಹಣ ಬೇಕಿದ್ದರೆ, ನನ್ನನ್ನು ಕೇಳಿದ್ದರೆ ಕೊಡುತ್ತಿದ್ದೆ......" ಬ್ಲಾಕ್‌ಮೇಲ್ ಮಾಡೋಣ?

"ಅವನು ಅಂತಹವನಲ್ಲ.... ವಾಸುಕಿದೇ ಏನೋ ಕಿತಾಪತಿ ಇರಬೇಕು."

"ಹಾಗಾದರೆ ಅವನೆಲ್ಲಿಗೆ ಓಡಿಹೋದ? ಯಾಕೆ ಹೋದ..... ಇವನು ವನಜನ್ನ ಮದುವೆ ಮಾಡಿಕೊಳ್ಳುಲು ಒಪ್ಪಿದ್ದವನು, ಹಾಗೇಕೆ ಮಾಡ್ತಾನೆ? ವೇಣೂದೆ ಕಿತಾಪತಿ. ನನಗೆ ಹೆದರಿ ಓಡಿಹೋಗಿದ್ದಾನೆ."

"ಮತ್ತೀಗ? ವನಜಳ ಗತಿ.... ಅವರುಗಳು ಸುಮ್ಮನಿರ್ತಾರಾ?"

"ಆ ಹುಡುಗಿ ಬಾಳು ಹಾಳಾಗಬಾರದು ಅಂತ ನಾನು, ಗೋಪಿ ಇಬ್ಬರೂ ಒಂದು ತೀರ್ಮಾನಕ್ಕೆ ಬಂದೆವು. ಗೋಪಿ ಮದುವೆಯಾಗ್ತಾನೆ ಅವಳನ್ನ ಈಗ."

"ಅತ್ತಿಗೆ ಏನಂತಾರೋ...... ಅವರಿಗೆ ತಿಳಿಸಿದ್ಯಾ?" ಏನಿದೆಲ್ಲಾ?

"ಮೈಥಿಲಿಗೆ ಮೊದಲಿನಿಂದಲೂ ವನಜನ್ನ ಕಂಡರೆ ಜಾಸ್ತಿ ಇಷ್ಟ. ಮಗಳಂತೆ ನೋಡಿಕೊಳ್ತಾಳೆ. ಈಗ ನೀನು ಏನಂತೀಯ....?"

"ಸವಿತನ್ನ ಕೇಳಬೇಡವೇ......? ಅವಳನ್ನು ಗೋಪಿಗೆ ತಂದುಕೊಳ್ಳಲಿ ಅಂತ ನನಗೆ ಆಸೆ ಇತ್ತು. ಈಗ ನೋಡಿದರೆ ಹೀಗೆ."

"ಸವಿತ ನಿನ್ನ ಸ್ವಂತ ಮಗಳಲ್ಲ ಅಂತ ನನಗೆ ಗೊತ್ತು. ಆದರೂ ಅವಳು ವೇಣುಗೆ ತಂಗಿ.... ಹಾಗೇ ಅವಳು ಗೋಪಿಗೂ ತಂಗಿಯಾಗ್ತಾಳೆ. ಈ ಸಂಬಂಧ ಹೇಗೆ ಸಾಧ್ಯ? ವಾಸುಕಿ ಏನಾಗಿದ್ದಾನೆ? ನೋಡಲು ಚೆನ್ನಾಗಿಲ್ಲವೆ? ವಿದ್ಯಾವಂತನಲ್ಲವೆ? ಬೇಕಾದಷ್ಟು ಆಸ್ತಿ ಇದೆಯಂತೆ......"

ಸವಿತ ಬಂದು ನಿಂತಳು. ವಾಸುಕಿಯನ್ನು ಕರೆಸಿ, ಮತ್ತೆ ಒಪ್ಪಿಗೆಯನ್ನು ಕೇಳಿದಾಗ ಸವಿತಾ ಯಾವ ಸಂಕೋಚವಿಲ್ಲದೇ ಒಪ್ಪಿಗೆಯನ್ನಿತ್ತಳು.

"ಗೋಪಿ, ತಾಯಿ ಕೊಟ್ಟ ಶಲ್ಯವನ್ನು ಹೊದ್ದು, ಪೋಲಿಸ್ ದಿರಿಸಿನಲ್ಲೇ ಹಸೆಮಣೆಯನ್ನೇರಿದ. ಸದಾನಂದನಿಂದ ವಿಷಯ ತಿಳಿದ ಸುನಂದ ಪೆಚ್ಚಾದಳು, ಗೋಪಿ ಆಪದ್ಬಾಂದವನಂತೆ ಮಗಳನ್ನು ಉದ್ಧರಿಸುತ್ತಿದ್ದಾನೆ ಎಂದು ಹರ್ಷಗೊಂಡಳು. ಮಗಳ ಕಡೆ ನೋಡಿದಳು. ಅವಳ ಸಂತಸದ ಮುಖವನ್ನು ಕಂಡು ಅವಳಲ್ಲಿ ಏನೋ ಅನುಮಾನ ಮೂಡಿತು. ಆದರೆ ಅದನ್ನು ವ್ಯಕ್ತಗೊಳಿಸಲಿಲ್ಲ."

"ವಾಸುಕಿ ಗೋಪಿಯನ್ನು ಅಭಿನಂದಿಸಿ, ತಾನೂ ಹಸೆಮಣೆಯನ್ನೇರಿದ ಸವಿತಾ ವೇಣುವನ್ನು ಮನದಲ್ಲೇ ಅಬಿನಂದಿಸಿದಳು. ವಾಸುಕಿಯ ಅಕ್ಕ ಮಾತ್ರ ಬಂದು," ಇದೇನೋ ವಾಸು..... ನೀನೇ ಹೀಗೆ ಮಾಡ್ತಿದೀಯಲ್ಲ. ನಿನ್ನ ಸಂಘಕ್ಕೆ ಕೆಟ್ಟ ಹೆಸರು ಬರುಲ್ಲವೇನೋ.... ಅಂತ ಕೇಳಿದಳು.

"ಅಕ್ಕಾ, ನಿನ್ನ ಮಾತನ್ನು ಕೇಳಿ, ನಾನು ವನಜಳನ್ನು ನೋಡಿದೆ..... ಅದೇ ಕಾರಣದಿಂದ ಇವತ್ತು ಸವಿತಳೊಂದಿಗೆ ನನ್ನ ಮದುವೆ ನಡೆಯುತ್ತಿದೆ. ಇದು ಋಣಾನುಬಂಧ. ಇಲ್ಲದಿದ್ದರೆ ಬ್ರಹ್ಮಚಾರಿಯಾಗಿರುತ್ತಿದ್ದೆ" ನಕ್ಕ.

"ಸಮಾಜ, ಆದರ್ಶ ಅದೂ ಇದು ಅಂತ ಅಂದುಕೊಂಡು ನೆಂಟರಿಷ್ಟರನ್ನು

ಕರೆಯಲಿಲ್ಲ. ಏನಂದು ಕೊಳ್ತಾರೋ..... ಅಪವಾದ ಹೊರಿಸ್ತಾರೆ."

"ಏನಂದುಕೊಳ್ತಾರೆ.....? ನಾನು ಮೊದಲೇ ಹೇಳಿದ್ದೆನಲ್ಲವೇ.... ನನ್ನ ಮದುವೆ ಇದೇ ರೀತಿ ಅಂತ.... ಅಕ್ಕಭಾವನ್ನ ಬಿಟ್ಟರೆ ಬೇರೆ ನೆಂಟರು ಏಕೆ?"

ಉಳಿದವೆಲ್ಲರೂ ಊಟದ ಮನೆಯಲ್ಲಿ ಸರಳವಾದ ರುಚಿಯಾದ ಶುಚಿಯಾದ ಭೋಜನದ ಸವಿಯನ್ನು ಉಣ್ಣುತ್ತಿದ್ದರೆ, ಇಲ್ಲಿ ಗೋಪಿ–ವನಜ, ವಾಸುಕಿ–ಸವಿತಾ, ಸಗಳದಲ್ಲಿ ಅತಿ ಸರಳವಾಗಿ ಮದುವೆಯಾದರು. ಸದಾನಂದ ವಾಸುಕಿಗೆಂದು ತಂದಿದ್ದ ಚಿನ್ನದ ಉಂಗುರವನ್ನು ಗೋಪಿಯ ಬೆರಳಿಗೆ ತೊಡಿಸುವಂತೆ ವನಜಳ ಕೈಗೆ ಕೊಟ್ಟರು. ಮೈಥಿಲಿ ತಮ್ಮ ಕೊರಳಿನಲ್ಲಿದ್ದ ಸರವನ್ನೇ ವನಜಳಿಗೆ ತೊಡಿಸುವಂತೆ ಗೋಪಿಯ ಕೈಗೆ ಕೊಟ್ಟಳು.

ವಾಸುಕಿ ತಾನು ತಂದಿದ್ದ ಮಾಂಗಲ್ಯದ ಸರವನ್ನು ಸವಿತಳ ಕೊರಳಿಗೆ ಹಾಕಿದ. ಸಿದ್ಧವಾಗಿಟ್ಟಿದ್ದ ಹೂಮಾಲೆಗಳನ್ನು ಪರಸ್ಪರ ಹಾಕಿಕೊಂಡರು. ಅಗ್ನಿಯ ಮುಂದೆ ನಿಂತು, ಮನಸ್ಸಾಕ್ಷಿಯಾಗಿ ಮದುವೆಯಾದರು. ನಂತರ ತಮ್ಮ ತಮ್ಮ ಮನೆಯ ಹಿರಿಯರಿಗೆ ನಮಸ್ಕರಿಸಿ ಆಶೀರ್ವಾದ ಪಡೆದರು. ಆದರೂ ಹಿರಿಯರಲ್ಲಿ ಏನೋ ಕೊರತೆ. ಒಬ್ಬೊಬ್ಬರ ಮಾತಸ್ಸಿನಲ್ಲಿ ಒಂದೊಂದು ಕೋಲಾಹಲ. ಮೈಥಿಲಿಯೊಬ್ಬಳನ್ನುಳಿದು, ಉಳಿದವರಿಗೆಲ್ಲಾ ಹೀಗೇಕೆ ಆಯ್ತು ಎನ್ನುವ ಕುತೂಹಲಭರಿತ ಸಂದೇಹ.

"ಮುಂದಿನ ಪಂಕ್ತಿಯಲ್ಲಿ ಎಲ್ಲರೂ ಒಟ್ಟಿಗೇ ಸಾಲಾಗಿ ಕುಳಿತು ಸಿಹಿ ಊಟವನ್ನು ಮಾಡಿ, ತಂಬೂಲವನ್ನು ಹಾಕಿಕೊಂಡು, ಫಲತಂಬೂಲವನ್ನು ತೆಗೆದುಕೊಂಡು, ತಮ್ಮ ತಮ್ಮ ಮನೆಗೆ ಹೊರಟರು. ಉಳಿದ ಕೆಲಸವನ್ನು ಸಂಘದವರು ನೋಡಿಕೊಳ್ಳುತ್ತೇವೆಂದು ಹೇಳಿದ್ದರಿಂದ ವಾಸುಕಿ, ಸಹ ತನ್ನ ನವವಧುವನ್ನು ಕರೆದುಕೊಂಡು ತನ್ನ ಮನೆಗೆ ಹೋಗುವುದಾಗಿ ಹೇಳಿದ."

ವನಜ ಸವಿತಳನ್ನು ಅಭಿನಂದಿಸಿ ನಿಮ್ಮ ಮದುವೆ ಎಷ್ಟು ಸುಲಭವಾಗಿ ನಡೆದು ಹೋಯ್ತು! ವಾಸುಕಿಯನ್ನು ಕೇಳಿ, ನಿಮಗೆ ಎಲ್ಲಾ ಗೊತ್ತಾಗುತ್ತೆ.... ಎಂದಿದ್ದಳು.

"ನಿಮಗೆ ವಾಸುಕಿ ಮೇಲೆ ಕೋಪನಾ.....?"

"ಇಲ್ಲ, ಸವಿತಾ, ಖಂಡಿತಾ ಕೋಪವಿಲ್ಲ." ನನಗೆ ಅವರು ತುಂಬಾ ಉಪಕಾರವನ್ನೇ ಮಾಡಿದ್ದಾರೆ. ನಿಧಾನವಾಗಿ ನಿನಗೆ ಎಲ್ಲಾ ತಿಳಿಯುತ್ತೆ. ಆದರೂ ಮಾಮಾ ಅದೆಷ್ಟು ಸುಲಭವಾಗಿ ಒಪ್ಪಿದರಲ್ಲಾ ನನಗೆ ಅದೇ

ಆಶ್ಚರ್ಯ..... ನಮ್ಮ ಜತೇಲೇ ಇದ್ದ ವೇಣು ಅದೆಲ್ಲಿಗೆ ಓಡಿಹೋದನೋ.... ಸವಿತಾ ಕೇಳಿದಳು.

"ಅವನಿಗೆ ಹೆದರಿಕೆ, ಇಬ್ಬಬ್ಬರು ಪೋಲಿಸ್ನೋರು ತದುಕಿ ಹಾಕ್ತಾರೆ ಅಂತ..... ಅಲ್ವಾ?" ವನಜ ನಗುತ್ತಾನುಡಿದಳು.

"ಇಲ್ಲ ವನಜಾ.... ಹಾಗೆ ಮಾಡುತ್ತಿರಲಿಲ್ಲ. ನಮ್ಮ ವೇಣು, ಪರಶುಮಾಮನ ಮಗನೇ. ಗೋಪಿಗೆ ಸ್ವಂತ ತಮ್ಮ..... ನಾನು ಸ್ವಂತ ತಂಗಿಯಂತೆ ಆ ಮನೇಲಿ ಬೆಳೆದೆ ಅಷ್ಟೇ......" ಮಾಮಾ ನಮಗೆಲ್ಲಾ ಎಷ್ಟು ಸಹಾಯ ಮಾಡಿದ್ದಾರೆ ಗೊತ್ತಾ?

"ಹೌದಾ? ಈ ವಿಷಯ ನಮಗ್ಯಾರಿಗೂ ತಿಳಿದಿರಲಿಲ್ಲ. ಗೋಪಿಗೂ ಗೊತ್ತಿಲ್ಲ ಅಲ್ವಾ?"

"ಮಾಮಾ, ಅಮ್ಮನಿಗೆ ಮಾತ್ರ ಗೊತ್ತಿತ್ತು. ಮಾಮಿಗೆ ತಿಳಿದರೆ ಪಾಪ ಬೇಜಾರಾಗುಲ್ವಾ ಅದಕ್ಕೇ ಅವರಿಗೆ ತಿಳಿಸಿಲ್ಲ."

"ನಿನಗೆ ಹೇಗೆ ಗೊತ್ತಾಯ್ತು?"

"ವೇಣು ಹೇಳಿದ..... ಆದರೆ ಅದರಿಂದ ಅವನಿಗೆ ಬೇಸರವೇನಿಲ್ಲ. ಈ ಪೋಲಿಸ್ನೋರ ಸಹವಾಸ ಕಷ್ಟ.... ನನಗೆ ಸ್ಟೂಡಿಯೋನೇ ಸರಿ ಅಂತ ಸದಾ ಹೇಳುತ್ತಿರುತ್ತಾನೆ."

"ಸ್ಟುಡಿಯೋ ಅನ್ನುತ್ತು ನೆನಪಿಗೆ ಬಂತು. ನಿನ್ನ ಅಣ್ಣನ ಹತ್ತಿರ ಕ್ಯಾಮೆರಾ ಇದೆಯಾ?"

"ಹುಂ, ಇದೆ. ಮೂವಿ ಕ್ಯಾಮೆರಾ ಸಹ ಇದೆ.... ಯಾಕೆ?"

"ಒಂದು ರಹಸ್ಯ ತಿಳೀತು..... ಅಷ್ಟೆ...." ಎಂದು ಮುದಗೊಂಡಳು.

ಮೈಥಿಲಿ ಅಲ್ಲಿಂದ ಹೊರಡುವ ಮೊದಲು ಸುನಂದಳ ಕೈಹಿಡಿದು, "ಏನೇನೋ ಆಗಿಹೋಯ್ತು ಅಂತ ಕೊರಗಬೇಡಿ..... ಆಗಾಗ ನಿಮ್ಮ ಮಗಳ ಮನೆಗೆ ಬರುತ್ತಾ ಇರಿ" ವಿಶ್ವಾಸಪೂರ್ವಕವಾಗಿ ಹೇಳಿದಳು.

"ನಾನು ಕೊರಗುವ ಮಾತೇ ಇಲ್ಲ. ವನಜಂಗೆ ಮೊದಲಿನಿಂದ ನಿಮ್ಮನ್ನು, ಗೋಪಿನೂ, ಕಂಡರೆ ಬಹಳ ಇಷ್ಟ. ಅವಳ ಆಸೆ ಈಡೇರಿತು. ಅವಳು ಸುಖವಾಗಿರುತ್ತಾಳೆ. ಆದರೆ, ಈ ಮದುವೆ ನಡೆಯುಕ್ಕೆ ಇಷ್ಟೆಲ್ಲಾಗೊಂದಲ ಯಾಕಾಯ್ತು ಅಂತ ಅರ್ಥವಾಗ್ತಿಲ್ಲ....."

"ಬಿಡಿ. ಈಗ ಅರ್ಥಮಾಡಿಕೊಂಡು ಏನಾಗಬೇಕಾಗಿದೆ? ದೇವರು ಏನೇನು ಆಗಬೇಕೋ ಹಾಗೇ ನೆರವೇರಿಸುತ್ತಾನೆ......"

"ಹೌದು, ಆದರೆ, ನಿಮಗೆಲ್ಲಾ ಕೃತಜ್ಞತೆಗಳನ್ನು ತಿಳಿಸುವುದು ನಮ್ಮ ಧರ್ಮ. ಈದಿನ ನೀವುಗಳು ಮಾಡಿದ ಉಪಕಾರವನ್ನು ನಾವು ಈ ಜನ್ಮದಲ್ಲಿ ಮರೆಯುವಂತಿಲ್ಲ....."

"ವನಜ ನನ್ನ ಸೊಸೆಯಾಗಲಿ ಅನ್ನುವ ಆಸೆ ನನಗೂ ಇತ್ತು. ಅವಳು ವಾಸುಕಿಯ ಹೆಂಡತಿಯಾಗಿ ಹೊರಟು ಹೋಗಿದ್ದರೆ, ನನಗಂತೂ ನಿರಾಸೆಯಾಗುತ್ತಿದ್ದುದು ಖಂಡಿತಾ. ದೇವರು ನನ್ನ ಆಸೆಯನ್ನು ಈಡೇರಿಸಿದ.... ಆದರೆ ಎಲ್ಲಾ ಗಡಿ ಬಿಡಿಯಲ್ಲಿ ಮುಗಿದು ಹೋಯ್ತು.... ನಿಮಗೆಲ್ಲಾ ಪಿಚ್ಚೆನ್ನಿಸಿರಬಹುದು. ಈ ರಾತ್ರಿ ಎಲ್ಲರಿಗೂ ನಮ್ಮ ಮನೆಯಲ್ಲೇ ಊಟ. ಹೇಗೂ ಮಗಳನ್ನು ಮನೆತುಂಬಿಸಿ ಕೊಡಬೇಕಲ್ಲ. ಎಲ್ಲಾ ಅಲ್ಲಿಗೇ ಬಂದು ಬಿಡಿ."

ಸದಾನಂದನ ಅಸಮಾಧಾನವನ್ನು ಗಮನಿಸಿದ ವಾಸುಕಿ ಅವರ ಬಳಿಗೆ ಬಂದು, "ನನ್ನಿಂದ ಏನಾದರೂ ತಪ್ಪಾಗಿದ್ದರೆ ಕ್ಷಮಿಸಿ ಬಿಡಿ ರಾಯರೇ.... ನೀವು ತಿಳಿದವರು. ಯಾರ್ಯಾರ ಹಣೆಯಲ್ಲಿ ಹೇಗೆ ಬರೆದಿದೆಯೋ ಹಾಗೇ ನಡೆಯುತ್ತೇ ಅಲ್ಲವೇ?" ಎಂದ.

"ಮತ್ತಿನ್ನೇನಯ್ಯ.... ವನಜಳ ಮೇಲೆ ಅಪವಾದ ಹೊರಿಸಿ, ತಕ್ಷಣವೇ ಆಹುಡುಗಿಯನ್ನು ಮದುವೆಯಾದೆಯಲ್ಲ ಅದು ನ್ಯಾಯಾನಾ?" ಅದೇನು ಕುತಂತ್ರ?

"ನ್ಯಾಯವಾಲ್ಲದಿರಬಹುದು. ಆದರೆ ಅಲ್ಲಿ ನೋಡಿ, ಗೋಪಿ ವನಜ ಎಷ್ಟು ಖುಷಿಯಾಗಿದ್ದಾರೆ. ಅವರಿಗೆ ಅನ್ಯಾಯವಾಗಿದೆ ಅಂತೀರಾ?"

"ಏನೋಪ್ಪ. ನಿನ್ನ ಮಾತು ಕೇಳಿ, ಏನೇನೋ ಆಗಿಹೋಯ್ತು. ನೆಂಟರಿಗೆ ಸ್ನೇಹಿತರಿಗೆ ತಿಳಿದರೆ ನಗೋಲ್ವೇ...."

"ಅವರಿಗೆಲ್ಲಾ ಒಂದು ಭಾರಿ ಊಟ ಹಾಕಿಸಿಬಿಡಿ.... ಚೆನ್ನಾಗಿ ಹೊಗಳಿಕೊಂಡು ಊಟ ಮಾಡ್ತಾರೆ. ಸ ಹೋದು ಮರತೇ ಹೋಗುತ್ತೆ....."

ಅಷ್ಟರಲ್ಲಿ ಪರಶುರಾಮ್ ಬಂದು ಸೇರಿಕೊಂಡರು.

"ಈ ರಾತ್ರಿ ಎಲ್ಲರೂ ನಮ್ಮ ಮನೆಗೆ ಊಟಕ್ಕೆ ಬನ್ನಿ. ಮುಖ್ಯವಾದ ಕೆಲವು ವಿಷಯಗಳನ್ನು ಮಾತನಾಡುವುದಿದೆ" ಎಂದು ಬಿಗಿಕೊಂಡು ಹೇಳಿದಾಗ ಸದಾನಂದ ವಾಸುಕಿಯ ಮುಖವನ್ನು ನೋಡಿದ. ಅದನ್ನು ಗಮನಿಸಿದವರಂತೆ ಪರಶುರಾಮ್ ಹೊರಟು ಹೋದರು.

"ಗೋಪಿ, ತಂದೆಯನ್ನೇ ನೋಡಿದ ಅಪ್ಪನ ತಳಮಳ ಅವನಿಗೆ

ಅರ್ಥವಾಗಿತ್ತು. ಆದರೆ ಈಗ ಏನು ಈ ಹೊಸಪರಿ? ಎಲ್ಲರನ್ನು ತಮ್ಮ ಮನೆಗೆ ಊಟಕ್ಕೆ ಆಹ್ವಾನಿಸಿ, ಏನು ರಂಪ ಮಾಡುವರೋ ಅಂತನ್ನಿಸದೇ ಇರಲಿಲ್ಲ. ವನಜಳಿಗೆ ಹೇಳಿದ."

"ನಿನಗೂ ಬೆಳಗಿನಿಂದ ತುಂಬಾ ಬೇಜಾರಾಗಿರಬಹುದು ಅಲ್ವಾ? ಸರಿಯಾಗಿ ಊಟ ಸಹ ಮಾಡಲಿಲ್ಲ ನೀನು. ಈಗ ನಿಮ್ಮ ಮನೆಗೆ ಹೋಗಿ ಸಾಯಂಕಾಲ ನಿನ್ನ ತಂದೆ ತಾಯಿಯರೊಂದಿಗೆ ಬಾ..... ಈಗ ಸ್ವಲ್ಪ ರೆಸ್ಟ್ ತಗೋ....."

"ಪರವಾಗಿಲ್ಲ. ನಾನು ನಿಮ್ಮ ಮನೆಗೇ ಬರ್ತೀನಿ..... ನಾನು ನಿನ್ನ ಹತ್ತಿರ ತುಂಬಾ ಜಗಳವಾಡಬೇಕು."

"ಛೀ.... ಎಂಥೋಳೆ ನೀನು...." ವಾಸುಕಿಯ ಮುಷ್ಠಿಯಿಂದ ನಿನ್ನನ್ನು ಬಿಡಿಸಿ ನಿನ್ನನ್ನು ಮದುವೆಯಾಗಿದೀನಿ. ನನ್ನ ಹತ್ತಿರ ಜಗಳವಾಡಬೇಕಾ?

"ನಿನ್ನ ಕಮಂಗಿ ಕಸಿನ್ ಮಾಡಿದ್ದು ಸರೀನಾ? ಅವನಿಗೆ ನೀನು ಬುದ್ಧಿಕಲಿಸುಲ್ಲ..... ನಂಗೆ ಗೊತ್ತು. ನಾನು ಮಾತ್ರ ಅವನನ್ನು ಸುಮ್ಮನೇ ಬಿಡುಲ್ಲ."

"ಅವನು ನಿನ್ನ ಭಾವ ಕಣೇ.... ಅವನಿಗೆ ಮರ್ಯಾದೆ ಕೊಡು..... ಹಾಗೇ ನನಗೂ ಮರ್ಯಾದೆ ಕೊಡು. ಗೋಪಿ ಬಂದ, ಹೋದ, ಅಂತ ಮಾತಾಡಿದರೆ ಎಲ್ಲಾ ನಗ್ತಾರೆ.... ಗೊತ್ತಾ....?"

"ಈಗಲೇ ಸಾಧ್ಯವಿಲ್ಲಪ್ಪಾ.... ನಿಧಾನವಾಗಿ ಅಭ್ಯಾಸ ಮಾಡಿಕೊಳ್ತೀನಿ."

"ವನಜಾ.... ಅಲ್ಲಿನೋಡು, ವಾಸುಕಿ, ಸವಿತಾ ಎಷ್ಟು ವಿನೋದವಾಗಿ ಮಾತನಾಡುತ್ತಿದ್ದಾರೆ. ನಮ್ಮಹಾಗೆ ಜಗಳವಾಡುತ್ತಿಲ್ಲ. ಅವರ ಪ್ರೇಮ ಹೊಚ್ಚ ಹೊಸದಲ್ವಾ. ಅದಕ್ಕೇ ಎಷ್ಟು ಖುಷಿಯಾಗಿದ್ದಾರೆ."

"ನಮ್ಮ ಪ್ರೀತಿ ಹಳೆಯದಾಯ್ತು ಅಂತ ಗೊಣಗ್ತಾ ಇದೀಯಾ.....?"

"ಹಾಗಲ್ಲ. ನಮ್ಮ ರೀತೀನೇ ಬೇರೆ. ಅವರ ರೀತೀನೇ ಬೇರೆ.... ಈಗ ನೋಡು ವಾಸುಕಿಗೆ ಎಲ್ಲಾ ಹೊಸ ಅನುಭವ. ನನಗೆ ಯಾವುದೂ ಹೊಸದು ಅಂತ ಅನ್ನಿಸ್ತಾನೇ ಇಲ್ಲ....."

"ಗೋಪಿ ಪ್ಲೀಸ್. ಹೀಗೆಲ್ಲಾ ಮಾತನಾಡಿ ನನ್ನ ಮೂಡ್ ಕೆಡಿಸಬೇಡ. ನಮಗೂ ಈಗ ತಾನೇ ಮದುವೆ ಆಗಿದೆ. ಅದೂ ಹೊಸ ಅನುಭವಾನೇ ತಾನೇ......"

"ಸಾರಿ. ಸಾರಿ. ನಮ್ಮಿಬ್ಬರ ಮದುವೆ ನೆರವೇರಿದೆ ಎನ್ನುವುದು ಮರತೇ

ಹೋಗಿತ್ತು. ಮೊದಲಿನ ತರಹ ಹಾಗೇ ಫ್ರೆಂಡ್ಸ್ ಅಂತ ಅಂದುಕೊಂಡಿದ್ದೆ."

"ನಿನಗೆ ಹಾಗೇ ಇರಬೇಕು ಅಂತ ಆಸೆ ಇದ್ದರೆ, ನನ್ನನ್ನು ಉದ್ಧಾರಮಾಡೋ ರೀತಿಯಲ್ಲಿ ಯಾಕೆ ಮದುವೆ ಆದೆ? ಈಗಲೂ ಏನೀಗ? ನಾನು ನಮ್ಮ ಅಪ್ಪನ ಮನೆಗೆ ಹೋದರೆ, ಮತ್ತೆ ನಿನ್ನ ಮನೆಗೆ ಬರುಲ್ಲ....."

ಗೋಪಿ ಜೋರಾಗಿ ನಕ್ಕು ಅವಳ ತಲೆ ಮೇಲೆ ಮೊಟಕಿದ. ಎಲ್ಲರೂ ಅವರ ಕಡೆ ತಿರುಗಿದರು.

"ಎಲ್ಲಾ ಹೊರಡಿ ಹೊತ್ತಾಯ್ತು. ಇನ್ನು ಇಲ್ಲಿಲ್ಲೇ ನಿಂತು ಅದೇನು ನಗಾಡಿತೇದೀರಿ" ಎಂದು ಪರಶುರಾಮ್ ಗುಡುಗಿದಾಗ ಎಲ್ಲರೂ ಎಚ್ಚೆತ್ತರು.

ಮೈಥಿಲಿ ಮನೆಯೊಳಕ್ಕೆ ಮೊದಲು ಹೋಗಿ, ಮದು ಮಕ್ಕಳಿಗೆ ಆರತಿಯನೆತ್ತಲು, ಸಿದ್ಧ ಮಾಡಿ, ಹಾಗೇ.... ಸೇರಿನಲ್ಲಿ ಅಕ್ಕಿಯನ್ನು ತುಂಬಿ ಅದರ ಮೇಲೆ ಬೆಲ್ಲದ ಅಚ್ಚನ್ನಿಟ್ಟು ಮುಂಬಾಗಿಲ ಹೊಸಿಲ ಮೇಲೆ ತಂದಿತ್ತಳು.

ಗೋಪಿ ತಮಾಷೆ ಮಾಡಿದ. "ನಂಗೊತ್ತು ನಿನಗೆ ಫುಟ್‌ಬಾಲ್ ಆಟವಾಡಿ ಅಭ್ಯಾಸವಿಲ್ಲ ಅಂತ..... ಆದರೂ ಈಗ ನೀನು ಬಲಗಾಲಲ್ಲಿ ಜೋರಾಗಿ ಸೇರನ್ನು ಒದ್ದು ಒಳಗೆ ಬರಬೇಕು. ಮಾಡ್ತೀಯಾ?"

ಬಾಗಿಲ ಬಳಿ ಮಣೆ ಹಾಕಿ, ಮದು ಮಕ್ಕಳನ್ನು ನಿಲ್ಲಿಸಿ, ಕುಂಕುಮ ಇಟ್ಟು ಆರತಿ ಎತ್ತಿ ನೀವಾಳಿ ತೆಗೆದರು. ವನಜ ಬಲಗಾಲಿನಲ್ಲಿ ಸೇರನ್ನು ಒದ್ದು ಅಕ್ಕಿಯನ್ನು ಚೆಲ್ಲಿ ಬಲಗಾಲನ್ನಿಟ್ಟು ಒಳಗೆ ಬಂದಳು.

"ಗುಡ್, ವೆರಿಗುಡ್. ನಿನಗೇ ಫಸ್ಟ್ ಪ್ರೈಜ್ ಅಂದ ಗೋಪಿ. ಎಷ್ಟೋ ಬಾರಿ ಆ ಮನೆಗೆ ಬಂದಿದ್ದರೂ, ಈ ರೀತಿಯ ಸ್ವಾಗತ ಅವಳಿಗೆ ಹೊಸದು.... ಉದ್ವೇಗದಿಂದ ಕೆಂಪಾಗಿ ಒಂದು ಕಡೆ ನಿಂತಳು. ಮೈಥಿಲಿ ಗೋಪಿಯನ್ನು ಕರೆದು ಹೇಳಿದಳು. ವನಜನ್ನ ನಿನ್ನ ರೂಮಿಗೆ ಕರೆದುಕೊಂಡು ಹೋಗು. ಒಂದುಗಳಿಗೆ ಇಬ್ಬರೂ ಸುಧಾರಿಸಿಕೊಳ್ಳಿ. ಬೆಳಗ್ಗಿಂದ ಬರೀ ಗಲಾಟೇನೇ ಆಯ್ತು."

ಅಷ್ಟು ಹೇಳಿದ್ದೇ ಸಾಕು ಎಂಬಂತೆ ಗೋಪಿ, ವನಜಳ ಕೈ ಹಿಡಿದು ಎಳೆದು ಕರೆದುಕೊಂಡು ತನ್ನ ರೂಮಿಗೆ ಹೋದ. ಬೆಪ್ಪನಂತೆ ವಾಸುಕಿ ಸವಿತಳ ಕಡೆ ನೋಡಿದ. ಪರಶುರಾಮ್ ಅವನನ್ನು ಗಮನಿಸಿ ನುಡಿದರು.

"ಸವಿತಾ ನನ್ನ ಮಗಳಂತೆ. ಅವಳನ್ನು ಹಾಗೇ ನಿಮ್ಮ ಮನೆಗೆ ಕಳಿಸುವುದು ಸರಿಯಲ್ಲ. ಸಾಯಂಕಾಲ ನಾವುಗಳು ಬಂದು ನಿಮ್ಮ ಮನೆ ತುಂಬಿಸಿ ಕೊಡ್ತೀವಿ. ಆಮೇಲೆ ನೀವುಂಟು ನಿಮ್ಮ ಮನೆಯ ಪದ್ಧತಿ

ಉಂಟು.... ಹೋಗೇ ಸವಿತಾ ಒಳಗೆ ಹೋಗು..... ಎಲ್ಲರಿಗೂ ಕಾಫಿ ತಂದುಕೊಡು."

ಸವಿತಾ ಮಾವನ ಮಾತನ್ನು ಪರಿಪಾಲಿಸುವಂತೆ, ಎಲ್ಲರಿಗೂ ಬಿಸಿ ಬಿಸಿಯಾದ ಕಾಫಿಯನ್ನು ತಂದಿತ್ತಳು. ಗೋಪಿಯ ರೂಮಿನ ಬಾಗಿಲಲ್ಲಿ ನಿಂತು, "ಅತ್ತಿಗೇ ಹೊರಗೆ ಬನ್ನಿ.... ಎಲ್ಲರೂ ಒಟ್ಟಿಗೇ ಕೂತು ಕಾಫಿ ಕುಡಿಯೋಣ.. ಮಜವಾಗಿರುತ್ತೆ....." ಎಂದಳು. ಕಾಫಿಯ ನಂತರ ಸದಾನಂದ ಸುನಂದ ತಮ್ಮ ಮನೆಗೆ ಹೊರಟರು.

"ರಾತ್ರಿಯ ಊಟಕ್ಕೆ ಬರುವುದನ್ನು ಮರೆಯಬೇಡಿ. ಹಾಗೇ ಬರುವಾಗ, ನಿಮ್ಮ ಮಗಳ ಬಟ್ಟೆ ಇತ್ಯಾದಿ ತಂದು ಬಿಡಿ....." ಎಂದು ಮೈಥಿಲಿ ಜ್ಞಾಪಿಸಿದಳು.

ಸವಿತಾ ಮುಖ ತೊಳೆದು ಅಲಂಕರಿಸಿಕೊಂಡಳು. ಮೈಥಿಲಿ ಅವಳನ್ನು ದೇವರ ಮುಂದೆ ಕೂರಿಸಿ, ಉಡಿತುಂಬಿ, ಸೋಬಲಕ್ಕಿ ಹೊಸಸೀರೆ, ರವಿಕೆ, ಬಣವನ್ನು ಕೊಟ್ಟು ಅವಳನ್ನು ಗಂಡನ ಮನೆಗೆ ಕಳಿಸುವ ತಯಾರಿ ನಡೆಸಿದಳು. ಗೋಪಿ, ವನಜಳ ಹೊರತು, ಎಲ್ಲರೂ ವಾಸುಕಿಯ ಮನೆಗೆ ಹೋಗಿ, ಸವಿತಳನ್ನು ಶಾಸ್ತ್ರೋಕ್ತವಾಗಿ ಗಂಡನ ಮನೆಯಲ್ಲಿ ಬಿಟ್ಟು ಬಂದರು.

ಆ ರಾತ್ರಿ ಎಲ್ಲರಿಗೂ ಪರಶುರಾಮ್ ಮನೆಯಲ್ಲಿ ಔತಣ ಸಮಾರಂಭ. ಮೈಥಿಲಿಗೆ ಆಶ್ಚರ್ಯ. ಏನೋ ಒತ್ತಡಕ್ಕೆ ಸಿಕ್ಕಿ ಬಿದ್ದು ಗಂಡ ಮದುವೆಗೆ ಒಪ್ಪಿರಬಹುದು ಅಂತನ್ನಿಸಿತ್ತು. ಆದರೆ ಈಗ ಆತನ ಸಡಗರ ಅವಳಿಗೆ ಆತಂಕವನ್ನುಂಟು ಮಾಡಿತ್ತು. ಹೊರಗಿನಿಂದ ಆರ್ಡರ್ ಕೊಟ್ಟು ಮನೆಗೆ ತರಿಸಿದ ಊಟವಾದರೂ, ಎಲ್ಲಾ ಅಚ್ಚುಕಟ್ಟಾಗಿತ್ತು. ಊಟ ಮುಗಿಸಿ, ಫಲತಾಂಬೂಲದೊಂದಿಗೆ ಸದಾನಂದ ಸುನಂದಾ ಹೊರಟಾಗ,

"ಪರವಾಗಿಲ್ಲ.... ಅಂತೂ ಮಗಳ ಮದುವೆ ಮುಗಿಸಿ ಗೆದ್ದು ಬಿಟ್ಟಿರಿ." ಎಂದು ಆಡಿದಾಗ. ಸದಾನಂದ ಪೆಚ್ಚಾದ. ಬೇಕಾಂತ ಹಂಗಿಸಿ ನುಡಿಯುತ್ತಿದ್ದಾರೆಂದು ಭಾವಿಸಿ...."

"ವಾಸುಕಿಯ ಮಾತು ಕೇಳಿ, ಏನೇನೋ ಆಗಿ ಹೋಯ್ತು. ಭಾನುವಾರ ರಿಸೆಪ್ಷನ್ ಇಟ್ಟುಕೊಳ್ಳೋಣ ಅಂತ ಅಂದುಕೊಂಡಿದ್ದೀನಿ...." ಎಂದ.

"ಅದೆಲ್ಲಾ ಏನೂ ಬೇಡ..... ಮುಖ್ಯವಾದ ಕೆಲಸ, ಆಯಿತಲ್ಲ.... " ಅಂತ ನುಡಿದಾಗ, ಅವರ ಮನಸ್ನಲ್ಲಿ ಏನಿದೆ ಅಂತ ಅರ್ಥವಾಗಲಿಲ್ಲ....

ಊಟ ಮುಗಿದು ಎಷ್ಟೋ ಹೊತ್ತಾದರೂ, ಗೋಪಿ, ವಾಸುಕಿ ಏನೋ

ಗಹನವಾದ ವಿಚಾರಗಳನ್ನು ಮಾತನಾಡುತ್ತಿದ್ದರು. ವನಜಳಂತೂ ಆಕಳಿಸಿ ಸುಸ್ತಾಗಿದ್ದಳು. ಅಡಿಗೆಯವರು ಸಹ ಪಾತ್ರೆಗಳನ್ನು ಖಾಲಿ ಮಾಡಿ, ಲೆಖ್ಖಾಚಾರ ಮುಗಿಸಿ ಹೊರಡುವುದರಲ್ಲಿದ್ದರು. ಪರಶುರಾಮ್ ಗಡಿಬಿಡಿ ಮಾಡಿದರು.

"ಮದು ಮಕ್ಕಳು ಸುಸ್ತಾಗಿದ್ದಾರೆ...... ನಿದ್ದೆ ಮಾಡಬೇಡವೇ..... ಎಲ್ಲಾ ಏಳಿ..... ಏಳಿ."

ವಾಸುಕಿಯ ಮನೆಯವರು ಹೊರಟು ಹೋದನಂತರ, ಮೈಥಿಲಿ ವನಜಳನ್ನು ಕರೆದು ಹೇಳಿದಳು.

"ಅಂತೂ ಕಡೆಗೂ ಗೆದ್ದೆ ವನಜಾ.... ಗೋಪಿ ನಿನ್ನವನು.... ಅವನನ್ನು ಪ್ರೀತಿಯಿಂದ ನೋಡಿಕೊಳ್ಳುವುದು ನಿನ್ನ ಕರ್ತವ್ಯ. ಪೋಲಿಸ್ ನೌಕರಿಗೆ ಸೇರಿದ ಮೇಲೆ ಒರಟನಾಗಿದ್ದಾನೆ. ನೀನು ಸಹಿಸಿಕೊಳ್ಳಬೇಕು....."

"ಆಗಲಿ ಆಂಟಿ....."

"ಇನ್ನು ಮೇಲೆ ನನ್ನನ್ನು ಆಂಟಿ ಅಂತ ಕರೆಯಬೇಡ..... ಅತ್ತೆ ಅಂತ ಕರಿ. ಅಥವಾ ಅಮ್ಮಾ ಅಂತ ಕರಿ ಪರವಾಗಿಲ್ಲ. ಹೋಗು.... ಗೋಪಿ ನಿನಗಾಗಿ ಕಾಯ್ತಾ ಇರ್ತಾನೆ. ಅದವರೆಗಿನ ಧೈರ್ಯವೆಲ್ಲಾ ಕುಸಿದು ಹೋದಂತಾಯ್ತು. ಇದುವರೆಗೂ ಗೋಪಿ ಬರೀ ಸ್ನೇಹಿತನಾಗಿದ್ದ. ಇಂದಿನಿಂದ ಅವನು ನನಗೆ ಪತಿ ಸಹ. ಅವನ ಜತೆ ಹೇಗಿರಬೇಕೋ, ಅವನನ್ನು ಹೇಗೆ ಮೆಚ್ಚಿಸಬೇಕೋ ತಿಳಿಯದಲ್ಲ ಎಂದುಕೊಂಡು ರೂಮಿನೊಳಕ್ಕೆ ಕಾಲಿಟ್ಟಳು. ರೂಮಿನಲ್ಲಿ ಕತ್ತಲೆ ಆವರಿಸಿತ್ತು. ಅವಳಿಗೆ ಭಯವಾಯಿತು. ನಸು ಬೆಳಕಿನಲ್ಲಿ ಒಂದು ಆಕೃತಿ ಇವಳ ಬಳಿಗೆ ಬಂದಿತು. ಹೆದರಿ ಹಿಂದೆ ಓಡಲಿದ್ದವಳನ್ನು ಆ ವ್ಯಕ್ತಿಹಿಡಿದು ಕೊಂಡಿತು. ಗಡ ಮೀಸೆಯ ಕಮಂಗಿ ವೇಣು.....! ಅವನಿಗೆ ಇಲ್ಲೇನು ಕೆಲಸ ಎಂದುಕೊಂಡು..... ಹೆದರಿ ಕಿರುಚಲಿದ್ದವಳನ್ನು ಅವನು ತನ್ನ ಕೈಯಿಂದ ಅವಳ ಬಾಯನ್ನು ಮುಚ್ಚಿ ಆವ್ಯಕ್ತಿ ಅವಳನ್ನು ಮಂಚದೆಡೆಗೆ ಎಳೆದುಕೊಂಡಿತು."

"ಗೋಪಿ..... ಗೋಪಿ.... ಅತ್ತೆ.... ಅತ್ತೆ..." ಎಂದು ಕೂಗಲು ಸಹ ಅವಳಲ್ಲಿ ಧ್ವನಿಯಿರಲಿಲ್ಲ. ಬಾಯಿಯನ್ನು ಅದುಮಿ ಹಿಡಿದಿದ್ದ ಕೈಯನ್ನು ಬಾಯಿಹಾಕಿ ಕಚ್ಚಿದಳು.

'ಹ್ಲಾ' ಎನ್ನುತ್ತಾ ಅವನು ಕೈಯನ್ನು ತೆಗೆದು, ಏಯ್ ವನಜಾ..... ನಾನು ಕಣೇ ಎಂದ.... ಗೋಪಿ ದೂರ ನಿಂತು.

"ಇದೇನಿದು ಅವತಾರ? ಈ ಹೊತ್ನಲ್ಲಿ ಈಗಡ್ಡ ಮೀಸೆ ಏಕೆ?

ನನ್ನನ್ನ ಹೆದರಿಸಿದ್ರೆ ಆಗೋದೇ ಹೀಗೆ" ಎಂದಳು. ನಗುತ್ತಾ
"ಅಬ್ಬಾ.... ನಾನು ಗೋಪಿ ಅಂತ ಹೇಳದೇ ಇದ್ದಿದ್ದರೆ.... ಏನು ಮಾಡಿಬಿಡ್ತಿದ್ದೆಯೋ....."
"ಸಾರಿ.... ಗೋಪಿ ನೋವಾಯ್ತಾ? ಯಾಕೆ ಹೀಗೆ ಮಾಡಿದೆ ನೀನು?"
"ಸ್ವಲ್ಪ ಹೆದರಿಸಿ ತಮಾಷೆ ಮಾಡೋಣ ಅಂತನ್ನಿಸ್ತು....."
"ಅದಕ್ಕೆ ಈ ದಿನವೇ ಆಗಬೇಕಾ?"
"ಹೋಗಲಿ ಬಿಡು ಇದೂ ಒಂದು ತರಹ ಹೊಸ ಅನುಭವ....."
"ಪ್ಲೀಸ್ ಗೋಪಿ ಯಾರಿಗೂ ಹೇಳಬೇಡ......" ಇನ್ನುಮುಂದೆ ಈ ತಮಾಷೆ ಬಿಡು.
"ಹೇಳಲ್ಲ ಬಿಡು.... ಆದರೆ ನೀನು ವೇಣು ಜತೆ ಯಾವಾಗ ಫೋಟೋಗಳನ್ನು ತೆಗೆಸಿಕೊಂಡಿದ್ದೆ? ಅದನ್ನು ಹೇಳು"
"ನನಗೇನೂ ಗೊತ್ತಿಲ್ಲ. ನನಗೆ ತಿಳಿಯದಂತೆ ಯಾರೋ ಈ ಕೆಲಸ ಮಾಡಿದ್ದಾರೆ.... ಆದರೆ ಥೂ ಅಸಹ್ಯ ನಿನ್ನ ತಮ್ಮ ಅಂತೀಯ? ಅವನ್ಯಾಕೆ ಹಾಗಿದ್ದಾನೆ?"
"ನಾನು ಅಮ್ಮನ ಕೈ ಕೆಳಗೆ ಬೆಳೆದೆ. ಅವನು ಅತ್ತೆಯ ಕೈಕೆಳಗೆ ಬೆಳೆದ. ಅಷ್ಟೇ ವ್ಯತ್ಯಾಸ." ಎನ್ನುತ್ತಾ ತಾನು ಸಿಕ್ಕಿಸಿಕೊಂಡಿದ್ದ ಗಡ್ಡವನ್ನು ಸವರಿಕೊಂಡ.
ಥೂ ಮೊದಲು ಕಿತ್ತುಬಿಸಾಡು ಅದನ್ನು. ನೋಡಿದ್ರೆ ಅಸಹ್ಯವಾಗುತ್ತೆ.
"ಈ ಗಡ್ಡ ಮೀಸೆ ನನಗೆ ಎಷ್ಟು ಸಹಾಯ ಮಾಡಿದೆ ಗೊತ್ತಾ? ಇದನ್ನು ಧರಿಸಿದರೆ ನಾನ್ಯಾರು, ವೇಣು ಯಾರು ಅಂತ ಯಾರಿಗೂ ತಿಳಿಯುವುದಿಲ್ಲ. ಈಗ ನಿನಗೂ ಗೊತ್ತಾಗಲ್ಲಿಲ್ಲವಲ್ಲಾ..... ನಿನ್ನನ್ನು ಪೆದ್ದಿ ಮಾಡಿ ಬಿಟ್ಟೆ ನಾನು..." ಜೋರಾಗಿ ನಕ್ಕ. ಹಳೆಯ ವಿಷಯವೂ ನೆನಪಿಗೆ ಬಂದಿತ್ತು.
"ಹ್ಲಾ ಹ್ಲಾ... ನೀನೇ ಜಾಣ ಅಂತ ನಗಬೇಡ. ಈ ಪ್ಲಾನ್ ಮಾಡಿದವನು ವಾಸುಕಿ. ಅವನೇ ಜಾಣ.... ನೀನು ಪೆದ್ದ......"
"ನನ್ನನ್ನು ಪೆದ್ದ ಪೆದ್ದ ಅಂತ ಹಂಗಿಸ್ತೀಯಾ..... ನಿನಗೋಸ್ಕರ ನಿನ್ನ ಪ್ರೀತಿಗೋಸ್ಕರ ನಾನೂ ಇದುವರೆಗೂ ಕಾದಿದ್ದೆನಲ್ಲವೇ.... ಇಷ್ಟೇನಾ ನಿನ್ನ ಪ್ರೀತಿ?" ಈ ಪ್ಲಾನ್‌ನಲ್ಲಿ ನನ್ನದೂ ಸಮಪಾಲು ಇದೆ.
"ಪ್ರೀತಿಯಂತೆ ಪ್ರೀತಿ? ಎಷ್ಟು ಸತಾಯಿಸಿದೆ ನನ್ನನ್ನು.... ಈಗ ನನ್ನ

ಸರದಿ. ನಾನೂ ನಿನ್ನನ್ನು ಸತಾಯಿಸದೇ ಬಿಡುವವಳಲ್ಲ."

"ಪ್ಲೀಸ್ ಬೇಡ ವನಜಾ.... ಇನ್ನು ಮೇಲೆ ಇದಕ್ಕೆಲ್ಲಾ ಅವಕಾಶವಿರಬಾರದು....... ನಾವು ಪ್ರೀತಿಸಿ ಮದುವೆಯಾಗಿದ್ದೀವಿ. ಪ್ರೀತಿಯಿಂದ ಬಾಳಬೇಕು. ಅಲ್ವಾ?" ಸುಮ್ಮನೇ ಒಬ್ಬರನ್ನೊಬ್ಬರು ಸತಾಯಿಸಿದರೆ ಏನು ಚೆನ್ನ.

"ನಿನ್ನ ಮಾತಿಗೆ ತಲೆ ಆಡಿಸಿ ಆಡಿಸಿ ನನಗೂ ಸಾಕಾಗಿದೆ.... ನೀನು ಮಾತ್ರ ನನ್ನ ಮೇಲೆ ಹುಕುಂ ಚಲಾಯಿಸಬಾರದು. ಅದೇನಿದ್ರೂ ಪೋಲಿಸ್ ಸ್ಟೇಷನ್‌ನಲ್ಲಿ. ಮೊದಲು ಈ ಕೃತಕ ಗಡ್ಡ ಮೀಸೆಗಳನ್ನು ಸುಟ್ಟು ಬಿಡು. ಆ ಕೊಳಕು ಫೋಟೋಗಳನ್ನು ಹರಿದು, ಸುಟ್ಟುಹಾಕು."

"ಅಂದ್ಹಾಗೆ ವನಜಾ.... ಆ ಫೋಟೋಗಳು ಯಾರ ಹತ್ತಿರವಿದೆ? ನನಗೆ ಮರತೇ ಹೋಗಿತ್ತು. ಈಗ ಯಾರಾದ್ರೂ ನನ್ನನ್ನು ನೋಡಿದರೆ, ಅದು ನಾನೇಅಂತ ಅಂದ್ಕೊತಾರೇ..... ವೇಣು ಅಂತ ಹೇಳಿದ್ರೆ ನಂಬುಲ್ಲ ಅಲ್ವಾ?" ನಾವಿಬ್ರೂ ಒಂದೇ ತರಹ ಇದೀವಿ ಅಲ್ವಾ?

"ನನಗೀಗ ಅನುಮಾನ ಬರುತ್ತಾ ಇದೆ. ನೀನೇನಾ ಅವತ್ತು ನನ್ನ ಮೇಲೆ ಬಿದ್ದವನು?.... ಮುಂಚೇನೇ ಗೊತ್ತಾಗಿದ್ದಿದ್ರೆ.... ನಾನು ನಿನಗೆ ಬುದ್ಧಿ ಕಲಿಸದೇ ಬಿಡುತ್ತಿರಲಿಲ್ಲ..... " ಎಂದಳು ಸಂದೇಹದಿಂದ ಅವನನ್ನೇ ನೋಡಿ.

"ಇಲ್ಲ ವನಜಾ ನನ್ನ ಮಾತನ್ನು ನಂಬು." ಎನ್ನುತ್ತಾ ಗಡ್ಡ ಮೀಸೆಗಳನ್ನು ಕಿತ್ತು ಕಿಟಕಿಯಿಂದ ಆಚೆ ಬಿಸಾಡಿ, ವನಜಳ ಕಡೆಗೆ ತಿರುಗಿದ. ಇಬ್ಬರ ದೃಷ್ಟಿಯೂ ಮುಂದಿದ್ದ ನಿಲವುಗನ್ನಡಿಯ ಮೇಲೆ ಬಿತ್ತು.... ವನಜ, ಗೋಪಿಯ ಪ್ರತಿಬಿಂಬವನ್ನೇ ನೋಡಿದಳು.

"ಏಯ್ ಹಾಗೆ ನೋಡ ಬೇಡವೇ.... ನನಗೆ ದೃಷ್ಟಿಯಾಗುತ್ತೆ.... ದೀಪಾನ ಆರಿಸ್ಲಾ? ಕತ್ತಲೇಲಿ ಒಬ್ಬರ ಮುಖವನ್ನು ಇನ್ನೊಬ್ಬರು ಎಷ್ಟು ನೋಡಿದರೂ ದೃಷ್ಟಿಯಾಗುಲ್ಲ ಗೊತ್ತಾ? ಎನ್ನುತ್ತಾ ಅವಳನ್ನು ತನ್ನ ಬಳಿಗೆ ಎಳೆದುಕೊಂಡ."

ಬೆಳಗ್ಗೆ ಗೋಪಿ ಹೊರಗೆ ಬರುವುದನ್ನೇ ಕಾದಿದ್ದವರಂತೆ, ಪರಶುರಾಮ್ ಅವನನ್ನು ಕರೆದರು. "ವನಜಾ ಇನ್ನು ಎದ್ದಿಲ್ವಾ?" ಎಂದು ಪ್ರಶ್ನಿಸಿದರು. "ಇಲ್ಲ....." ಎಂದ ತಲೆತಗ್ಗಿಸಿ.....

"ನೋಡು ಯಾವನೋ, ಕುತಂತ್ರಿ ಈ ಕೃತಕ ಗಡ್ಡ ಮೀಸೆಗಳನ್ನು

ನಿಮ್ಮ ರೂಮಿನ ಕಿಟಕಿಯ ಹತ್ತಿರ ಎಸೆದು ಹೋಗಿದ್ದಾನೆ. ವೇಣು ಏನಾದ್ರೂ ಬಂದಿದ್ನಾ? ಅಥವಾ ಯಾರಾದ್ರೂ ಕಳ್ಳ ನುಗ್ಗಿದ್ನಾ?"

"ಏನೋ ನನಗೆ ಗೊತ್ತಿಲ್ಲ....."

"ನಿಮ್ಮಮ್ಮನ್ನ ಕರಿ... ಅವಳು ಯಾರನ್ನಾದರೂ ನೋಡಿದ್ಲಾ ಅಂತ....."

"ಎಲ್ಲಪ್ಪಾ....? ನೀವ್ಯಾರೂ ಮನೇಲೇ ಇರಲಿಲ್ಲವಲ್ಲ ನೆನ್ನೆದಿನ...."

"ಅದಕ್ಕೇ..... ಕೇಳಿದ್ದು... ವೇಣು ವನಜನ್ನ ಹುಡುಕಿಕೊಂಡು ಬಂದಿದ್ದನೇನೋ ಅಂತ ನನಗೆ ಅನುಮಾನ.... ವೇಣು ಬಂದಿದ್ನಾ? ಕರೀ ವನಜನ್ನ ಅವಳನ್ನು ಕೇಳೋಣ."

"ಅವಳಿಗೂ ವೇಣುಗೂ ಏನು ಸಂಬಂಧವಪ್ಪಾ........?"

"ಅದನ್ನೇ ಕೇಳಬೇಕು. ಅವಳಿಗೂ ಅವನಿಗೂ ಏನು ಸಂಬಂಧ"

"ಬೆಳಿಗ್ಗೆ ಏಳುತ್ತಿದ್ದ ಹಾಗೇ ಅದೇನು ತನಿಖೆ ನಿಮ್ಮದು..... ಮಲಗಿದ್ದವರನ್ನು ಎಬ್ಬಿಸಿ ಬಿಟ್ರಾ?" ಎನ್ನುತ್ತಾ ಮೈಥಿಲಿ ಬಂದಳು.

"ಇದು...., ಈ ಹಾಳಾದ್ದು ನಮ್ಮ ತೋಟದಲ್ಲಿ ಹೇಗೆ ಬಂತು ಅಂತ ವಿಚಾರಿಸ್ತಾ ಇದ್ದೆ."

"ಓ.... ಅದಾ....? ಮೊನ್ನೆ ನಮ್ಮ ಸಮಾಜದಲ್ಲಿ ನಾಟಕ ಆಡಿಸಿದೆವಲ್ಲಾ... ಆಗ ಒಬ್ಬ ಹುಡುಗಿ ಹುಡುಗನ ವೇಷ ಹಾಕಿದ್ದಳು ಅವಳದ್ದು... ಇನ್ನುಯಾಕೆ ಅಂತ ನಾನೇ ಎಸೆದೆ ಅದನ್ನು......"

"ನೀನು ಅದನ್ನು ಗೋಪಿಯ ರೂಮಿನ ಕಿಟಕಿಯ ಹತ್ತಿರ ಬಿಸಾಕಿದೆಯಾ? ನಾನು ಇದನ್ನು ನಂಬುಲ್ಲ."

"ನಂಬದಿದ್ದರೆ ಬಿಡಿ...... ಅದೇನು ಇಷ್ಟು ಸಣ್ಣ ವಿಚಾರವನ್ನು ಎಷ್ಟು ದೊಡ್ಡದಾಗಿ ಯಾಕೆ ಮಾಡ್ತೀರೋ...... ಊರು ಹೊಲಗೇರಿ ಒಂದು ಮಾಡ್ತೀರಿ."

"ಯಾವುದನ್ನು ಚಿಕ್ಕವಿಚಾರ ಅಂತ ಅಲಕ್ಷ್ಯ ಮಾಡಬಾರದು ಕಣೇ.... ಕಡೆಗೆ ಅದೇ ನಮ್ಮ ಕುತ್ತಿಗೆಗೆ ಬರುತ್ತೆ. ಇದನ್ನು ನೋಡಿದ ಕೂಡಲೇ ನನಗೆ ಆ ಫೋಟೋ ನೆನಪಿಗೆ ಬಂತು. ನಮ್ಮ ವೇಣು ಎಲ್ಲಿ ಹೋದನೋ......?"

"ಹೋಗಲಿ ಬಿಡಿ..... ಅವನ ಜಾಯಮಾನವೇ ಅಷ್ಟು.... ಕಿತಾಪತಿ ಮಾಡಿ ಹೆದರಿ ಓಡಿ ಹೋಗಿದ್ದಾನೆ. ಬೇಕಿದ್ದರೆ ಮತ್ತೆ ಬರ್ತಾನೆ. ಆಗ ತರಾಟೆಗೆ ತಗೊಳ್ಳಿ. ಈಗ ಮತ್ತೆ ಮತ್ತೆ ಅದೇ ವಿಚಾರವನ್ನು ಆಡಬೇಡಿ

ಗೋಪಿಗೆ ಬೇಸರವಾಗುತ್ತೆ. ಇಲ್ಲಿ ಕೊಡಿ ಅದನ್ನು ಬಚ್ಚಲು ಮನೆಯ ಒಲೆ ಉರಿಗೆ ಎಸೆಯುತ್ತೀನಿ. ಉರಿದು ಬೂದಿಯಾಗಲಿ."

"ಯಾಕೆ ಆಡಬಾರದು? ನಂಗೆಲ್ಲಾ ಗೊತ್ತಾಗಿದೆ. ಎಂದೂ ಬರದೇ ಇದ್ದ ವೇಣು ಏಕೆ ಬಂದ? ಈ ಫೋಟೋ ಯಾರು ತೆಗೆದರು? ನಾನು ಕೆಲವು ವಿಷಯಗಳನ್ನು ತಿಳಿದು ಕೊಳ್ಳಲೇ ಬೇಕಾಗಿದೆ? ನನಗೆ ಈ ಗೋಪಿಯ ಮೇಲೂ ಅನುಮಾನ ಬರುತ್ತಿದೆ."

"ಪೋಲಿಸ್ನೋರಿಗೆ ಎಲ್ಲರ ಮೇಲೂ ಅನುಮಾನವೇ? ಹಾಯಾಗಿರುಕ್ಕೆ ಬಿಡುಲ್ಲವಲ್ಲ ನೀವು......"

"ಪರವಾಗಿಲ್ವೇ? ಮನೆಗೆ ಸೊಸೆ ಬಂದಳು ಅಂತ ಜೋರಾಗಿ ಬಿಟ್ಟಿದೀಯ....."

"ಏನಣ್ಣಾ ಅದು ಬೆಳಿಗ್ಗೇನೇ ಇಬ್ಬರೂ ಜಗಳ ಆಡ್ತೀದೀರಲ್ಲ. ಅಂತ ಜಾನಕಿ ಬಂದು ಕೇಳಿದಾಗ, ಮೈಥಿಲಿ ನಕ್ಕಳು."

"ಜಗಳ ಅಲ್ಲ. ಅವರ ಮಾತಿನ ವರಸೇನೇ ಹಾಗೇ. ದಿಢೀರನೇ... ಅನಿರೀಕ್ಷಿತವಾಗಿ ಮಗನ ಮದುವೆ ನಡೆದು ಹೋಯ್ತಲ್ಲ. ಆ ಕೋಪಾನ ಈಗ ಹೀಗೆ ಆಡಿ ತೋರಿಸ್ತಿದ್ದಾನೆ."

"ಮತ್ತೆ ಅಲ್ಲಿ ಯಾಕೆ ಒಪ್ಪಿಕೊಂಡೆ ನೀನು?" ಜಾನಕಿ ಕೇಳಿದಳು.

"ವೇದಿಕೆ ಮೇಲೆ ನಿಂತು ಭಾಷಣ ಬಿಗಿದು, ನಾನು ಮುಂದೆ ಬರದೇ ಇದ್ದಿದ್ದರೆ, ವಾಸುಕಿ ಎದುರಿಗೆ ಸಣ್ಣವನಾಗುತ್ತಿದ್ದೆ. ನನಗೆ ಅವಮಾನವಾಗುತ್ತಿತ್ತು."

"ಒಬ್ಬನೇ ಮಗನ ಮದುವೆಯನ್ನು ಅದ್ಧೂರಿಯಾಗಿ ಮಾಡಿ, ತನ್ನ ಸಹೋದ್ಯೋಗಿಗಳಿಗೆ, ಅಧಿಕಾರಿಗಳಿಗೆ ಭಾರಿ ಔತಣಕೂಟ ಕೊಡಿಸಬೇಕೆಂಬ ಆಸೆ ಇತ್ತೇನೋ.... ಅದೆಲ್ಲ ತಪ್ಪಿ ಹೋಯ್ತಲ್ಲಾ ಅಂತ ಬೇಜಾರೇನೋ......"

"ವರದಕ್ಷಿಣೆ ಇಲ್ಲ. ಚಿನ್ನ, ಬೆಳ್ಳಿ ಇಲ್ಲ. ಬೇಜಾರಾಗುಲ್ವೇ ಅತ್ತಿಗೆ? ಈಗಲೂ ಏನೀಗ ಒಂದೊಂದಾಗಿ ಕೇಳಿ ತರಿಸಿಕೊಳ್ಳಿ." ಜಾನಕಿ ನುಡಿದಳು.

"ಕೊಡೋ ಜನಾನಾ ಅವರು? ವನಜಳಿಗೆ ಹಾಕಿರುವ ಒಡವೆ ಸಹ ಚಿನ್ನದ್ದೋ ಅಥವಾ ನಕಲಿನೋ......? ಪರೀಕ್ಷಿಸಿ ನೋಡಿ."

"ದಯವಿಟ್ಟು ಅಣ್ಣ ತಂಗಿ ಹೀಗೆಲ್ಲಾ ಮಾತನಾಡಬೇಡಿ. ವನಜಂಗೆ, ಗೋಪಿಗೆ ತಿಳಿದರೆ ಏನೆಂದುಕೊಳ್ತಾರೆ....?"

"ತಿಳಿದರೆ ಏನೀಗ? ನಿಜಾನೇ ತಾನೇ....... ನಿನಗೆ ಅದೆಲ್ಲಾ ಆಸೆ ಇರಲಿಲ್ಲವಾ?"

"ಇಲ್ಲ ಖಂಡಿತಾ ಇಲ್ಲ. ನಮಗೆ ದೇವರು ಎಲ್ಲವನ್ನು ಕೊಟ್ಟಿದ್ದಾನೆ. ಮೊಮ್ಮಕ್ಕಳನ್ನು ಎತ್ತಿ ಆಡಿಸುವ ವಯಸ್ಸು ನಿಮ್ಮದು.... ಯಃಕಶ್ಚಿತ್ ಬೆಳ್ಳಿ ಪಾತ್ರೆ, ಚಿನ್ನದ ಒಡವೆ.... ಜರತಾರಿ ಪಂಚೆ ಅದೂ ಇದು ಅಂತ ಮಾತನಾಡಬೇಡಿ. ನಿಮ್ಮ ಘನತೆಗೆ ತಕ್ಕ ಹಾಗೆ ಮಾತನಾಡಿ."

"ನೋಡಿದ್ಯಾ ಜಾನಕಿ.... ಮೈಥಿಲಿ ಸಮಾಜಸೇವೆ ಅಂತ ಹೊರಗೆ ಹೋಗಿ ಎಲ್ಲರಿಗೂ ಭಾಷಣ ಬಿಗಿದು ಹೇಳುವುದು ಈ ತರಹದ ಮಾತುಗಳನ್ನೇ.... ಈಗ ನನಗೇ ಹೇಳ್ತಿದ್ದಾಳೆ..... " ಮೈಥಿಲಿ ಕೋಪದಿಂದ ಅಡಿಗೆ ಮನೆಗೆ ಹೊರಟು ಹೋದಾಗ, ಪರಶುರಾಮ್ ತಂಗಿಯ ಕಡೆ ನೋಡಿ ನಕ್ಕರು. ಜಾನಕಿ ನಗಲಿಲ್ಲ. ತಾನೇ ಎದ್ದು ಸೀದಾ ಅಡಿಗೆ ಮನೆಯನ್ನು ಹೊಕ್ಕರು. ಹಿಂದಿನಿಂದ ಮೈಥಿಲಿಯನ್ನು ಬಳಸಿ ಅವಳನ್ನು ತನ್ನ ಕಡೆಗೆ ತಿರುಗಿಸಿಕೊಂಡರು.

"ಏನಿದು.......? ಬಿಡಿ....." ಮೈಥಿಲಿ ಕೊಸರಿಕೊಂಡಾಗ, ಮತ್ತೆ, ಮತ್ತೆ ನಕ್ಕರು.

"ಏಯ್..... ಕೋಪಾ ಬಂತಾ? ನಾನು ಮನೇಲಿರೋದೇ ಅಪರೂಪ ಮಾತಿಗೇ ಸಿಗುಲ್ಲ ಅಂತ ಆಕ್ಷೇಪಣೆ ಮಾಡ್ತಿದ್ದೆ ಅಲ್ವಾ? ಮಾತಾಡಿದರೆ ಕೋಪ ಮಾಡ್ಕೋತಿಯಾ...... ಹೇಗೂ ಸೊಸೆ ಬಂದಳಲ್ಲ.....ಮನೆ ಜವಾಬ್ದಾರೀನ ಮಗ ಸೊಸೆಗೆ ವಹಿಸಿ ನಾವು ವಾನಪ್ರಸ್ಥಾಶ್ರಮಕ್ಕೆ ಹೊರಟು ಹೋಗೋಣ ಏನಂತೀಯಾ?" ನಗುತ್ತಾ ಪ್ರಶ್ನಿಸಿದರು.

"ಏನೂ ಬೇಡ..... ಹೊಸದಾಗಿ ಮದುವೆಯಾದವರು ಅವರುಗಳು ಹನಿಮೂನ್‌ಗೆ ಹೋಗಿಬರಲಿ... ಅಲ್ಲದೇ ನನಗೆ ಸಮಾಜದ ಕೆಲಸಗಳಿವೆ. ನಿಮಗೆ ಇನ್ನು ರಿಟೈರ್ ಆಗಿಲ್ಲ......"

"ಅದಕ್ಕೇ ಹೇಳಿದ್ದು......... ಈ ಕೆಲಸದ ಒತ್ತಡಗಳನ್ನೆಲ್ಲಾ ಮರೆತು ಹಾಯಾಗಿರೋಣ ಅಂತ......" ಮೈಥಿಲಿ ಏನು ಹೇಳಲಿದ್ದವಳು ಅಡಿಗೆ ಮನೆ ಬಾಗಿಲಿನಲ್ಲಿ ನಿಂತಿದ್ದ ಗೋಪಿಯನ್ನು ಕಂಡು, ಗಂಡನಿಂದ ದೂರ ಸರಿದಳು. ಗೋಪಿ ನಸುನಕ್ಕ.

ಇದ್ದಕ್ಕಿದ್ದಂತೆ ಅಪ್ಪ ಹೇಗೆ ಬದಲಾದರು? ಅಮ್ಮನೊಡನೆ ಸರಸದಿಂದ ಮಾತನಾಡುತ್ತಿದ್ದಾರೆ..... ಸದಾ ಪೋಲಿಸ್ ಭಾಷೆ ದರ್ಪದಲ್ಲೇ ಮಾತನಾಡಿ ಅಭ್ಯಾಸ ಅವರಿಗೆ. ಈ ಬದಲಾವಣೆಗೆ ಏನು ಕಾರಣ? ಹಾಗೇ ಹಿಂದಕ್ಕೆ ಸರಿದು, ಮಲಗಿದ್ದ ವನಜಳನ್ನು ಎಬ್ಬಿಸಿದ.

"ನೀನು ಬಂದ ಒಂದು ದಿನದಲ್ಲಿ ಎಷ್ಟು ಬದಲಾವಣೆ ಆಗಿದೆ ನಮ್ಮ ಮನೇಲಿ ಗೊತ್ತಾ?"

"ಏನದು?" ಅವಳು ಹೆದರಿ ಎದ್ದು ಕೂತಳು.

"ಅಪ್ಪ ಅಮ್ಮ ಎಷ್ಟು ಖುಷಿಯಿಂದ ಮಾತನಾಡ್ತಿದ್ದಾರೆ ಗೊತ್ತಾ? ನನಗೆ ನಂಬುಕ್ಕೆ ಆಗಲಿಲ್ಲ. ಡ್ಯೂಟಿ, ಸ್ಟ್ರಿಕ್ಟು, ಸಿಡುಕು, ಇದನ್ನೇ ನೋಡಿ ನೋಡಿ ಅಭ್ಯಾಸವಾಗಿ ಹೋಗಿತ್ತು....."

"ನೀನೂ ನಿಮ್ಮ ಅಪ್ಪನ ತರಹ ಆಡುಲ್ಲತಾನೇ......."

"ನೀನು ಇನ್ನೂ ಮಲಗಿಯೇ ಇದ್ದರೆ.... ಆಡಬೇಕಾಗುತ್ತದೆ. ಇದು ನಿನ್ನ ಅಪ್ಪನ ಮನೆಯಲ್ಲ. ಅತ್ತೆ ಮನೆ. ಬೆಳಿಗ್ಗೆ ಬೇಗ ಎದ್ದು ಅತ್ತೆಗೆ ಮನೆಕೆಲಸದಲ್ಲಿ ಸಹಾಯ ಮಾಡಬೇಕು ಅಂತ ನಿಮ್ಮ ತಾಯಿ ನಿನಗೆ ಹೇಳಿ ಕೊಟ್ಟಿಲ್ಲ..... ಏಳು..... ಸೂರ್ಯ ಹುಟ್ಟಿ ಎಷ್ಟೋ ಹೊತ್ತಾಗಿದೆ. ವನಜ ಎದ್ದು ಕೂತವಳು ಮತ್ತೆ ಮಲಗಿದಳು."

"ಗೋಪಿ ನಾನು ಕನಸು ಕಾಣುತ್ತಿದ್ದೆ. ಮುಂಚಿನಂತೆ ನಾನು ನಿನ್ನ ಹತ್ತಿರ ಜಗಳ ಆಡ್ತಿದ್ದೆ ಕನಸ್ನಲ್ಲಿ..... ಎಚ್ಚರವಾದ ಮೇಲೆ ಗೊತ್ತಾಯ್ತು. ನಮ್ಮ ಮದುವೆ ಆಗಿ ಒಂದು ದಿನ ಕಳೆದು ಹೋಗಿದೆ. ಇದು ಕನಸಲ್ಲ ತಾನೇ..... ನನಗೆ ನಂಬೋಕೇ ಆಗ್ತಿಲ್ಲ....."

"ಕನಸ್ನಲ್ಲೂ ಸದಾ ನನಗೂ ನಿನಗೂ ಜಗಳಾನೇ.....? ಹೀಗೆ ನಾನು ಬಂದು ನಿನ್ನ ಬಳಿ ಎಂದೂ ಕೂತಿರಲಿಲ್ಲ ಅಲ್ವಾ?......" ವನಜ ನಸುನಕ್ಕಳು.

"ನೆನ್ನೇವರೆಗೂ ಏನೋ ಆತಂಕ..... ಈಗ ನಿರಾಂತಕ. ಹೀಗೇ ಹಾಯಾಗಿ ಮಲಗಿರೋಣ ಅಂತನ್ನಿಸ್ತಿದೆ..... ನನಗೆ"

"ಆಸೆ ಅತಿಯಾಯ್ತು..... ಏಳು.... ನಾನು ದಿನಾ ನಿನ್ನನ್ನು ಎಬ್ಬಿಸಿದರೆ ಅಪ್ಪ ಅಮ್ಮ ಏನಂದುಕೊಳ್ತಾರೆ......?" ಗೋಪೀ..... ಹೊರಗಿನಿಂದ ತಾಯಿಯ ಧ್ವನಿ ಕೇಳಿದಾಗ, ಅವನು ಎದ್ದು ಹೊರಗೆ ಬಂದ.

ಇಬ್ಬರೂ ಬೇಗ ಸ್ನಾನ ಮುಗಿಸಿ ರೆಡಿಯಾಗಿ, ದೇವಸ್ಥಾನಕ್ಕೆ ಹೋಗಿ ಬರೋಣ. ನಿನ್ನ ಮದುವೆ ವನಜಳೊಡನೆ, ನೆರವೇರಿದರೆ, ದೇವರಿಗೆ ಅಭಿಷೇಕ ಮಾಡಿಸ್ತೀನಿ ಅಂತ ಮನಸ್ನಲ್ಲಿ ಅಂದುಕೊಂಡಿದ್ದೆ.

ವನಜಳಿಗೆ ಈ ಮಾತುಗಳು ಕೇಳಿಸಿದವು. ಗೋಪಿಯ ತಾಯಿ ಎಷ್ಟು ಒಳ್ಳೆಯವರು ಅಂತಂದುಕೊಂಡು ಎದ್ದಳು. ಬೇಗ ಬೇಗ ಸಿದ್ಧವಾಗಿ ಎಲ್ಲರೂ ದೇವಸ್ಥಾನಕ್ಕೆ ಹೊರಟರು. ತಂದೆ ಮಗ ಇಬ್ಬರೂ ಲಕ್ಷಣವಾಗಿ ಜರಿ ಪಂಚೆ

ಉಟ್ಟು, ಬಿಳಿ ಷರಟು ತೊಟ್ಟು ಶಲ್ಯ ಹೊದ್ದು ಸಿದ್ಧರಾದರು. ವನಜ ತನ್ನ ತಾಯಿ ತನಗೆಂದು ಕೊಟ್ಟ ಹೊಸ ನವಿಲಿನ ಬಣ್ಣದ ಸೀರೆ ಉಟ್ಟು ಅದೇ ಬಣ್ಣದ ರವಿಕೆ ತೊಟ್ಟಳು. ಜಾನಕಿ, ಮೈಥಿಲಿಯ ರೇಶಿಮೇ ಸೀರೆಗಳನ್ನುಟ್ಟು ಸಿದ್ಧರಾದರು. ಅವರುಗಳು ಇನ್ನೇನು ಹೊರಡುವುದರಲ್ಲಿದ್ದರು. ಎಲ್ಲಿಂದಲೋ ಓಡಿ ಬಂದವನಂತೆ, ವೇಣು ಪ್ರತ್ಯಕ್ಷನಾದ. ಏದುಸಿರು ಬಿಡುತ್ತಾ ನಿಂತಿದ್ದವನು ಸುಸ್ತಾದವನಂತೆ ಕುಸಿದು ಬದ್ದ. ಏನಾಯ್ತು? ಏನಾಯ್ತು? ಎನ್ನುತ್ತಾ ಎಲ್ಲರೂ ಹತ್ತಿರ ಬಂದು ಸುತ್ತುವರಿದರು.....

"ಯಾವುದೋ ಷೂಟಿಂಗ್ ಇರಬೇಕು.... ನಟನೆ ಮಾಡುತ್ತಾ ಇದಾನೆ ಈ ಕಮಂಗಿ" ಅಂತ ಅಂದುಕೊಂಡಳು ವನಜಾ.....

"ಅಮ್ಮಾ..... ಅಮ್ಮಾ...... "ಅಂತ ಅವನು ನರಳಿದಾಗ, ಪರಶುರಾಮ್ ಮೈಥಿಲಿಯ ಕಡೆ ನೋಡಿದರು..... ನಾನು ಹೋಗಿ ಡಾಕ್ಟರನ್ನು ಕರೆದುಕೊಂಡು ಬರ್ತೀನಿ. ಅವನಿಗೆ ಸ್ವಲ್ಪ ಬಿಸಿ ಬಿಸಿ ಕಾಫಿ ಕುಡಿಸು ಎಂದು ನುಡಿದು ಜೀಪನ್ನೇರಿ ಹೋಗಿ, ಹತ್ತಿರದ ಡಾಕ್ಟರನ್ನು ಕರೆದುಕೊಂಡು ಬಂದರು.

ಡಾಕ್ಟರು ಬಂದು ನೋಡಿ, ಒಂದು ಇಂಜೆಕ್ಷನ್ ಕೊಟ್ಟು, "ಹೊಟ್ಟೆಗೆ ಏನೂ ಇಲ್ಲದೆ..... ಸುಸ್ತಾಗಿದೆ ಅಷ್ಟೆ. ಸ್ವಲ್ಪ ಸ್ವಲ್ಪ ತಿನ್ನಲು ಕೊಡಿ.... ಎಲ್ಲ ಸರಿ ಹೋಗುತ್ತದೆ" ಎಂದರು. ಮೈಥಿಲಿ ಅಡಿಗೆ ಮನೆಯ ಕಡೆ ನಡೆದಳು.

"ಜಾನಕೀ, ನೀನು ಇವನನ್ನು ಸರಿಯಾಗಿ ಬೆಳೆಸಲಿಲ್ಲ. ನನಗೆ ಅನ್ಯಾಯ ಮಾಡಿಬಿಟ್ಟೆ....." ಪರಶುರಾಮ್ ಹೇಳಿದಾಗ ಜಾನಕಿ ಅತ್ತಳು.

"ನಾನು ಇವನಿಗೋಸ್ಕರ ದುಡ್ಡು ಕಳಿಸ್ತಿದ್ದೆನಲ್ಲ.... ಹೀಗಾ ನೀನು ಬೆಳೆಸೋದು? ನಿನ್ನ ಕೈಲಿ ಆಗದಿದ್ದರೆ, ನನಗೆ ತಿಳಿಸಿದ್ದರೆ ನಾನು ನಮ್ಮ ಮನೆಯಲ್ಲೇ ತಿಳಿಸುತ್ತಿದ್ದೆ... ಅವನೂ ಗೋಪಿಯ ತರಹ ಆಗುತ್ತಿದ್ದ."

"ನಿನ್ನ ಹಾಗಿ ಶಿಸ್ತಿನಿಂದ ನಾನು ಬೆಳೆಸಲಿಲ್ಲ ನಿಜ. ಅವನು ನಾನು ಹೇಳಿದಂತೆ ಕೇಳುತ್ತಿರಲಿಲ್ಲ. ಸವಿತಾ ಸರಿಯಾಗಿ ಬೆಳೆಯಲಿಲ್ಲವೆ.....?"

"ಸರಿ. ಆದದ್ದು ಆಯಿತು. ಇನ್ನು ಮೇಲೆ ವೇಣು ಈ ಮನೇಲೇ ಇರ್ತಾನೆ. ಅವನನ್ನು ಸರಿದಾರಿಗೆ ತರುವ ಜವಾಬ್ದಾರಿ ನನಗಿರಲಿ. ಆದರೆ ಮೈಥಿಲಿಗೆ ಯಾವ ವಿಷಯವೂ ತಿಳಿಯಬಾರದು. ಅವಳು ನೊಂದುಕೊಳ್ತಾಳೆ. ನನಗೆ ಅದು ಸಹಿಸುವುದಿಲ್ಲ. ನೀನು ಇವನ ಜತೆಯಲ್ಲಿ ಮನೆಯಲ್ಲಿರು. ನಾವುಗಳು ದೇವಸ್ಥಾನಕ್ಕೆ ಹೋಗಿ ಬರ್ತೀವಿ" ಅಂತ ಹೊರಟಾಗ ಜಾನಕಿ ಒಪ್ಪಿಕೊಂಡಳು.

ದೇವರ ಮುಂದೆ ನಿಂತಿದ್ದಾಗ ಮೈಥಿಲಿ ಮನಸಾರೆ ಪ್ರಾರ್ಥಿಸಿದಳು. ವೇಣು ಬೇಗ ಸುಧಾರಿಸಿ, ಅವನೂ ಗೋಪಿಯಂತೆ ಒಬ್ಬ ಜವಾಬ್ದಾರಿಯುತ ವ್ಯಕ್ತಿಯಾಗಿ, ಸಮಾಜಸೇವೆ ಮಾಡುವಂತಾಗಲಿ ಅಂತ.... ಗೋಪಿ ತಾಯಿಯನ್ನೇ ಗಮನಿಸಿದ. ಅವಳಿಗೆ ಎಲ್ಲಾ ಗೊತ್ತಿದ್ದೂ ಸುಮ್ಮನಿದ್ದಾಳೆ. ಆದರೆ ಮನದಲ್ಲೇ ಎಷ್ಟು ಕೊರಗಿರಬಹುದು ಅಂತನ್ನಿಸಿದಾಗ, ತಾಯಿಯ ಮೇಲಿನ ಪ್ರೀತಿ ಹೆಚ್ಚಿತು.

"ನಾನು ಜಾನಕಿಯ ಮಾತಿಗೆ ಒಪ್ಪಿ ಮೈಥಿಲಿಗೆ ಅನ್ಯಾಯ ಮಾಡಬಾರದಾಗಿತ್ತು..... ವನಜ ನಮ್ಮ ಮನೆಗೆ ಸೊಸೆಯಾಗಿ ಬಂದ ಸಮಯ ಒಳ್ಳೆಯದನ್ನೇ ಮಾಡಿದೆ. ವೇಣು ನಮ್ಮ ಮನೆಗೆ ಮತ್ತೆ ಬಂದ. ಅವನಿಗೇನಾದರೂ ಹೆಚ್ಚು ಕಡಿಮೆ ಆಗಿದ್ದರೆ ತಾನು ಮೈಥಿಲಿಗೆ ಏನು ಜವಾಬು ಕೊಡಲಾಗುತ್ತಿತ್ತು.....? ಅವಳಿಗೆ ಎಲ್ಲಾ ತಿಳಿಸಿ, ಅವಳ ಕ್ಷಮೆಯನ್ನು ಕೇಳಬೇಕು ಎಂದುಕೊಂಡರು."

ಅವರುಗಳು ವಾಪಸ್ಸು ಮನೆಗೆ ಬರುವ ಹೊತ್ತಿಗೆ, ಸದಾನಂದ ಬಂದು ಕೂತಿದ್ದ. ಅವನನ್ನು ಕಂಡು, ಪರಶುರಾಮನ ಹುಬ್ಬುಗಳು ಗಂಟಿಕ್ಕಲಿಲ್ಲ. ದರ್ಪವನ್ನು ಬಿಟ್ಟು, ಸ್ನೇಹದಿಂದ ಕೈ ಕುಲುಕಿ ಮಾತನಾಡಿಸಿದಾಗ ಎಲ್ಲರಿಗೂ ಆಶ್ಚರ್ಯವೋ ಆಶ್ಚರ್ಯ.

"ಮೈಥಿಲೀ ಸದಾನಂದರಾಯರಿಗೆ ಪ್ರಸಾದವನ್ನು ಕೊಡು" ಅಂತ ನುಡಿದಾಗ ಎಲ್ಲರಿಗೂ ದಿಗ್ಭ್ರಮೆ. ಏನಿದು ಈ ಬದಲಾವಣೆ. ಅದೂ ಒಂದೇ ದಿನದಲ್ಲಿ....?

ಭಾನುವಾರ ರಿಸೆಪ್ಷನ್‌ಗೆ ಛತ್ರಗೊತ್ತು ಮಾಡಿದ್ದೇನೆ. ಏನೋ ಎಲ್ಲಾ ಅವಾಂತರದಲ್ಲಿ ನಡೆದು ಹೋಯ್ತು. ವಾಸುಕಿಯ ಮಾತಿಗೆ ಒಪ್ಪಿ, ನಾವು ಏನನ್ನು ತಂದಿರಲಿಲ್ಲ. ಈಗ ನಿಮಗೆ ಏನು ಬೇಕು ಅಂತ ಹೇಳಿದರೆ, ನನ್ನ ಕೈಲಾದುದನ್ನೆಲ್ಲಾ ಕೊಡ್ತೀನಿ.... ಬೇಕಾಬಿಟ್ಟಿ ಮದುವೆ ಮಾಡಿಕೊಟ್ಟರು ಅಂತ ಮಾತ್ರ ಭಾವಿಸಬಾರದು.... ನೀವುಗಳು.

"ಮೈಥಿಲಿ ಬಾಯಿಲ್ಲಿ.... ಬೀಗರು ವರೋಪಚಾರದಲ್ಲಿ ಏನೇನು ಬೇಕು ಅಂತ ಕೇಳ್ತಿದ್ದಾರೆ...... ಏನೇನು ಕೇಳೋಣ ಹೇಳು....." ಮೈಥಿಲಿ ದಂಗಾದಳು. ಗಂಡನಿಗೆ ಏನಾಗಿದೆ? ಅವರ ಎದುರಿಗೆ ಹೀಗೇ ಕೇಳುವುದೇ? ಬೇಡ ಎಂದು ಹೇಳಲು ಧೈರ್ಯವಿಲ್ಲ. ಬೇಕು ಎಂದು ಕೇಳಲು ಮನಸ್ಸಿಲ್ಲ.

ಬೆಳ್ಳಿಯ ಕೊಡವನ್ನು ಕೇಳೋಣ ಎಂದರೆ, ನಮ್ಮ ಮನೆಯಲ್ಲಿ

ಬಾವಿಯಿಲ್ಲ. ಅದು ಬೇಡ, ವಜ್ರದ ಓಲೆ ವನಜಂಗೆ ಒಪ್ಪಲ್ಲ.... ಆದ್ದರಿಂದ ಅದೂ ಬೇಡ, ಸೀರೆ ಒಡವೆ ಯಾವುದೂ ಬೇಡ..... ಯಾಕೆಂದರೆ ನಮ್ಮ ಮನೆಯಲ್ಲಿರುವಷ್ಟು ನಮಗೆ ಸಾಕು. ನಾವು ವರದಕ್ಷಿಣೆಯನ್ನು ಕೇಳುವಂತಿಲ್ಲ. ಅದು ಕಾನೂನಿಗೆ ವಿರುದ್ಧ. ನಾವು ಕಾನೂನು ರಕ್ಷಕರು. ಆದ್ದರಿಂದ ನಮಗೆ ಏನೂ ಬೇಡ...... ನಿಮ್ಮ ಮಗಳನ್ನು ನಮಗೆ ಒಪ್ಪಿಸಿದೀರಿ. ನಾವು ಸೊಸೆಯನ್ನಾಗಿ ಸ್ವೀಕರಿಸಿದೀವಿ. ಅಷ್ಟು ಸಾಕು.... ಸಂಧಾನ ಮಾಡಿದವರಂತೆ ಮಾತನಾಡಿದರು.

"ಅಮ್ಮಾ..... ತಪ್ಪ ಯಾಕೆ ಹೀಗೆ ಮಾತಾಡ್ತಿದ್ದಾರೆ? ನನಗೇಕೋ ಹೆದರಿಕೆ ಆಗ್ತಿದೆ" ಅಂದ ಗೋಪಿ. ತಾಯಿಯ ಬಳಿಗೆ ಸರಿದು ನಿಂತು.

"ಅತಿ ಖುಷಿಯಾಗಿರಬಹುದು. ವೇಣು ಮನೆಗೆ ಬಂದಿರುವುದು....."

ಗೋಪಿ ತಾಯಿಯ ಕಡೆ ನೋಡಿದ. ಅವಳ ಮುಖದ ನೆಮ್ಮದಿ ಅವನನ್ನು ಸಂತಸಗೊಳಿಸಿತು.

"ಅಪ್ಪಾ ಬದಲಾಗುವುದೇ ಇಲ್ಲವೇನೋ ಅಂತ ಅಂದುಕೊಂಡಿದ್ದೆ. ಒಂದು ದಿನದಲ್ಲಿ ಎಷ್ಟು ಬದಲಾಗಿದ್ದಾರೆ. ಆದರೂ ಹೀಗೆಲ್ಲಾ ಮಾತನಾಡುವ ಅವಶ್ಯಕತೆ ಏನಿತ್ತು? ಸ್ವಲ್ಪ ಜಾಸ್ತಿ ಅಂತ ಅನ್ನಿಸುತ್ತಿಲ್ವಾ?"

"ಆಡಲಿ ಬಿಡು..... ನೀನು ಹೋಗಿ ವಾಸುಕಿಯನ್ನು ಸವಿತಳನ್ನು ಕರೆದುಕೊಂಡು ಬಾ..... ಸವಿತಂಗೂ ತಾಯಿಯನ್ನು ನೋಡಬೇಕು ಅಂತ ಅನ್ನಿಸಿರುತ್ತೆ."

"ಅಮ್ಮಾ..... ನೀನೇಕೆ ಇಷ್ಟು ಒಳ್ಳೆಯವಳು? ಅಪ್ಪನ ಜತೆ ಹೇಗೆ ಸಂಸಾರ ಮಾಡಿದೆ ಇಷ್ಟು ವರ್ಷ? ನಂಗೆ ನಿಜಕ್ಕೂ ಆಶ್ಚರ್ಯವಾಗುತ್ತೆ."

"ನಾನೂ ಸ್ವಾರ್ಥಿನೇ.... ಒಳ್ಳೆಯತನ ಎಲ್ಲಿದೆ? ನಿಮ್ಮ ಅಪ್ಪನನ್ನು ಎಷ್ಟೋ ಸಲ ಬೈದಿದ್ದೇನೆ. ನಿಮ್ಮಿಬ್ಬರ ಮದುವೆಗಾಗಿ, ಅವರಿಗೆ ತಿಳಿಯದಂತೆ ನಾಟಕ ಆಡಿದೀನಿ. ಇದೆಲ್ಲಾ ತಪ್ಪೇ ತಾನೇ..... ಒಳ್ಳೇತನ ಎಲ್ಲಿಂದ ಬಂತು?"

"ಹಾಗಾದರೆ ನನ್ನಿಂದ ನಿನಗೆ ಬೇಜಾರಾಯ್ತೇನಮ್ಮಾ.... ಹೇಳಮ್ಮಾ"

"ಬೇಜಾರೇನಿಲ್ಲ ಬಿಡು.... ವನಜ ನನಗೂ ಇಷ್ಟವಾದವಳೇ......" ನಿನಗೂ ಸಂತೋಷವಾಗಿದೆ. ಎಲ್ಲಕ್ಕಿಂತ ಮುಖ್ಯ ನಿಮ್ಮ ಅಪ್ಪ ಬದಲಾದದ್ದು.... ಒಟ್ಟಿನಲ್ಲಿ ಇದಕ್ಕೆಲ್ಲಾ ವನಜಳೇ ಕಾರಣ ಅಂತ ನನಗನ್ನಿಸುತ್ತೆ.

"ಆ ಕ್ರೆಡಿಟ್‌ನಲ್ಲ ಅವಳಿಗೆ ಕೊಡಬೇಡ. ನನಗಿಷ್ಟವಾಗುಲ್ಲ." ನಕ್ಕ.

"ಅತ್ತೇನ ಕರಿ. ಮಗನ ಮುಂದೇನೇ ಕೂತುಕೊಂಡಿದ್ರೆ ಆಗುತ್ತಾ. ಸ್ವಲ್ಪ ಅಡಿಗೆಗೆ ಸಹಾಯ ಮಾಡಲಿ....."

"ವನಜನ್ನ ಕಳಿಸ್ತೀನಮ್ಮಾ..... ಅವಳೂ ಅಡಿಗೆ ಕಲಿಯಬೇಡವೇ?"

"ನಮ್ಮ ಮನೆ ಕೆಲಸದ ವಿಧಾನ ಅವಳಿಗೇನು ಗೊತ್ತು? ನಿಧಾನವಾಗಿ ಕಲಿತ್ಕೋತಾಳೆ ಬಿಡು."

ಅಡಿಗೆ ಮನೆಗೆ ಬಂದ ಜಾನಕಿ, ಯಾರಿಗೂ ಕಾಣದಂತೆ ಅತ್ತಿಗೆಯ ಕಾಲುಗಳನ್ನು ಹಿಡಿದಳು.

"ನನ್ನನ್ನು ಕ್ಷಮಿಸಿ ಬಿಡಿ ಅತ್ತಿಗೆ ನನ್ನಿಂದ ಅಪರಾಧವಾಗಿದೆ."

"ಏಳು ಜಾನಕಿ, ನನಗೇನು ತಿಳೀತಿಲ್ಲ. ನೀನು ಏನು ತಪ್ಪು ಮಾಡಿದೀಯ?" ಹಿಂದಿನಿಂದ ಗೋಪಿ ಬಂದ.....

"ಅತ್ತೆ ಇದೇನಿದು? ಅಮ್ಮನ ಕಾಲನ್ನೇಕೆ ಹಿಡಿದ್ದೀರಿ..... ವೇಣು ನಿಮ್ಮನ್ನು ಕರೀತಿದ್ದಾನೆ ಹೋಗಿ." ವನಜಾ..... ಅಮ್ಮನಿಗೆ ಸಹಾಯ ಮಾಡು ಗೋಪಿ ಹೀಗೇಕೆ ಹೇಳುತ್ತಿದ್ದಾನೆಂದು ತಿಳಿಯಲಿಲ್ಲ. ನಾನು ಹೋಗಿ ವಾಸುಕಿಯನ್ನು ಸವಿತನ್ನು ಕರೆದುಕೊಂಡು ಬರ್ತೀನಿ. ಎಂದು ಹೊರಡುವ ಮೊದಲು, ತಂದೆಯೊಡನೆ ಮಾತಾಡಿದ.

"ಅಪ್ಪಾ, ವೇಣು ಅತ್ತೆ ಯಾವಾಗ ಊರಿಗೆ ಹೋಗ್ತಾರೆ?"

"ಯಾಕೆ? ವೇಣು ಮೊದಲು ಹುಶಾರಾಗಲಿ...... ಏನು ವಿಷಯ?"

"ಅತ್ತೆ ಅಮ್ಮನ ತಲೆ ಕೆಡಿಸ್ತಾರೆ ಖಂಡಿತಾ..... ಅಮ್ಮ ಹಾಯಾಗಿರಬೇಡ್ವಾ?"

"ಅದಕ್ಕೆ ನಾನೇನು ಮಾಡಲಿ?"

"ನೀವು ರಜ ಹಾಕಿ, ಅಮ್ಮನ್ನ ನಾಲ್ಕು ದಿನ ಹೊರಗೆಲ್ಲಾದರೂ ಕರೆದುಕೊಂಡು ಹೋಗಿ ಬನ್ನಿ. ಅವಳಂತೂ ಎಲ್ಲಿಯೂ ಹೋಗಿಲ್ಲವೇನೋ....."

"ನಾನು ಅದೇ ಯೋಚನೆ ಮಾಡ್ತಿದ್ದೆ. ಆದರೆ ಅವಳೇನು ಅಂದಳು ಗೊತ್ತೇ... ನೀವುಗಳು ಹನಿಮೂನ್‌ಗೆ ಹೋಗಲಿ ಅಂತಂದಳು."

"ನಾವು ನಿಧಾನವಾಗಿ ಹೋಗ್ತಿನಿ. ಹೇಗೂ ಮನೇಲಿ ಅತ್ತೆ ಇರ್ತಾರಲ್ಲ. ನೀವುಗಳು ನಿಶ್ಚಿಂತೆಯಾಗಿರಬಹುದು."

"ಹೌದು ಗೋಪಿ, ನನಗೂ ಒಂದೇ ತರಹ ಇದ್ದೂ ಇದ್ದೂ ಬೇಸರವಾಗಿದೆ. ಬದಲಾವಣೆ ಬೇಕು. ಸದಾನಂದ ರಿಸೆಪ್ಶನ್ ಇಟ್ಟುಕೊಂಡಿದ್ದಾರಲ್ಲ." ಅವತ್ತು ರಾತ್ರಿಯೇ ಉತ್ತರ ಭಾರತ ಪ್ರವಾಸಕ್ಕೆ ಹೊರಟು

ಬಿಡ್ತೀವಿ. ಪ್ಲೇನ್‌ಗೆ ಬುಕ್ ಮಾಡಿಸಿ ಬಿಡು..... ಗೋಪಿಗೆ ನೆಮ್ಮದಿಯೆನಿಸಿತು.

ಗೋಪಿ ವಾಸುಕಿಯೊಡನೆ ಹೇಳಿದ. "ನಮಗೆ ಬೇಕಿಲ್ಲದಿದ್ದರೂ, ವನಜಳ ತಂದೆ ರಿಸೆಪ್ಶನ್ ಪಾರ್ಟಿ ಇಟ್ಟುಕೊಂಡಿದ್ದಾರೆ. ನಿಮಗೂ ಏನಾದರೂ ಆ ಆಸೆ ಇದ್ದರೆ ತಿಳಿಸಿ.... ನಾವೂ ಏರ್ಪಾಡು ಮಾಡ್ತೀವಿ."

"ಏನಮ್ಮಾ ಸವಿತಾ.... ಏನು ಹೇಳ್ತಿಯಾ? " ಅವಳನ್ನು ಕೇಳಿದ.

"ವೇಣುಗೆ ಹುಷಾರಿಲ್ಲ. ಅಂತಂದೆ. ಮೊದಲು ಅವನು ಹುಶಾರಾಗಲಿ ಅದು ಮುಖ್ಯ. ಅನಾಥಳಾಗಿದ್ದವಳಿಗೆ ನೀವೆಲ್ಲಾ ಸೇರಿ ಇಷ್ಟು ಮಾಡಿದೀರಲ್ಲ. ನನಗೆ ಅಷ್ಟು ಸಾಕು." ಪ್ರೌಢೆಯಂತೆ ನುಡಿದಾಗ ಗೋಪಿ ಬೆರಗಾದ.

"ನೋಡಿ ವಾಸುಕಿ ಹೇಗೆ ಮಾತನಾಡ್ತಾಳೆ? ಎಷ್ಟು ಬೇಗ ಬದಲಾಗಿ ಹೋಗಿದ್ದಾಳೆ."

"ಅವಳು ಮಾತನಾಡಿದ ರೀತಿಸರಿಯಿಲ್ಲದಿರಬಹುದು. ಆದರೆ, ಸರಳ ವಾಗಿ ಮದುವೆಯಾಗಲು ಬಯಸಿದವನು ನಾನು. ನನಗೂ ಈ ಆರತಕ್ಷತೆಯ ಆಡಂಬರ, ಆಚರಣೆ ಬೇಕಿಲ್ಲ. ಎನಿವೇ.. ನೀವು ಹೇಗಿದೀರಿ? ವನಜಾ ಹೇಗಿದ್ದಾರೆ?.. ನನ್ನ ಮೇಲೆ ಯಾವ ಅಪವಾದವೂ ಇಲ್ಲತಾನೇ" ಈಗ?

"ನಿಮ್ಮ ಪ್ಲಾನ್ ಎಂಥದು ಅಂತ ಕಡೇವರೆಗೂ ನನಗೂ ತಿಳಿದಿರಲಿಲ್ಲ. ನಿಮಗಂತೂ ಸಾಕಷ್ಟು ಬೇಜಾರಾಗಿರಬಹುದಲ್ವಾ?"

"ಮೊದಲು ಬೇಜಾರಾದದ್ದೇನೋ ನಿಜ. ಆದರೆ ಈಗೇನಿಲ್ಲ ಬಿಡಿ." ಎನ್ನುತ್ತಾ ಸವಿತಳ ಕಡೆ ನೋಡಿದ. "ಇದನ್ನೇ ನೋಡಿ ಯೋಗ ಅಂತ ಅನ್ನೋದು. ನಾನು ನೋಡಿದ್ದು ವನಜನ್ನ..... ಮದುವೆಯಾದದ್ದು ಸವಿತನ್ನ ಹೇಗಿದೆ ಅಲ್ವಾ? ಋಣಾನುಬಂಧ?"

"ಬರ್ತೀರಿ ತಾನೇ ಮನೆಗೆ. ನನಗೆ ಸ್ವಲ್ಪ ಬೇರೆ ಕೆಲಸವಿದೆ ಎಂದು ಹೇಳಿ ಅಲ್ಲಿಂದ ನಡೆದ. ಡೆಲ್ಲಿಯ ಫ್ಲೈಟ್‌ಗೆ ಎರಡು ಟಿಕೆಟ್‌ಗಳನ್ನು ಬುಕ್ ಮಾಡಿಸಿಕೊಂಡು ಸೀದಾ ಮನೆಗೆ ಬಂದ."

ಸದಾನಂದ ತನ್ನ ಅನುಕೂಲಕ್ಕೆ ತಕ್ಕಂತೆ ರೆಸೆಪ್ಶನ್‌ಗೆ ಸಿದ್ಧತೆಗಳನ್ನು ಮಾಡಿದ್ದ. ನೆಂಟರು, ಸ್ನೇಹಿತರು ಎಲ್ಲಾ ಬಂದಿದ್ದರು. ಎಲ್ಲರಿಗೂ ಮದುವೆಯ ಸಿಹಿಊಟ, ನೆನಪಿನ ಉಡುಗೊರೆ, ಎಲ್ಲರೂ ಸದಾನಂದನನ್ನು ಹೊಗಳುವವರೇ. ಅವನು ಉಬ್ಬಿಹೋದ. ಪೋಲಿಸರ ವೇಷದವರನ್ನು ಕಂಡರೇ ಕರಿಕಿರಿ ಯಾಗುತ್ತಿದ್ದರೂ ಈಗ ಹಾಗೆನ್ನಿಸುತ್ತಿಲ್ಲ. ತಂದೆ ಮಗ ಎಷ್ಟು ಅನ್ಯೋನ್ಯವಾಗಿದ್ದಾರೆ. ಪೋಲಿಸ್ ವೇಷದ ಮೃದು ಹೃದಯಿಗಳು ತಾನು ತಿಳಿದುಕೊಂಡಿದ್ದೇ

ಬೇರೆ. ತಾನು ಅವಿವೇಕಿ ಅಂತ ತನ್ನನ್ನು ತಾನೇ ಹಳಿದುಕೊಂಡ. ಅದರಲ್ಲಿ ಅಡಗಿದ್ದುದು ಸ್ವಾರ್ಥವೇ......

ಸದಾನಂದ ಕೊಟ್ಟ ಉಡುಗೊರೆಯನ್ನು ಸಂತಸದಿಂದ ಸ್ವೀಕರಿಸಿದ ಪರಶುರಾಮ್ ನಮಗೆ ಅಂತ ನೀವು ಉತ್ಸಾಹದಿಂದ ಉಡುಗೊರೆಯನ್ನು ಕೊಡುತ್ತಿರುವಾಗ, ನಾವು ಬೇಡ ಅನ್ನಬಾರದು. ಅದು ಸರಿಯಲ್ಲ. ಆದ್ದರಿಂದ ತೆಗೆದುಕೊಳ್ಳುತ್ತೇನೆ ಎಂದು ನುಡಿದರು. ಮೈಥಿಲಿಗೆ ಒಳ್ಳೆಯ ರೇಶಿಮೆ ಸೀರೆ, ಜಾನಕಿಗೆ, ಸವಿತಳಿಗೆ ಸೀರೆಗಳು, ವಾಸುಕಿಗೆ ವೇಣುಗೆ ಷರಟಿನ ಬಟ್ಟೆಗಳು. ಗೋಪಿಗೆ ಸೂಟಿನ ಬಟ್ಟೆ ಇತ್ಯಾದಿ. ಎಲ್ಲವನ್ನು ಸ್ವೀಕರಿಸಿ ಸಂತಸದಿಂದ ಥ್ಯಾಂಕ್ಸ್ ಹೇಳಿದರು ಎಲ್ಲರೂ.

ಗೋಪಿ ಮಾತ್ರ ಸಂಕೋಚಗೊಂಡ. "ಇದರ ಅಗತ್ಯವಿರಲಿಲ್ಲ" ಎಂದ.

"ನೀವೇನೋ ಹಾಗೆನ್ನುತ್ತೀರಿ. ಕೊಡುವುದು ನಮ್ಮ ಕರ್ತವ್ಯ. ಹಾಗೂ ನಮ್ಮ ಧರ್ಮ. ನೀವೇ ನಮ್ಮ ಅಳಿಯ ನಾಗುತ್ತೀರಿ ಅಂತ ಮೊದಲೇ ತಿಳಿದಿದ್ದರೇ ಎಲ್ಲಾ ಕ್ರಮಬದ್ಧವಾಗಿ ಮಾಡುತ್ತಿದ್ದೆವು..." ಎಂದು ನುಡಿದ.

ಗೋಪಿಯಂತಹ ಒಬ್ಬ ಸುಗುಣವಂತ ಮಗ ತಮಗೂ ಇದ್ದಿದ್ದರೇ.... ಅಂತನ್ನಿಸದೇ ಇರಲಿಲ್ಲ. ಅಳಿಯ ಎಷ್ಟೇ ಒಳ್ಳೆಯವನಾದರೂ ಮಗನಾಗಲು ಸಾಧ್ಯವೇ? ಅಳಿಯನನ್ನು ಏಕವಚನದಲ್ಲಿ ಕರೆಯಲು ಹಿಂಜರಿದರು.

"ನಾವು ಇವತ್ತೇ ಡೆಲ್ಲಿಗೆ ಹೊರಟಿದೀವಿ. ಹದಿನೈದು ದಿನ ಉತ್ತರಭಾರತ ಪ್ರವಾಸ ಮಾಡಿ ಬರ್ತೀವಿ. ಸ್ವಲ್ಪ ಮನೆಕಡೆ ಬಂದು ಆಗಾಗ್ಗೆ ವಿಚಾರಿಸುತ್ತೀರಿ ಎಂದು ಸದಾನಂದನಿಗೂ, ವಾಸುಕಿಗೂ ಹೇಳಿ ಫಲ ತಾಂಬೂಲಗಳೊಂದಿಗೆ ಛತ್ರದಿಂದ ಹೊರಟರು. ಎಲ್ಲರೂ ಅವರಿಗೆ ಶುಭವನ್ನು ಹಾರೈಸಿದರು."

ಮನೆಯಿಂದ ಏರ್‌ಪೋರ್ಟ್‌ಗೆ ಹೊರಡುವ ಮೊದಲು, ಮಗನನ್ನು ಹತ್ತಿರ ಕರೆದು ಪಿಸುದನಿಯಲ್ಲಿ ಹೇಳಿದರು.

ವನಜನ್ನ ಹುಶಾರಾಗಿ ನೋಡ್ಕೋ.... ಈ ನಿನ್ನ ಗಡ್ಡದಾರಿ ಕಸಿನ್ ಎದ್ದು ಬಂದು ಕಿತಾಪತಿ ಮಾಡಿಯಾನು ಹುತ್ತೆ.....!

"ಯಾರು ವೇಣುನ? ನಾನು ಮೊದಲು ಅವನ ಗಡ್ಡ ಮೀಸೇನ ಬೋಳಿಸ್ತೀನಿ ನೋಡ್ತಿರಿ..... ಇನ್ನು ಕೆಟ್ಟದಾಗಿ ಬೆಳೆದಿದೆ.... ಅಸಹ್ಯ."

ಗಡ್ಡ ಮೀಸೆ ಬೋಳಿಸಿದರೂ ಕಿತಾಪತಿ ಮಾಡದೇ ಇರ್ತಾನಾ? ಆದರೆ ಕೆಲಸಕ್ಕೆ ಬಾರದ ಫೋಟೋ ತೆಗೆದು, ಈಗ ಯಾರನ್ನು ಫೂಲ್ ಮಾಡುವಂತಿಲ್ಲ. ಅಷ್ಟೇ... ಬ್ಲಾಕ್‌ಮೇಲ್ ಮಾಡೋ ದುರ್ಬುದ್ಧಿ ಬೇರೆ.....

ಓರೆಗಣ್ಣಿನಿಂದ ಅವನನ್ನು ನೋಡಿದರು.

"ಫೋಟೋ? ಯಾವುದು? ನಿಮಗ್ಯಾರು ಹೇಳಿದರು?"

"ನನಗೆ ಏನು ಗೊತ್ತಿಲ್ಲ ಅಂತ ಅಂದ್ಕೋಬೇಡ. ನನ್ನಿಂದ ಮುಚ್ಚಿಡಲು ಸಾಧ್ಯನಾ? ನಾನು ಪೋಲಿಸ್ ಪರಶುರಾಮ್..... ನೀನೇ ಜಾಣ ಅಂತ ಅಂದ್ಕೋಬೇಡ. ನಾನು ನಿನಗಿಂತ ಜಾಣ" ಎಂದು ಮಗನ ಬೆನ್ನಮೇಲೆ ಗುದ್ದಿದಾಗ ಗೋಪಿ ಕಕ್ಕಾಬಿಕ್ಕಿ.

ತಾನೀಗ ಏನು ಹೇಳಿದರೂ ಸಿಕ್ಕಿ ಬೀಳುವೆನೆಂದು ಸುಮ್ಮನಿದ್ದ.

"ಏನಮ್ಮಾ... ಆ ಲಫಂಗ, ಅವನೇ ಗಡ್ಡದಾರಿ ಕಸಿನ್ ಮತ್ತೆ ಕಿತಾಪತಿ ಮಾಡಿದರೆ ಸುಮ್ಮನಿರಬೇಡ. ನಿನ್ನ ಗಂಡನಿಗೆ ಹೇಳಿ ಲಾಕಪ್‌ಗೆ ಹಾಕಿಸು." ಎಂದು ವನಜಳಿಗೆ ಹೇಳಿನಕ್ಕರು.

ಗೋಪಿ ತಾಯಿಯನ್ನು ಕೇಳಿದ. ಇದೇನಮ್ಮಾ ಅಪ್ಪ ಏನೇನೋ ಮಾತಾಡ್ತೀದ್ದಾರೆ.... ಅವರಿಗೆ ತಿಳೀತಾ?

"ಅವರಿಗೆ ಏನೂ ಗೊತ್ತಿಲ್ಲ. ನಿನ್ನ ರೂಮಿನ ಬಳಿ ಬಿದ್ದಿದ್ದ ಕೃತಕ ಗಡ್ಡ ಮೀಸೆಯನ್ನು ನೋಡಿ ನೀನೇ ಮಾಡಿರಬಹುದೆಂದು ಭಾವಿಸಿದ್ದಾರೆ. ನೀನು ಯಾವ ಮಾತನ್ನು ಆಡಬೇಡ ಸುಮ್ಮನಿದ್ದು ಬಿಡು."

"ಸಾಕು ಬಾ ಮೈಥಿಲಿ.... ಈಗ ಅವನು ಬರೀ ನಿನ್ನ ಮಗನಲ್ಲ. ನಿನ್ನ ಸೊಸೆಯ ಗಂಡ. ನಿನ್ನ ಮಾತನ್ನು ಕೇಳುತ್ತಾನೆಯೇ ಈಗ?"

ಗೋಪಿ, ವನಜಾ ಇಬ್ಬರೂ ಪೆಚ್ಚಾದರು. ಅಪ್ಪನಿಗೆ ಅಸಮಾಧಾನವಾಗಿದೆ. ಅದನ್ನು ಈ ರೀತಿ ವ್ಯಕ್ತ ಪಡಿಸುತ್ತಿದ್ದಾರೆ.... ಎಂದುಕೊಂಡು,

"ಅಪ್ಪಾ..... ನನ್ನಿಂದೇನಾದ್ರೂ ತಪ್ಪಾಗಿದ್ರೆ ಕ್ಷಮಿಸಿ ಬಿಡಿ..... ಆದರೆ...."

"ನನ್ನ ಮನಸ್ಸಿಗೆ ಬೇಸರವಾದುದ್ದು ನಿಜ.... ಆದರೆ ನಿನ್ನನ್ನಾಗಲೀ ಮೈಥಿಲಿಯನ್ನಾಗಲೀ ನಾನು ಅರ್ಥಮಾಡಿಕೊಂಡದ್ದು ಈಗಲೇ.... ನೀನಾಗಿಯೇ ನೀನು ವನಜಳನ್ನು ಮದುವೆಯಾಗ್ತೀನಿ ಅಂತ ಹೇಳಿದ್ದರೆ ನಾನು ಖಂಡಿತಾ ಒಪ್ಪುತ್ತಿರಲಿಲ್ಲ. ನೀನು ವಾಸುಕಿ ಸೇರಿ ಚೆನ್ನಾಗಿ ನಾಟಕವನ್ನಾಡಿ. ನಿಮ್ಮ ಕೆಲಸವನ್ನು ಮಾಡಿಸಿಕೊಂಡಿರಿ. ನೀವು ಗೆದ್ದಿರಿ. ನಾನು ಸೋತೆ. ಆದರೆ ಆ ಚಿಂತೆನನಗಿಲ್ಲ. ನನಗೀಗ ವೇಣುದೇ ಚಿಂತೆ. ಅವನನ್ನು ಸರಿದಾರಿಗೆ ತರಬೇಕು. ಈ ವಿಷಯದಲ್ಲಿ ನೀನು ನನಗೆ ಸಹಾಯವನ್ನು ಮಾಡಬೇಕು. ವನಜಳಿಗೆ ಅವನ ಮೇಲಿರುವ ಭಾವನೆ ಹೋಗುವಂತೆ ಮಾಡಬೇಕು.... ಆಗಲೇ ನನಗೆ ಸಮಾಧಾನ. ಎಷ್ಟೆಗಲೀ ಅವನೂ ನಮ್ಮವನೇ....."

"ಆಗಲೀಪ್ಪಾ..... ನೀವು ಹೋಗಿ ಬನ್ನಿ. ನಿಶ್ಚಿಂತೆಯಾಗಿರಿ...." ಎಂದು ಕೈ ಬೀಸಿದ. ಜೀಪು ಚಲಿಸಿತು.....

"ಎಲ್ಲರೂ ಗೋಪಿಯನ್ನು ಕೇಳುವವರೇ...." ಅದೇನು ನಿನ್ನ ಮದುವೆ ಆಗ್ತಿದ್ದಾಹಾಗೇ ಟೂರ್ ಅಂತ ಹೊರಟು ಬಿಟ್ಟಲ್ಲ. ಅವರಿಗೆ ಅಸಮಾಧಾನಾನಾ?

"ಇರಬಹುದು.... ಅವರು ತಮ್ಮ ಸ್ವಾಭಿಮಾನವನ್ನು ಬದಿಗಿಟ್ಟು ಮದುವೆಗೆ ಒಪ್ಪಿದರು. ನಾಲ್ಕು ದಿನ ನಮ್ಮಿಂದ ದೂರ ಹೊರಗೆ ಹೋಗಿಬಂದರೆ ಮನಸ್ಸು ತಿಳಿಯಾಗುತ್ತೆ. ಅವರು ಬಂದಮೇಲೆ ನಾವು ಹೋಗಿ ಬರುತ್ತೀವಿ."

ತಮ್ಮ ನಿಲುವನ್ನು ಬದಲಿಸಿಕೊಳ್ಳದೇ ಸ್ವಾರ್ಥಿಯಾಗಿಯೇ ಉಳಿಯದೇ, ತ್ಯಾಗದಲ್ಲಿ ಸುಖವಿದೆ ಎಂದು ಮನಗಂಡಿರಬಹುದು. ಮಕ್ಕಳಿಲ್ಲದ ತಂಗಿಗೆ ವೇಣುವನ್ನು ಕೊಟ್ಟರು. ಅದರಿಂದ ಮನಸ್ಸಿಗೆ ತಳಮಳವಾಗಿರಬಹುದು ಎಂದು ಗೋಪಿ ಚಿಂತಿಸಿದರೆ, ತಮ್ಮ ಹಿಂದೆ ನಾಟಕವನ್ನಾಡಿ, ತಮ್ಮಿಂದ ತಮಗೇ ತಿಳಿಯದಂತೆ ಒಪ್ಪಿಗೆ ಪಡೆದ ಗೋಪಿ.... ತಾನೂ ತಪ್ಪು ಮಾಡಿದ್ದೆ. ಈಗ ಗೋಪಿ ಮಾಡಿರುವುದೂ ತಪ್ಪೇ..... ನನಗೆ ಬುದ್ಧಿ ಕಲಿಸಲು ಹೊರಟವನಲ್ಲವೇ?. ಈಗ ಗೋಪಿಗೆ ತಾನು ಬುದ್ಧಿಕಲಿಸಬೇಕು. ವೇಣುವನ್ನು ಸರಿದಾರಿಗೆ ತರುವುದು ಸುಲಭವಲ್ಲ. ಆ ಕೆಲಸದಲ್ಲಿ ಗೋಪಿ ಯಶಸ್ವಿಯಾದರೆ, ನಾನು ನಡೆದುದನ್ನೆಲ್ಲಾ ಮರೆಯಬಲ್ಲೆ..... ಪರಶುರಾಮರ ಪೋಲಿಸರ ಬುದ್ಧಿ ಹೀಗೆ ತರ್ಕಿಸುತ್ತಿತ್ತು. ಪಕ್ಕದಲ್ಲಿ ಕುಳಿತಿದ್ದ ಮೈಥಿಲಿಯ ಕಡೆ ನೋಡಿದಾಗ, ಹೀನಾಯವೆನಿಸಿತ್ತು.

ಮೈಥಿಲಿಗೆ ತಿಳಿಸದಂತೆ, ವೇಣುವನ್ನು ಜಾನಕಿಗೆ ಕೊಡಲು ತನಗೆ ಯಾವ ಅಧಿಕಾರವೂ ಇರಲಿಲ್ಲ. ಆದರೂ ತಾನೇಕೆ ಹಾಗೆ ಮಾಡಿದೆ? ಅದೂ ತಪ್ಪೇ ತಾನೇ..... ನನ್ನಿಂದ ಮಗುವನ್ನು ಪಡೆದ ಜಾನಕಿ ಅವನನ್ನು ಸರಿಯಾಗಿ ಬೆಳೆಸಲಿಲ್ಲ. ಅದೂ ಮಹಾತಪ್ಪು.... ಅದು ತಿಳಿದಿದ್ದೂ ತಾನು ಸುಮ್ಮನಿದ್ದುದು ಇನ್ನು ತಪ್ಪು.

ಹೀಗೇ ತಪ್ಪುಗಳನ್ನೇ ವಿಧವಿಧವಾಗಿ ಆಲೋಚಿಸುತ್ತಾ ಕುಳಿತಿದ್ದ ಪರಶುರಾಮರಿಗೆ, ಏನೋ ಹಿಂಸೆಯಾಗಲಾರಂಭಿಸಿತು.

"ಯಾಕೋ ಊರಿಗೆ ವಾಪಸ್ಸು ಹೊರಟು ಹೋಗೋಣ ಅಂತನ್ನಿಸ್ತಿದೆ." ಎಂದು ಹೆಂಡತಿಯೊಡನೆ ಹೇಳಿದಾಗ ಅವಳು ಗಾಭರಿಗೊಂಡಳು.

"ಏನಾಯ್ತು? ಯಾರಾದ್ರೂ ಕಡಾಕ್ಟರ್‌ನ ಕನ್ಸಲ್ಟ್ ಮಾಡಬೇಕಾ?"

"ಇಲ್ಲ ಮೈಥಿಲಿ.... ನನ್ನ ಕರ್ತವ್ಯ, ನನ್ನ ನೌಕರಿಗಳಲ್ಲಿ ಮುಳುಗಿದ್ದವನಿಗೆ

ಮನೆಯ ಆಲೋಚನೆಯೇ ಇರಲಿಲ್ಲವೇನೋ ಅಂತನ್ನಿಸ್ತಿದೆ."

ತಪ್ಪು ಮಾಡಿದವರನ್ನು ಹಿಡಿದು, ಶಿಕ್ಷೆ ಕೊಡಿಸಿ ಅದನ್ನೇ ಸರಿ ಅಂತ ಸಾಧಿಸಿ, ಅಹಂಕಾರದಿಂದ ಮೆರೆಯುತ್ತಿದ್ದೆನಲ್ಲಾ..... ಆದರೆ ಈಗ ಅನ್ನಿಸ್ತಿದೆ ನಾವುಗಳೂ ತಪ್ಪು ಮಾಡಿದ್ದೇವೆ..... ಆದರೆ ನಮಗೆ ಹೇಳಿಕೊಳ್ಳುವ ಆಸೆಯಿಲ್ಲ. ಧೈರ್ಯವಿಲ್ಲ. ನಮ್ಮನ್ನು ಪ್ರಶ್ನಿಸುವವರೂ ಯಾರಿಲ್ಲ.......

"ಏನಾಗಿದೆ ನಿಮಗೆ ಇವತ್ತು? ಪ್ಲೇನಿನಲ್ಲಿ ಕುಳಿತಿರುವಾಗ ಉಳಿದ ಚಿಂತೆಯನ್ನು ಮರೆತು ಹಕ್ಕಿಯಂತೆ ಹಗುರವಾಗಿ ಹಾರಬೇಕು....."

"ಇಲ್ಲ ಮೈಥಿಲಿ ನಿನ್ನಂತೆ, ಹಾಯಾಗಿರಲು ನನ್ನಿಂದಾಗುತ್ತಿಲ್ಲ."

"ನಂಗೊತ್ತು. ನಿಮ್ಮನ್ನು ಅನೇಕ ಚಿಂತೆಗಳು ಬಾಧಿಸುತ್ತಿವೆ. ಗೋಪಿ ವನಜಳನ್ನು ಮದುವೆಯಾದದ್ದು. ನಿಮಗಾದ ಭಾರಿ ಸೋಲು ಅಂತನ್ನಿಸ್ತಿದೆ. ಅಲ್ಲವೇ......"

ನನಗೆ ತಿಳಿಯದಂತೆ ನೀವೆಲ್ಲಾ ಒಂದಾಗಿ, ನಾಟಕವನ್ನಾಡಿ ನನ್ನನ್ನು ಮೂರ್ಖನನ್ನಾಗಿ ಮಾಡಿದ್ದು ತಪ್ಪು ತಾನೇ........?

"ನಿಮಗೆ ಹೇಗೆ ಗೊತ್ತಾಯ್ತು? ಅವಳು ಅಧೀರಳಾದಳು."

"ಮದುವೆ ಮಂಟಪದಲ್ಲೇ ನನಗೆ ಆ ಅನುಮಾನಬಂತು.... ಎಲ್ಲರೆದುರಿಗೆ ವಿರೋಧಿಸುವಂತಿರಲಿಲ್ಲ. ಆದರೆ ವೇಣು ಮಾಡಿದ ತಪ್ಪು ನನ್ನ ಬಾಯಿ ಮುಚ್ಚುವಂತೆ ಮಾಡಿಬಿಟ್ಟಿತು. ಅವನು ಹೇಡಿಯಂತೆ ಅಲ್ಲಿಂದ ತಪ್ಪಿಸಿಕೊಂಡು ಓಡಿ ಹೋಗಬಾರದಾಗಿತ್ತು. ಬ್ಲಾಕ್‌ಮೇಲ್ ಮಾಡುವ ದುರ್ಬುದ್ಧಿ ಏಕೆ ಬಂತು?" ವೇಣು ಮಾಡಿದ ತಪ್ಪನ್ನು ಗೋಪಿ ಏಕೆ ಮುಚ್ಚಿಡಲು ಯತ್ನಿಸಿದ?

"ಎಷ್ಟಾಗಲೀ ನೀವುಗಳು ಪೋಲಿಸಿನವರು, ಅಂತ ಹೆದರಿರಬಹುದು. ಅಥವಾ ನಿಮಗೆ ಬುದ್ಧಿ ಕಲಿಸಲು ಹೀಗೆ ಮಾಡಿರಬಹುದು."

"ಅವನು ವನಜಳ ಜತೆ ಹಾಗೆ ವರ್ತಿಸಿದ್ದೆ ತಪ್ಪು.. ಅದನ್ನು ಮುಚ್ಚಿಟ್ಟು ಕೊಳ್ಳಲು ಓಡಿ ಹೋದದ್ದು ಮತ್ತು ತಪ್ಪು..... ನನ್ನನ್ನೇ ದುಡ್ಡು ಕೇಳಿದ್ದರೇ........"

"ಆ ಮಾತೇಕೆ ಈಗ? ಮನುಷ್ಯ ಒಂದಲ್ಲ ಒಂದು ತಪ್ಪು ಮಾಡುತ್ತಲೇ ಇರುತ್ತಾನೆ. ಮರೆತು ಕ್ಷಮಿಸಿದರೆ ಎಲ್ಲಾ ಸರಿ ಹೋಗುತ್ತೆ......"

"ನಾನೂ ಒಂದು ಭಾರಿ ತಪ್ಪು ಮಾಡಿಬಿಟ್ಟಿದೀನಿ ಮೈಥಿಲಿ, ನನ್ನನ್ನು ನೀನು ಕ್ಷಮಿಸ್ತೀಯಾ?" ಇದ್ದಕ್ಕಿದ್ದಂತೆ ಪೋಲಿಸ್ ಅಧಿಕಾರಿಗಳು ದೈನ್ಯದಿಂದ ಕೇಳಿದಾಗ ಮೈಥಿಲಿ ಮುಗುಳ್ನಕ್ಕಳು.

"ಯಾಕೆ ನಗ್ತೀಯ ಮೈಥಿಲಿ..... ನಾನು ಮಾಡಿರುವ ತಪ್ಪು ಏನೂಂತ

ಕೇಳುವುದಿಲ್ಲವಾ?"

"ಅದೇನು ಅಂತ ನನಗೆ ಗೊತ್ತು....."

"ಇಲ್ಲ. ನಿನಗೆ ಗೊತ್ತಿಲ್ಲ. ವೇಣು ನಮ್ಮ ಮಗ. ಅವನನ್ನು ನಿನಗೆ ತಿಳಿಯದಂತೆ ಜಾನಕಿಗೆ ಕೊಟ್ಟು ಬಿಟ್ಟೆ.... ನಿನಗೆ ದ್ರೋಹ ಮಾಡಿಬಿಟ್ಟೆ" ಮೈಥಿಲಿ ಆಶ್ಚರ್ಯಗೊಳ್ಳದೆ ಮುಗುಳ್ನಕ್ಕಾಗ ಅವರಿಗೆ ಷಾಕ್.

ನನಗೆ ಈ ವಿಷಯ ತಿಳಿದಿತ್ತು. ನಿಮ್ಮ ತಂಗಿಗೇ ತಾನೇ ನೀವು ಮಗುವನ್ನು ಕೊಟ್ಟದ್ದು ಜಾನಕಿಯೂ ನಮ್ಮವಳೇ ತಾನೇ?

"ನಿನಗೆ ಹೇಗೆ ತಿಳಿಯಿತು?"

ನಾನು ಒಬ್ಬ ಪೋಲಿಸ್ ಅಧಿಕಾರಿಯ ಪತ್ನಿ. ನನ್ನ ಮಗನೂ ಒಬ್ಬ ಪೋಲಿಸ್ ಅಧಿಕಾರಿ. ನನ್ನಿಂದ ಯಾವ ರಹಸ್ಯವನ್ನು ಮುಚ್ಚಿಡುವಂತಿಲ್ಲ. ಅವಳು ಮತ್ತೆ ಮುಗುಳ್ನಕ್ಕಾಗ ಪೆಚ್ಚಾದರು.

"ವಿಷಯ ತಿಳಿದಿದ್ದೂ ನೀನೇಕೆ ಸುಮ್ಮನಿದ್ದೆ! ನನ್ನನ್ನು ತರಾಟೆಗೆ ತಗೋ ಬಹುದಾಗಿತ್ತಲ್ಲ......."

ನಾನೂ ತಪ್ಪು ಮಾಡಿದ್ದೆ. ನಿಮಗೆ ತಿಳಿಯದಂತೆ ಗೋಪಿಗೆ ಸಹಾಯ ಮಾಡಿದ್ದೆ. ಅದೂ ನನ್ನನ್ನು ಕೊರೆಯುತ್ತಿತ್ತು. ಇಬ್ಬರೂ ಒಬ್ಬರನ್ನೊಬ್ಬರು ನೋಡಿಕೊಂಡು ಮುಗುಳ್ನಕ್ಕರು. ತಪ್ಪನ್ನು ಒಪ್ಪಿಕೊಂಡ ಸಮಾಧಾನದ ಕಳೆ ಅವರಿಬ್ಬರ ಮುಖದಲ್ಲಿ ಕಂಡಿತ್ತು.

ದಿಢೀರನೇ ವಾಪಸ್ಸಾದ ತಂದೆ ತಾಯಿಗಳನ್ನು ಕಂಡು ಗೋಪಿ ಅಧೀರನಾದ. ಅವನ ಕಳವಳವನ್ನು ಕಂಡು ನುಡಿದರು. "ಯಾವ ಪ್ರವಾಸವೂ ಬೇಡ. ನಿಮ್ಮೆಲ್ಲರ ಜತೆಯಲ್ಲಿ ಹಾಯಾಗಿ ಕಾಲ ಕಳೆಯೋಣ ಅಂತನ್ನಿಸ್ತು. ತಕ್ಷಣವೇ ವಾಪಸ್ಸು ಹೊರಟು ಬಂದೆವು." ಅವರ ಮುಖದ ನೆಮ್ಮದಿಯನ್ನು ಕಂಡು ಎಲ್ಲರಿಗೂ ಹಾಯೆನ್ನಿಸಿತ್ತು.

ಆದರೆ ವನಜಾ ಮಾತ್ರ ಅಧೀರಳಾದಳು. "ನಂಗ್ಯಾಕೋ ಭಯವಾಗುತ್ತೆ ಗೋಪಿ. ನಿಮ್ಮ ತಂದೆಗೆ ನಮ್ಮ ಮದುವೇನೇ ಇಷ್ಟವಿರಲಿಲ್ಲ. ಈಗ ನಮ್ಮಿಬ್ಬರನ್ನು ಒಟ್ಟಿಗೇ ಇರಲು ಬಿಡದಿದ್ದರೇ..... ನೀನೆಷ್ಟು ಸತಾಯಿಸಿದರೂ ನಾನ ನಿನ್ನನ್ನೇ ಮದುವೆಯಾದೆ.... ಈಗ ಏನಾಗುತ್ತೋ ಏನೋ?"

"ಛಿ..... ಏನೇನೋ ಮಾತನಾಡಬೇಡ. ನಮ್ಮಪ್ಪ ಏನೂ ಅಷ್ಟು ಕೆಟ್ಟವರಲ್ಲ. ಅವರ ಮನಸ್ಸಿಗೆ ಘಾಸಿ ಆಗಿರುವುದಂತೂ ಖಂಡಿತಾ. ಇದೊಂದೇ ಕಾರಣ ಅಲ್ಲ. ವೇಣು ಬಗ್ಗೆ ತುಂಬಾ ಹಚ್ಚಿಕೊಂಡು ಬಿಟ್ಟಿದ್ದಾರೆ. ಅವನು

ಹೀಗಿರುವುದಕ್ಕೇ ತಾನೇ ಕಾರಣ ಅಂತ ಕೊರಗುತ್ತಿರಬಹುದು."

"ಏನೂ ಇಲ್ಲ. ಕೊರಗು ಗಿರುಗು ಎಲ್ಲಾ ನಿಮ್ಮಂತಹವರಿಗಿರುವುದಿಲ್ಲ."

"ಏಕೆ! ನಾವು ಮನುಷ್ಯರಲ್ಲವೇ....."

"ಮನುಷ್ಯರೇ.... ಆದರೆ ಹೃದಯ, ಮಾತ್ರ ಕಠಿಣ. ನಿಮ್ಮಪ್ಪನ ಹೃದಯ ಕಠಿಣವಲ್ಲದಿದ್ದರೇ..... ಯ್ಯಾರಾದ್ದರೂ ಹುಟ್ಟಿದ ಮಗುವನ್ನು ತಾಯಿಯಿಂದ ಬೇರ್ಪಡಿಸುತ್ತಾರಾ?"

"ತಂಗಿಯ ಮೇಲಿನ ಪ್ರೀತಿಗೆ ಹಾಗೆ ಮಾಡಿರಬಹುದು."

"ಹಾಗಾದರೆ ನಿಮ್ಮಂಥೋರಿಗೆಲ್ಲಾ ಹೆಂಡತಿ ಮೇಲೆ ಪ್ರೀತಿ ಕಡಿಮೆ ಅಂತಾಯ್ತು..... ನೀನೂ ಹೀಗೇ ಮಾಡ್ತೀಯೋ ಏನೋ?"

ಗೋಪಿ ಮನಸಾರೆ ನಕ್ಕ. ಹಾಗಾದರೆ ನಮಗೆ ಮಕ್ಕಳೇ ಬೇಡ ಬಿಡು. ಆಗ ನಿನಗೆ ಯಾವ ಸಂದೇಹವೂ ಇರುಲ್ಲ. ದೇಶದ ಪ್ರಜಾ ಸಂಖ್ಯೆಯೂ ದಿನ ದಿನಕ್ಕೆ ಜಾಸ್ತಿಯಾಗುತ್ತಿದೆ.... ವನಜಾ ಪೆಚ್ಚಾದಳು. ಗೋಪಿಯ ತರ್ಕ ಅವಳಿಗ್ಗೆ ಹಿಡಿಸಲಿಲ್ಲ.

"ನೀವು ಜನಸಂಖೆಯ ಕಡಿಮೆ ಮಾಡ್ತೀನಿ ಅಂತ ಪ್ಲಾನ್ ಮಾಡಿದರೆ, ಒಬ್ಬ ಪೋಲಿಸ್ ಅಧಿಕಾರಿಯ ಸಂಖ್ಯೆಯೂ ಕಡಿಮೆಯಾಗುತ್ತಲ್ಲಾ....."

"ಬೇಡ ವನಜಾ..... ಈ ಕಳ್ಳ ಪೋಲಿಸ್ ಆಟ ಸಾಕಾಗಿದೆ. ನಮ್ಮಪ್ಪನ ತರಹ ನನಗೆ, ನನ್ನ ಮಗನೂ ಪೋಲಿಸ್ ಅಧಿಕಾರಿಯಾಗಲಿಂತ ಯಾವ ಆಸೆಯೂ ಇಲ್ಲ. ನಮ್ಮ ಮಕ್ಕಳು ಬೆಳೆದು ದೊಡ್ಡವರಾಗಿ, ಅವರು ಯಾವ ಕ್ಷೇತ್ರವನ್ನು ಇಷ್ಟಪಡುತ್ತಾರೋ, ಅದನ್ನೇ ಓದಲಿ. ಅದರಲ್ಲೇ ಮುಂದೆ ಬರಲಿ. ಆಗ ಹೀಗೆ ನಮಗೆ ಒದಗಿದಂತೆ ಸಮಸ್ಯೆಗಳು ಒದಗಿ ಬರುವುದಿಲ್ಲ."

"ಮಕ್ಕಳೇ ಬೇಡ ಅಂತ ಈಗ್ತಾನೇ ಹೇಳಿದೆ......"

"ಇವತ್ತೇ ಈಗಲಿಂದ ಈ ವಿಷಯಗಳಿಗೆ ತಲೆಕೆಡಿಸಿಕೊಂಡು ಜಗಳ ಆಡಬೇಕಾ? ಮುಂದೆ ಆಲೋಚಿಸೋಣ....."

"ನಿಮ್ಮ ತಾಯಿ ಯಾವ ವಿಷಯಕ್ಕೂ ನಿಮ್ಮ ತಂದೆ ಹತ್ತಿರ ಜಗಳವನ್ನೇ ಆಡುವುದಿಲ್ಲವಾ?"

"ನನ್ನ ಅಮ್ಮ ಜಾಣೆ. ಅವಳಿಗೆ ಸಹನೆ ಜಾಸ್ತಿ. ಸಮಯ ನೋಡಿ, ಕೆಲಸ ಸಾಧಿಸುವ ಬುದ್ಧಿವಂತಿಕೆ. ಅವಳೆಂದೂ, ಅಪ್ಪನನ್ನೂ ಹುಡುಕಿಕೊಂಡು ಪೋಲಿಸ್ ಸ್ಟೇಷನ್‌ಗೆ ಹೋಗಲಿಲ್ಲ. ಅವರು ಮನೆಗೆ ಬರುವವರೆಗೂ ಸಹನೆಯಿಂದ ಕಾಯುತ್ತಿದ್ದಳು." ಅವನ ವ್ಯಂಗ್ಯ ಅವಳಿಗೆ ಅರ್ಥವಾಗಿತ್ತು.

"ಅವರಿಗೆ ಅಂತಹ ಸಂದರ್ಭ ಬರಲೇ ಇಲ್ಲ. ಇನ್ನು ಮೇಲೆ ನಾನೂ ನಿನ್ನನ್ನು ಹುಡುಕಿಕೊಂಡು ಬರುವುದಿಲ್ಲ. ಪೋಲಿಸ್ ಸ್ಟೇಷನ್‌ನಲ್ಲೇ ಇರು. ನನಗೇನಂತೆ?" ಅವಳು ಸಿಡುಕಿ ನುಡಿದಳು.

"ಇದೇ ನನಗೆ ಇಷ್ಟವಿಲ್ಲ. ಮಾತು ಮಾತಿಗೂ ಜಗಳಮಾಡ್ತೀಯಲ್ಲಾ? ಹೊರಗೆ ಮನೆಯವರೆಲ್ಲಾ ಏನಂದುಕೊಳ್ತಾರೆ. ಪೋಲಿಸ್ ಅಧಿಕಾರಿಯಂತೆ! ಒಬ್ಬ ಹೆಂಡತಿಯನ್ನು ಅಧೀನದಲ್ಲಿಟ್ಟುಕೊಳ್ಳೊಕ್ಕೆ ಆಗುಲ್ಲ ಅಂತ ಅಂದುಕೊಳ್ಳುಲ್ಲವಾ?"

"ನಾನು ಹೀಗೇನೇ. ನಿನಗೆ ಇಷ್ಟವಿದ್ದರೆ ನನ್ನ ಜತೆ ಇರು. ಇಲ್ಲದಿದ್ದರೆ ನನಗೆ ಡೈವೋರ್ಸ್ ಕೊಡು....." ಗೋಪಿ ನಕ್ಕು ನುಡಿದ.

ನಾಲ್ಕೇ ದಿನಕ್ಕೆ ನನ್ನ ಸಹವಾಸ ನಿನಗೆ ಬೇಜಾರಾಯಿತಾ? ನನ್ನ ಪಾಡಿಗೆ ನಾನು ಹಾಯಾಗಿದ್ದೆ. ನನ್ನನ್ನು ಸತಾಯಿಸಿ, ನನ್ನ ಹಿಂದೆ ತಿರುಗಿ, ನನ್ನನ್ನು ಬಲವಂತದಿಂದ ಮದುವೆಯಾದವಳು ನೀನು.... ಅಪ್ಪನಿಗೆ ಈ ವಿಷಯ ತಿಳಿದರೆ ಆಯ್ತು. ಮತ್ತೆ ಈ ಮನೆಗೆ ಕಾಲಿಡುವಂತಿಲ್ಲ. ವನಜಾ ಮೆತ್ತಗಾದಳು. ಆದರೂ ಮತ್ತೆ ಅಸಹನೆಯಿಂದ ನುಡಿದಳು.

"ಮೊದಲಿನಂತೆ ಹಾಯಾಗಿ ಮಾತನಾಡಿ ನಿನ್ನನ್ನು ರೇಗಿಸುವಂತಿಲ್ಲ. ಅದೇ ಚೆನ್ನಾಗಿತ್ತೇನೋ ಅಂತನ್ನಿಸ್ತಿದೆ." ಅಂತ ಅಂದಳು......

ಅದೇ ಚೆನ್ನಾಗಿತ್ತು. ಆದರೆ ಅವಾಂತರ ಪಟ್ಟವಳು ನೀನೇ...... ಈಗ ಏನೂ ಮಾಡುವಂತಿಲ್ಲ. ನಾವು ಮತ್ತೆ ಹಿಂದಕ್ಕೆ ಹೋಗುವಂತಿಲ್ಲ......

"ಹಾಗೇ ಆಗುವುದಿದ್ದರೆ ಎಷ್ಟು ಚೆನ್ನಾಗಿತ್ತು. ನಾವೂ ಚಿಕ್ಕ ಮಕ್ಕಳಂತೆ ಆಟವಾಡಿಕೊಂಡು ಹಾಯಾಗಿರಬಹುದಾಗಿತ್ತು..... ಅಲ್ವಾ"

"ಆದರೆ ಒಂದು ಮಾತಂತೂ ನಿಜ..... ಆ ದಿನದಂತೆ ಮಳೇಲಿ ನೆನೆಯುತ್ತಾ ನೀನು ನಿಂತಿರುವುದನ್ನು ಕಂಡರೂ, ನಾನೂ ನಿನ್ನನ್ನು ನಮ್ಮ ಮನೆಗೆ ಕರೆದುಕೊಂಡು ಬರುವ ತಪ್ಪು ಮಾತ್ರ ಮಾಡುವುದಿಲ್ಲ." ಎಂದ ಅವನ ತಮಾಷೆ ತಕ್ಷಣಕ್ಕೆ ಅರ್ಥವಾಗಲಿಲ್ಲ ಅವಳಿಗೆ, ಅವಳನ್ನು ತನ್ನೆಡೆಗೆ ತಿರುಗಿಸಿಕೊಂಡು ಗೋಪಿ ಮನಸಾರೆ ನಕ್ಕ.

* * * * *

# ಹೊಸ ಪ್ರಕಟಣೆಗಳು

1. ಬಾಳೆಂಬ ಕಡಲಲ್ಲಿ ಪ್ರೊ. ಗಾಯತ್ರಿಮೂರ್ತಿ ಕಾದಂಬರಿ ರೂ 36
   ಮತ್ತು ಫಲಿತಾಂಶ
೨. ಕಸ್ತೂರಿ ಮೃಗ ಡಾ|| ಮ.ಸು.ಕೃಷ್ಣಮೂರ್ತಿ ಕಾದಂಬರಿ, ರೂ 45
೩. ಬೆಟ್ಟಕೆ ಚಳಿಯಾದಡೆ,ಡಾ||ಮ.ಸು.ಕೃಷ್ಣಮೂರ್ತಿ,ಕಥಾಸಂಕಲನ ರೂ 36
೪. ಪುನರಾಗಮನ ಡಾ||ಮ.ಸು.ಕೃಷ್ಣಮೂರ್ತಿ ಕಥಾಸಂಕಲನ, ರೂ 36
೫. ಕುತೂಹಲ ವಿಜ್ಞಾನ ಡಾ|| ಎ.ಹೆಚ್.ಶಿವಾನಂದ ವಿಜ್ಞಾನ, ರೂ 45
೬. ಗೀತಾ ತತ್ವಾರ್ಥಸಾರ ಲಕ್ಷ್ಮೀನಾರಾಯಣನ್ ತತ್ವಶಾಸ್ತ್ರ ರೂ 48
೭. ಪ್ರೀತಿಯ ಗೆಲವು ಪ್ರೊ. ಗಾಯತ್ರಿಮೂರ್ತಿ ಮಕ್ಕಳ ಕಾದಂಬರಿ ರೂ 25
೮. ಆಕಾಶಗಂಗೆ ಡಾ|| ಎ.ಹೆಚ್.ಶಿವಾನಂದ ವಿಜ್ಞಾನ ರೂ 12
೯. ಮಾಹೇಶ್ವರ ಮಹಿಮೆ ಸುಲೋಚನಾ ಶಾಸ್ತ್ರಿ ಧಾರ್ಮಿಕ ರೂ 25
೧೦. ಪ್ರೀತಿವಾಹಿನಿ
೧೧. ಜಾನಪದ ಗೀತೆಗಳು ಸುಗಂಧ ರಾಣಿ ರೂ 15
೧೩. ಸಂತ ನರಸೀ ಮೆಹತಾ ಡಾ||ಮ.ಸು.ಕೃಷ್ಣಮೂರ್ತಿ ರೂ 40
೧೪. ಚತುರ್ಮುಖ ಕಾದಂಬರಿ ಡಾ||ಮ.ಸು.ಕೃಷ್ಣಮೂರ್ತಿ ರೂ 32
೧೫. ಸಮುದ್ರ ಸಂಗಮ ಡಾ||ಮ.ಸು.ಕೃಷ್ಣಮೂರ್ತಿ ರೂ 60
೧೬. ಮಧುರ ಮೋಹನ–ಪದ್ಮಾ ಶ್ರೀಧರ್ ರೂ 50
೧೭. ಮುಖವಾಡ–ಪದ್ಮಾ ಶ್ರೀಧರ್ ರೂ 60
೧೮. ಬೇರು ಮುರಿದ ಮರ– ವಿಜಯ ಚಂದ್ರಮೌಳೇಶ್ವರ ರೂ 45
೧೯. ಶುಭೋದಯ– ವಿಜಯ ಚಂದ್ರಮೌಳೇಶ್ವರ ರೂ 20
೨೦. ಅಧ್ಯಾತ್ಮ ವಾಹಿನಿ– ಪ್ರೊ|| ಡಿ.ಎಲ್.ಪಾಟೀಲ್ ರೂ. 60
೨೧. ಶರಣರ ನಾಟಕಗಳು– ಸಿಂಧೂರಿ ರೂ 20
೨೨. ಭಾವತರಂಗ– ಸಿಂಧೂರಿ ರೂ 20
೨೩. ಎರಡು ಒರಿಯಾ ನಾಟಕಗಳು–ಪರಮೇಶ ರೂ 40
೨೪. ಸೌಂದರ್ಯಮಿಮಾಂಸೆ – ಪ್ರೊ|| ಡಿ.ಎಲ್.ಪಾಟೀಲ್ ರೂ. 40



ಶ್ರೀಮತಿ **ಪದ್ಮಾಶ್ರೀಧರ್** ಅವರ ಮತ್ತೊಂದು ಕಾದಂಬರಿ ' **ಮುಖವಾಡ**'

ಶ್ರೀಮತಿ **ಪದ್ಮಾಶ್ರೀಧರ್** ಅವರ ಚೊಚ್ಚಲ ಕಾದಂಬರಿ '**ಮಧುರ ಮೋಹನ**' 'ಮಂಗಳ' ವಾರ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿ ಕರ್ನಾಟಕದಾದ್ಯಂತ ಓದುಗರ ಮೆಚ್ಚುಗೆಯನ್ನೂ, ಪ್ರಶಂಸೆಯನ್ನೂ ಗಳಿಸಿತು. ಸರಳ ಸುಂದರ ಸನ್ನಿವೇಶಗಳನ್ನೊಳಗೊಂಡ, ಸುಂದರ ಸಾಂಸಾರಿಕ ಚಿತ್ರಣ ವೆಂದು ಅಭಿಮಾನದಿಂದ ಜನಪ್ರಿಯವಾಯಿತು. ಅದು ಈಗ ಪುಸ್ತಕ ರೂಪ ದಲ್ಲಿಯೂ ಹೊರಬಂದಿದೆ.

ಅವರ ಇನ್ನೊಂದು ಕಾದಂಬರಿ '**ಸತ್ಯವಾನನಿಲ್ಲದ ಸಾವಿತ್ರಿ**' ಯು '**ಕನ್ನಡ ಪ್ರಭ**' ದಲ್ಲಿ ಧಾರಾವಾಹಿಯಾಗಿ ಬಂದು, ಪುಸ್ತಕ ರೂಪದಲ್ಲಿಯೂ ಹೊರಬಂದಿದೆ.

ಅವರ ಇತರ ಕಾದಂಬರಿಗಳು '**ಅನಿರೀಕ್ಷಿತ**', '**ಚಿತ್ರಾಂಗದೆ**', '**ಪಥ**', '**ಆಸರೆ**' ಪ್ರಕಟಣೆಗೆ ಸಿದ್ಧವಾಗುತ್ತಿವೆ.

ಅವರ ಕೆಲವು ಕಥೆಗಳು ಪ್ರಕಟವಾಗಿದ್ದು–ಬಹುಮಾನ ಪಡೆದಿವೆ. ಲೇಖಕಿಯರ ಪರಿಷತ್‌ನವರ ಬಹುಮಾನ ಪಡೆದಿದ್ದಾರೆ.

**ಮಂಜುಶ್ರೀ ಪ್ರಕಾಶನ, ಮೈಸೂರು-೮, ರೂ. ೫೮/-**

ISBN-81-86675-11-6